ಮನೋಹರ ಗ್ರಂಥಮಾಲೆಯ ೪೩ನೆಯ ಕುಸುಮ

# ಗಾಳಿಗೋಪುರ

(ಸಾಮಾಜಿಕ ಕಾದಂಬರಿ)

ಕಟ್ಟಿದವರು:

ನಾ. ಕಸ್ತೂರಿ

ಎಂ.ಎ.ಬಿ.ಎಲ್.

ಮನೋಹರ ಗ್ರಂಥಪ್ರಕಾಶನ ಸಮಿತಿ

— ಧಾರವಾಡ —

ಆಗಸ್ಟ, ೧೯೪೦ — ಬೆಲೆ: ೧—೪—೦

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು :
ಶ್ರೀ. ದ. ರಾ. ಬೇಂದ್ರೆ, ಎಂ. ಎ.
ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ ಟಿ.
ಶ್ರೀ. ವಿ. ಕೃ. ಗೋಕಾಕ, ಬಿ. ಎ. (ಆಕ್ಸಫರ್ಡ)

●



ಸಂಪಾದಕ :
ಜಿ. ಬಿ. ಜೋಶಿ



●

ಪ್ರಕಾಶಕರು :
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ



●



●

ಮುದ್ರಕರು :
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ಕೃತಜ್ಞತೆ



ನಮ್ಮ ಗ್ರಂಥಮಾಲೆಗೆ ಈಗ ಏಳನೆಯ ವರುಷ ಮುಗಿದು, ಈ 'ಗಾಳಿಗೋಪುರ'ದಿಂದ ಎಂಟನೆಯ ವರುಷ ಪ್ರಾರಂಭವಾಗುತ್ತಿದೆ. ಈ ಹೊತ್ತಿನಲ್ಲಿ ಈ ಗ್ರಂಥಮಾಲೆಯು ಇಷ್ಟು ವರುಷಗಳವರೆಗೆ ಬದುಕಿ ಬೆಳೆದು ದೊಡ್ಡದಾಗುವಂತೆ ಸಂರಕ್ಷಿಸಿ. ಪೋಷಿಸಿ, ಲಾಲನೆ-ಪಾಲನೆ ಮಾಡಿದ ಮಹನೀಯರೆಲ್ಲರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುವುದು ನಮ್ಮ ಕರ್ತವ್ಯವಾಗಿದೆ.

ಮೊದಲನೆಯದಾಗಿ ಈ ಗ್ರಂಥಮಾಲೆಯನ್ನು—ಒಬ್ಬ ತಾಯಿ ತನ್ನ ಕೂಸನ್ನು ಸಲಹುವ ರೀತಿಯಲ್ಲಿ—ತಮ್ಮ ತನು-ಮನ-ಧನದಿಂದ ಪೋಷಿಸುತ್ತಿರುವ ನಮ್ಮ **ಮೂವರು ಸಲಹೆಗಾರರಿಗೆ** ನಾವು ಎಷ್ಟು ಕೃತಜ್ಞರಾಗಿದ್ದರೂ ಕಡಿಮೆಯೆ. ಯಾರ ಋಣವನ್ನೂ ತೀರಿಸಬಹುದಂತೆ, ತಾಯಿಯ ಋಣವನ್ನು ತೀರಿಸಲಸಾಧ್ಯವಂತೆ. ಅಷ್ಟು ದೊಡ್ಡದು ಅದು.

ಈ ಗ್ರಂಥಮಾಲೆಗೆ ತಮ್ಮ ಒಳ್ಳೆಯ ಗ್ರಂಥಗಳನ್ನು ಬರೆದುಕೊಟ್ಟು ಅಖಿಲಕರ್ನಾಟಕದಲ್ಲಿ ಇದಕ್ಕೊಂದು ಮೇಲ್ಮೆಯ ಹಿರಿಮೆಯ ಸ್ಥಾನವು ಬರುವಂತೆ ಮಾಡಿದ **ನಮ್ಮ ಬರೆಹಗಾರರೆಲ್ಲರಿಗೂ** ನಾವು ಅತ್ಯಂತ ಉಪಕೃತರಾಗಿದ್ದೇವೆ.

ಎಂತಹ ಆರ್ಥಿಕ ಮುಗ್ಗಟ್ಟು ಬಂದರೂ ಧೈರ್ಯ ಬಿಡದೆ ನಾವು ಮುಂದೆ ಸಾಗುವಂತೆ ಸಹಾಯಮಾಡಿದ ನಮ್ಮ **ಪೋಷಕರಿಗೂ ಸಹಾಯಕರಿಗೂ ಚಂದಾದಾರರಿಗೂ** ನಮ್ಮ ನೆನೆಕೆಗಳನ್ನು ಸಲ್ಲಿಸದೆ ಇರಲಾರೆವು.

ಗ್ರಂಥಮಾಲೆಯ ಇತ್ತೀಚಿನ ಕೆಲವು ಪುಸ್ತಕಗಳ ಮತ್ತು ಬಿಡಿಮುತ್ತುಗಳ ಹೊದಿಕೆ-ಚಿತ್ರಗಳನ್ನು ಬರೆದುಕೊಟ್ಟ ಶ್ರೀಮಾನ್ ರಾಘವೇಂದ್ರರಿಗೂ, ಇದೆ 'ಗಾಳಿಗೋಪುರ'ಕ್ಕೆ ಹೊದಿಕೆ-ಚಿತ್ರ ಬರೆದುಕೊಟ್ಟ ಸುಪ್ರಸಿದ್ಧ ಕತೆಗಾರರಾದ 'ಆನಂದ'ರಿಗೂ ನಾವು ಚಿರಋಣಿಗಳಾಗಿದ್ದೇವೆ.

ನಮ್ಮ ಗ್ರಂಥಮಾಲೆಗೆ ತಮ್ಮ 'ಗಾಳಿಗೋಪುರ' ಎಂಬ ಈ ಸ್ವಾರಸ್ಯವಾದ ಕೃತಿರತ್ನವನ್ನು ಕೊಟ್ಟುದಕ್ಕಾಗಿ ಶ್ರೀಮಾನ್ ನಾ. ಕಸ್ತೂರಿಯವರಿಗೂ ಇದಕ್ಕೆ 'ನಲ್ನುಡಿ' ಬರೆದುಕೊಟ್ಟುದಕ್ಕಾಗಿ ಶ್ರೀಮಾನ್ ದ. ರಾ. ಬೇಂದ್ರೆಯವರಿಗೂ ನಾವು ಎಷ್ಟು ಕೃತಜ್ಞರಾಗಿದ್ದೇವೆಂಬುದನ್ನು ಶಬ್ದಗಳು ತಿಳಿಸಲಾರವು.

—ಸಂಪಾದಕ

ಶ್ರೀಮಾನ್ ನಾ. ಕಸ್ತೂರಿಯವರ

ಕನ್ನಡ ಗ್ರಂಥಗಳು

—❖—

| | | | |
|---|---|---|---|
| ದಿಲ್ಲೀಶ್ವರನ ದಿನಚರಿ (ದಿನಚರಿ) | ೦ | ೧೨ | ೦ |
| ಪಾತಾಳದಲ್ಲಿ ಪಾಪಚ್ಚಿ | ೧ | ೦ | ೦ |
| ಯದ್ವಾತದ್ವಾ (ಹಾಸ್ಯಚಿತ್ರಗಳು) | ೦ | ೬ | ೦ |
| ಮದುವೆ (ಪ್ರಬಂಧ) | ೦ | ೨ | ೦ |
| ಗಾಳಿಗೋಪುರ | ೧ | ೪ | ೦ |

# ನಲ್ನುಡಿ



## ಶ್ರೀಮಾನ್ ಕಸ್ತೂರಿಯವರ ಲಶುನರಸಾಯನ.

ಕತ್ತೆ ಕಿರಿಚಿದಡಲ್ಲಿ, ತೊತ್ತು ಹಾಡಿದಡಲ್ಲಿ,
ಮತ್ತೆ ಕುಲರಸಿಕನಿರುವಲ್ಲಿ, ನಗೆಯ
ಹುತ್ತ ಕಾಣಯ್ಯ............ —ಹೇಳಿಕೇಳಿ ಸರ್ವಜ್ಞ

ಘಟಂ ಭಿಂದ್ಯಾತ್ ಪಟಂ ಛಿಂದ್ಯಾತ್ ಕುರ್ಯಾದ್ವಾ ರಾಸಭಧ್ವನಿಮ್ ।
ಯೇನಕೇನಪ್ರಕಾರೇಣ ಪ್ರಸಿದ್ಧ ಪುರುಷೋ ಭವೇತ್ ॥ —ಭಾಷಿತ



ನನ್ನ ಗೆಳೆಯರಾದ ಶ್ರೀಮಾನ್ ಕಸ್ತೂರಿಯವರು ತಮ್ಮ ಗಾಳಿ-ಗೋಪುರದ ಸಾಹಿತ್ಯಕ್ಕೆ ನಾನೊಂದು ಶಬ್ದ-ಮುಖ-ಚಿತ್ರ ಬರೆಯಬೇಕು ಎಂದು ಬಯಸಿದ್ದಾರೆ. ನಾನು ಆ ಕಾರ್ಯವನ್ನು ಯಥಾಮತಿಯಾಗಿ ಸಲ್ಲಿಸುತ್ತಿದ್ದೇನೆ. ಅವರು ಈಗಾಗಲೆ 'ಯದ್ವಾತದ್ವಾ' ಬರೆದು ಪ್ರಸಿದ್ಧರಾಗಿದ್ದಾರೆ. ಆ ಕೈವಾಡವೇ 'ಗಾಳಿಗೋಪುರ'ದ ಕಟ್ಟಡದಲ್ಲಿಯೂ ಕಾಣುವದು ಎಂದು ಹೇಳಿದರೆ ಇಲ್ಲಿಯ ಹಾಸ್ಯಕ್ಕೆ ಬೇರೆ ಮುನ್ನುಡಿ ಬೇಡ. ಶ್ರೀ. ಕಸ್ತೂರಿಯವರನ್ನು ಕಾಣುತ್ತಲೆ ಹಾಸ್ಯದ ಅಧಿದೈವವು ಅವರನ್ನು ಅನುಗ್ರಹಿಸಿರಬೇಕು ಎಂದು ಯಾರಿಗೂ ತೋರುವದು. ಜಗತ್ತಿನ ಇತಿಹಾಸ, ನಾಗರಿಕತೆ, ಸಂಸ್ಕೃತಿ, ಸಮಾಜಶಾಸ್ತ್ರ ಮೊದಲಾದವುಗಳನ್ನು ಪಾಠ ಹೇಳುವ ಅಭ್ಯಾಸದಲ್ಲಿ ಅವರ ಪುರುಷಾರ್ಥವೆಲ್ಲ ಕಳೆದರೂ— 'ಅಭ್ಯಾಸಃ ಕಿಂ ಕರಿಷ್ಯತಿ?' 'ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ' ಎಂಬಂತೆ ಅವರ ಹಾಸ್ಯಪ್ರಕೃತಿಯು ಅವರನ್ನು ಯದ್ವಾತದ್ವಾ ಬರೆಯಹಚ್ಚಿ ಅವರಿಂದ ಏನಕೇನ ಪ್ರಕಾರೇಣ ಗಾಳಿಗೋಪುರವನ್ನು ಕಟ್ಟಿಸಿದೆ. ಅವರು ಪಾಠ ಹೇಳುವ ವಿಷಯವು ವಾಚ್ಯಾರ್ಥ-ಜಡವಾದರೂ ಅವರ ಹಾಸ್ಯಕೃತಿಯು ವ್ಯಂಗ್ಯಾರ್ಥ ಸಮೃದ್ಧವಾಗಿದೆ. ಹಾಸ್ಯದ ಹಾದಿಯನ್ನು ತುಳಿದು ಕಸ್ತೂರಿಯವರು

ಕಾರಂತ, ಕೈಲಾಸಂ, ಅವರ ಕಾಗುಣಿತದ ಬಳ್ಳಿಯನ್ನು ಸೇರಿದ್ದಾರೆ. ಇವರ ಹಾಸ್ಯವು ಕೃತ್ರಿಮಚಮತ್ಕಾರವಲ್ಲ ; ಸಹಜದೃಷ್ಟಿಯ ಸ್ವಭಾವ. ಈ ವಿದೂಷಕ ದೃಷ್ಟಿಗೆ ಪ್ರಪಂಚದ ವೈಪರೀತ್ಯಗಳು ಅಂಗೈ-ನೆಲ್ಲಿಯಂತೆ ಎದ್ದು ಕಾಣುವವು. ಆಭಾಸವೇ ಅಭ್ಯಾಸವಾದ ಸಮಾಜಕ್ಕೆ ಹಾಸ್ಯವೇ ತಕ್ಕ ಮದ್ದು, ಎಂದು ಹೇಳಬಹುದು. ಅದಕ್ಕೆ ಸರಿಯಾಗಿ ಲೇಖಕ ಪ್ರಪಂಚದಲ್ಲಿ ಶ್ರೀಗಳಾದ ಕೈಲಾಸಂ, ಕಾರಂತ, ಜಾಗಿರದಾರ, ಗೋರೂರ, ರಾಜರತ್ನಂ, ರಮಾನಂದ, 'ರಾ. ಶಿ.' ಮೊದಲಾದ ಹತ್ತು ಕೈಗಳು ಈ ಮದ್ದುಕೊಡುವ ಕೆಲಸ ಮಾಡುತ್ತಿವೆ. ಸದ್ಯದ ಸಮಾಜವೋ ಮುಟ್ಟಿದರೆ ಮುರುಕುವಂತ ಹದು. ಅತ್ತ ವ್ಯಕ್ತಿ-ಟೀಕೆಯಾಗಬಾರದು, ಇತ್ತ ಸಾಮಾನ್ಯತೆಗಿಳಿಯ ಬಾರದು — ಎಂದರೆ ತ್ರಿಶಂಕುಸ್ಥಿತಿಯಲ್ಲಿಯೇ ಸ್ವರ್ಗ ಕಟ್ಟುವದು ಬಲು ಕಷ್ಟದ ಕೆಲಸ. ಈ ವಿನೋದ ಪ್ರಪಂಚದಲ್ಲಿ ಕಸ್ತೂರಿಯವರ ಹಾಸ್ಯಶೈಲಿಯು ತನ್ನದೇ ಆದ ಒಂದು ರೀತಿಯನ್ನು ಅನುಸರಿಸಿ ಬಂದಿದೆ. ತಮ್ಮ ಹಾಸ್ಯದ ಬಲೆಯಲ್ಲಿ ಹಾಕದೆ—ತೆನ್ನಾಲಿ ತನ್ನ ಕುಲದೈವವನ್ನು ಬಿಡಲಿಲ್ಲ; ಸರ್ವಜ್ಞ ಅಕ್ಕನನ್ನು ಹೊರಗಿರಿಸಲಿಲ್ಲ. ಹಾಸ್ಯ ವಿಭೂತಿಯ ವ್ಯಾಪಕತೆಯೇ ಅಂತಹದು. 'ಕಣ್ಣು ನಾಲಿಗೆ ಎರಡು ತನ್ನವೆಂದೆನಬೇಡ' ಎಂದ ಸರ್ವಜ್ಞೋಕ್ತಿಯು ಕಸ್ತೂರಿಯವರಿಗೆ ಸ್ವಾಭಾವಿಕವಾಗಿಯೇ ಗೊತ್ತಿದೆ. ಕಂಡಿದ್ದನ್ನೆಲ್ಲ ಬಣ್ಣಿ ಸುವದನ್ನಾಗಲಿ ಉಂಡದ್ದನ್ನೆಲ್ಲ ಬಕ್ಕಣಿಸುವದನ್ನಾಗಲಿ ಅವರು ಮಾಡಿಲ್ಲ. ಕೃತಿಯ ಸಹಜನಿಗ್ರಹವು ಇಲ್ಲಿಯೂ ಇದೆ.

ಯಾವದೋ ಗಿಡದ ಬೇರನ್ನು, ಯಾತಾತರಲ್ಲಿಯೋ ಕೂಡಿಸಿ, ಯಾರಿಗಾದರೂ ಕೊಟ್ಟರೆ, ಏನೇನಾದರೂ ಆಗುವದು ಖಂಡಿತ, ಎಂಬ ಸೂತ್ರವನ್ನು ಹಿಡಿದು ಅವರು ತಮ್ಮ ಮೊದಲನೆಯ 'ಯದ್ವಾತದ್ವಾ' ಕೃತಿಯನ್ನು ರಚಿಸಿದ್ದರು. ಅಲ್ಲಿಯ ಆ ಹಾಸ್ಯಾಲಂಕಾರಗಳು ಈ ಕೃತಿಯಲ್ಲಿಯೂ ಇವೆ. ಅವಲ್ಲದೆ ಇಲ್ಲಿ ಅವರ ವಿನೋದಸೃಷ್ಟಿ ವಿಸ್ತಾರ ಹೊಂದಿದೆ. ಅಧ್ಯಾಯಗಳ ವಕ್ರಶಿರೋನಾಮಗಳು, ನೀರಿಂದ ಹೊರಗೆಳೆದ ಮೀನಗಳಂತೆ ನೀರಸವಾದ ಆಯ್ದ ಪದ್ಯದ ತುಂಡುಗಳ ವ್ಯಂಗ್ಯ-ಪ್ರಚುರ-ಯೋಜನೆ, ಹಾಸ್ಯೋದ್ದೀಪಕವಾದ ಶಬ್ದವೈಪರೀತ್ಯ, ವಾಕ್ಯವೈಪರೀತ್ಯ, ಅರ್ಥವೈಪರೀತ್ಯಗಳು— ಇವೇ ಮೊದಲಾದವುಗಳಿಂದ, ಡೊಂಕಿನ ಶೃಂಗಾರದಿಂದಲೆ ರಚಿಸಿದ ಗೋಪುರ

ಗಳಂತೆ, ಕೊಂಕುಕೊಂಕಾದ ಹೊಸ ನುಡಿಗಳಿಂದ ಕಟ್ಟಿದ ಈ ಕೃತಿಯು ಕನ್ನಡ-ಸಾಹಿತ್ಯ-ಸರೋವರದಲ್ಲಿ ಹಾಸ್ಯದ ನವೀನ ಲಹರಿಯನ್ನು ತರಂಗಿಸುವದು. ಹಾಸ್ಯದ ಮೂರು ಗುಣಗಳೂ ಇಲ್ಲಿವೆ. ಆನಂದರಾಯರ, ಭೀಮರಾಯರ, ಕೌಟುಂಬಿಕ ಜೀವನದ ಸ್ಮಿತ-ಹಸಿತ, ಸುತ್ತಲಿನ ಸಮಾಜದೊಳಗಿನ ಅಷ್ಟಾದಶ ವ್ಯಕ್ತಿಗಳ ವಿಹಾಸ-ಪರಿಹಾಸ, ಏನಕೇನ ಪ್ರಕಾರೇಣ ದೊಡ್ಡಣ್ಣನಾಗಬೇಕೆಂದು ಖಟಾಟೋಪ ಮಾಡಿ ಗೆದ್ದ ಹನುಮಂತರಾಯನ ಚಾರಿತ್ರ್ಯದ ಉಪಹಾಸ-ಅಪಹಾಸ—ಈ ಮೂರರ ಬೆರಕೆಯಿಂದ ಭಿನ್ನಭಿನ್ನ ರುಚಿಯ ಜನರಿಗೂ ಒಂದೇ ಸಮಾರಾಧನೆಯನ್ನು ಹೂಡಿದಂತೆ ಶ್ರೀ. ಕಸ್ತೂರಿಯವರ ಕೃತಿಯು ವಿವಿಧರುಚಿಯನ್ನೊಳಗೊಂಡಿದೆ. ಉದಾರಶಿರೋಮಣಿ ಆನಂದರಾಯರ ಮತ್ತು ಆಂಜನೇಯ ವರಪ್ರಸಾದಲಬ್ಧ ಮೇಜರ ಭೀಮರಾಯರ ಕೌಟುಂಬಿಕ ಕಥೆಯು ಒಂದು ಸಣ್ಣ ಕತೆಯ ಲಲಿತ ಹಾಸ್ಯಕ್ಕೆ ಈಡಾಗುವಷ್ಟು ಸ್ವಾರಸ್ಯಪೂರ್ಣವಾಗಿದೆ. ಆದರೆ ಅದಕ್ಕೆ ನೂರು ಮಸಾಲೆಗಳನ್ನು ಹಾಕಿ ಶ್ರೀ. ಕಸ್ತೂರಿಯವರು ಅದನ್ನು ಕಾದಂಬರಿಯ ಗಾತ್ರಕ್ಕೆ ಉಬ್ಬಿಸಿದ್ದಾರೆ. ವಾರ್ಡನ್‌ರು, ವನಿತಾಸೇವಾಸದನದ ಏಗ್ಗಮ್ಮ, ಶನಿಕಾಟದ ಸುಭಾಷಿತಪ್ರಿಯ ವಿಮಾ ಏಜಂಟರು, ಸರ್ಕಸಿನ ಪ್ರೊಫೆಸರ ಪಶುಪತಿ, ಹಾಟೆಲಿನ ಕುಂಟಾವಧಾನಿಗಳು, ಬ್ಯಾಂಕ್ ಮ್ಯಾನೇಜರ ಗೋಳಪ್ಪನವರು ಕುಂಭಕೋಣಕ್ಕೆ ಯಾತ್ರೆ ಬೆಳಸಿದ 'ಬಿಸಿಬಿಸಿ' ಬಾತ್ಮಿದಾರ್ ಪೂರ್ಣಬೋಧರಾಯರು, ಪೋಲೀಸ ನಂ. ೩೬೧, ಬೀದಿಯ ಬೈರಾಗಿ ಮಹಾತ್ಮರು, ಹಸಿರು ಶಾಲಿನ ವರದಯ್ಯಂಗಾರರು, ಋಷಿಪಂಚಮಿ ಮಂತ್ರದಿಂದ ಲಗ್ನ ಸಾಂಗಗೊಳಿಸಲು ಬಂದ ಟೈಗರ ಸುಬ್ಬಾಶಾಸ್ತ್ರಿಗಳ ಜ್ಯೇಷ್ಠಪುತ್ರ ಯಜ್ಞೇಶ, ಇವನ ಪ್ರತಿಕಕ್ಷಿಗಳಾದ ನಂಜುಡಶಾಸ್ತ್ರಿಗಳು—ಈ ಪರಿವಾರದ ಮೆರವಣಿಗೆಯನ್ನು ಲೇಖಕರು ತಮ್ಮ ಕಥಾನಾಯಕನ ಸುತ್ತ ಹೊರಡಿಸಿದ್ದಾರೆ. ಇದಲ್ಲದೆ ಉಪ ಅಲಂಕಾರಗಳು ಅನೇಕವಾಗಿವೆ. ವಿದ್ಯಾರ್ಥಿಗಳ ವಿನೋದ, ಮಾನಪತ್ರಸಮಾರಂಭ, ಚೇಳಿನ ಮಂತ್ರ, ಜಾಹೀರಾತುಗಳ ಗಾದೆಮಾತಿನ ಹಾವಳಿ, ಉದಾರಶಿರೋಮಣಿಗಳ ಮನೆಗೆ ಬಂದ ತಿರುಕರ ಪಿಡುಗು, ಲಗ್ನವೆಂಬ ನಾಟಕದ ಆಹ್ವಾನದ ಹ್ಯಾಂಡಬಿಲ್, ಬೀಗರ ಹೋಳೀಹುಣ್ಣಿವೆ, ಹಳ್ಳಿಯ ಬೋರೆಗೌಡನಿಗೆ ಉದಾರಶಿರೋಮಣಿಗಳ ಮಗ ಟೀಕೀಟ

ಹಾಕಿದ್ದು, ಹೃದಯತೃಪ್ತಿಗಾಗಿ ಕಿರಿಚಿದ್ದ ಹನುಮಂತರಾಯ ಹೊಟ್ಟೆ ಪಾಡಿಗೂ ಹಾದಿನಾಡಿಕೊಂಡದ್ದು, ಕೀರ್ತನೆಗಳ ಹಾಡುಗಾರಿಕೆ, ಕಾಲೇಜ ಬಿಟ್ಟಮೇಲೆ ಏನು ಮಾಡಬೇಕೆಂಬ ಚರ್ಚೆಯಲ್ಲಿ ಮೃತ್ಯು ಹೇಳಿದ ಇಂಗೋಪತಿ, ಉಪನ್ಯಾಸಿಜಮ್, ಪಿಟಮೊಸು ಮಾರುವದು, ರೋದನ ಸಾಹಿತ್ಯ—ಮೊದಲಾದ ಉಪಾಯಗಳು—ಇವೇ ಮುಂತಾದ ಇಲ್ಲಿಯ ಹಾಸ್ಯವು ಸರ್ವೋಸವವಾಗಿದೆ. ಹನುಮಂತರಾಯ ಡಿಗ್ರಿಯಿಂದ ದೊಡ್ಡವನಾಗಲಾರದೆ ಸರ್ಕಸಿನಲ್ಲಿ ಕರಡಿಯಾಗಿ ಕುಣಿದು, ಕತ್ತೆಯಂತೆ ಕಿರಚಿ, ಆ್ಯಂಗ್ಲೋ ಇಂಡಿಯನ್ ಹುಡಿಗೆಯನ್ನು ಮದುವೆಯಾಪನು ಎಂಬೊಂದೇ ಅಘಟಿತಘಟನೆಯು ಇಲ್ಲಿಯ ವಕ್ರಹಾಸ್ಯದ ವ್ಯಂಗ್ಯಸರಣಿಯನ್ನು ಸಾರಲು ಸಾಕಾಗಿದೆ. ಆದರೆ ಪರಿಕರ ರೂಪವಾಗಿ ಬಂದ ಹಾಸ್ಯವು ಸಹಜರಮ್ಯವಾಗಿದೆ.

ಇಸ್ಪೇಟಿನ ( Playing cards ) ಬಂಗಲೆಯನ್ನು ಊದಿ ನೋಡಬಾರದು. ಗಾಳಿಗೋಪುರದಲ್ಲಿ ಅಲ್ಲಲ್ಲುಳಿದ ಬಿರುಕುಗಳು ಗಾಳಿಯ ಸಂಚಾರಕ್ಕಾಗಿ ಇಡಲಾದ ಕಿಂಡಿಗಳೆಂಬುದನ್ನು ವಾಚಕಮಹಾಶಯರು ನೆನಪಿನಲ್ಲಿ ಇಡಬೇಕು. ಹನುಮಂತನ ಬಾಲದಂತೆ ಇಲ್ಲಿಯ ಕಥೆಯು ಇನ್ನೂ ಬೆಳೆಯಬಹುದಾಗಿತ್ತು. ಆದರೆ ಗಾಳಿಗೋಪುರವು ಹಠತ್ತಾಗಿ ಮುಗಿದಂತೆ ತೋರಬಹುದು. ಎಂಥೆಂಥ ಮಹಾರಾಯರು ಕಟ್ಟಿಸಿದ ಗಾಳಿಗೋಪುರಗಳ ಗತಿಯೇ ಏನೇನೋ ಆಗಿರುವಾಗ ಕಥಾನಾಯಕನಾದ ಕತ್ತೆ-ಹನುಮನ ಸ್ಮಾರಕವಾಗಿ ನಿಲ್ಲಿಸಿದ ಗಾಳಿಗೋಪುರವು ಹದಿನಾರು ಅಧ್ಯಾಯ ಎತ್ತರವಾಗಿದ್ದುದು ಕಡಿಮೆಯಾಯಿತೇ ? ಈ ಎತ್ತರದಿಂದ ಗೆಳೆಯ ಕಸ್ತೂರಿಯವರ ಕೃತಿಯ ಕಟು-ತಿಕ್ತ-ದರ್ಪವು ನಾಡಿಗೆ ಹಬ್ಬಿ ಅನೇಕ ಮೂಗುಗಳನ್ನು ನೇರವಾಗಿಸಿ ತಲೆಗೇರಿದ ಜಾಡ್ಯವನ್ನು ಇಳಿಸಲೆಂದಾಶಿಸಿ, ಅವರ ಹಾಸ್ಯದ ಲಶುನರಸಾಯನವು ಕನ್ನಡದ ಜನಮನವನ್ನು ಎಂದೂ ಎಚ್ಚರಗೊಳಿಸುತ್ತಿರಲಿ ಎಂದು ಹಾಸ್ಯದ ದೈವತವಾದ ರಾಸಭರಾಜ, ಹನುಮಂತ, ಜಾಂಬುವಂತ, ವಕ್ರ-ತುಂಡ ಈ ಚತುರ್ಮುಖ ಮಂಡಿತ ಬ್ರಹ್ಮನಿಗೆ ಬೇಡಿಕೊಳ್ಳುತ್ತೇನೆ.

೩೦-೭-೪೦ —ದ. ರಾ. ಬೇಂದ್ರೆ.

# ಬಿನ್ನಹ

●

ವಾಚಕಮಹಾಶಯರನ್ನು ನೆನೆದಾಗ ಮುಂದಕ್ಕೆ ಹೋಗುತ್ತಿದ್ದ ಲೇಖನಿ, ವಿಮರ್ಶಕಮಹಾಶಯರನ್ನು ನೆನೆದಾಗ ನಿಂತೇಬಿಡುತ್ತದೆ. ಆದ್ದರಿಂದ, ‘ ಗಾಳಿಗೋಪುರ ’ ಮುಗಿಯುವ ತನಕ ನಾನು ಯಾವ ವಿಮರ್ಶೆಯನ್ನೂ ಕಣ್ಣೆತ್ತಿ ಕೂಡ ನೋಡಲಿಲ್ಲ. ಗ್ರಂಥವನ್ನು ಬರೆದು ಮುಗಿಸಿ, ಮಹಾಜನರೆದುರು ಬಂದು ಬಿನ್ನಹ ಮಾಡಿಕೊಳ್ಳಬೇಕಾದ ಮುಹೂರ್ತ ಸಮೀಪಿಸಿದಾಗ, ನನ್ನಂತಹರ ಮೇಲೆ ಈ ವಿಮರ್ಶಕರು ಆಗಲೇ ಏನೇನು ಹೇಳಿದಾರೆ ಎಂಬುದನ್ನು ತಿಳಿದುಕೊಳ್ಳಬೇಕೆಂದೆನಿಸಿತು. ನನ್ನೆದುರಿಗಿನ ಬೀರುವಿನಿಂದ ‘ ಪ್ರಬುದ್ಧ ಕರ್ಣಾಟಕ ’ದ ಹಿಂದಿನ ಸಂಚಿಕೆಗಳಲ್ಲಿ ಕೆಲವನ್ನು (ಅಂದರೆ ಸಂ. ೫೫, ೫೮, ೫೯, ೬೦, ೬೧, ೬೩, ೬೬, ೬೭, ೬೮, ೭೧ ನ್ನು) ಕೆಳಕ್ಕಿಳಿಸಿ ಅಲ್ಲಿ ಪ್ರಕಟವಾಗಿದ್ದ ‘ ಕಾವ್ಯಾವಲೋಕನ ’ದ ಪುಟಗಳನ್ನು ತಿರುವಿ ನೋಡಿದೆ. ವಿಮರ್ಶಕರು ಇತರರ ಗ್ರಂಥಗಳ ಮೇಲೆ ಮಾಡಿರುವ ಟೀಕೆಗಳು ಒಂದೊಂದಾಗಿ ಕಣ್ಣಿಗೆ ಬಿದ್ದುವು: ‘ಕಸ್ತೂರಿಯು ಪರಿಮಳವನ್ನು ಆಣೆಯಿಟ್ಟುಕೊಂಡು ಸಾರಬೇಕಾಗಿಲ್ಲ ’—‘ ಕನ್ನಡ ಸಾಹಿತ್ಯದಲ್ಲಿ ಕಾದಂಬರಿಗಳ ಕೊರತೆಯನ್ನು ಕಂಡು ಅದನ್ನು ನಿವಾರಿಸಲು ಗ್ರಂಥಕರ್ತರು ಇಲ್ಲಿ

ಪ್ರಯತ್ನಪಟ್ಟಿದಾರೆ '—' ತೋರಿಕೆಯಲ್ಲಿ ಇದೊಂದು ಕಾದಂಬರಿ '—' ಸನ್ನಿವೇಶದಿಂದ ಸನ್ನಿವೇಶಕ್ಕೆ ಬಹಳ ಬೇಗ ಹಾರುತ್ತದೆ '—' ಇನ್ನೂ ಸ್ವಲ್ಪ ಸರಳವಾಗಿ ಬರೆದಿದ್ದರೆ ಓದುಗರಿಗೆ ಮೇಲಾಗುತ್ತಿತ್ತೆಂದು ತೋರುತ್ತದೆ '– 'ಭಾವಗಳು ಹಿಡಿತವಿಲ್ಲದೆ ಇರುವುದರಿಂದ ಶಿಥಿಲವಾಗಿ ಕಾಣುತ್ತದೆ'—' ವಸ್ತುನಿರೂಪಣೆಯ ರೀತಿಯಲ್ಲಿಯೂ, ಭಾಷೆಯಲ್ಲಿಯೂ, ಕುಂದುಕೊರತೆಗಳು ಕಾಣುತ್ತವೆ '—' ಸರ್ವನಾಮಗಳ ಪ್ರಯೋಗವು ಸಮಂಜಸವಾಗಿಲ್ಲ '—' ಕಾದಂಬರಿಯಲ್ಲಿ ಅತ್ತಿತ್ತ ದೃಷ್ಟಿ ತಿರುಗಿಸಲು ಅವಕಾಶವಿದೆ ಎಂದು ಕಂಡು, ಕಂಡುದನ್ನೆಲ್ಲ ತುಂಬಿಕೊಂಡು ಕತೆಗಳ ಕಣಜ ಮಾಡಬಾರದು '—' ಈ ಕಥೆಯನ್ನು ನಾಟಕರೂಪಕ್ಕೆ ತಿರುಗಿಸಿ ರಂಗಸ್ಥಳದ ಮೇಲೆ ಪ್ರದರ್ಶಿಸಿದರೆ ಹೆಚ್ಚು ಫಲ ದೊರೆಯಬಹುದೆಂದು ನಮಗೆ ತೋರುತ್ತದೆ '—' ಇವೆಲ್ಲ ತೀರ ಸಣ್ಣ ವಿಷಯಗಳು, ನಿಜ '—' ಒಟ್ಟಿನಲ್ಲಿ, ಈ ಕಥೆ ಒಂದು ರೀತಿಯಲ್ಲಿ ಚೆನ್ನಾಗಿದೆ '—' ಕೊನೆಯ ಪುಟವಿಲ್ಲದಿದ್ದರೆ, ಇನ್ನೂ ಚೆನ್ನಾಗಿತ್ತು '..................ನನ್ನ ಪುಸ್ತಕದ ವಿಷಯವಾಗಿಯೂ ವಿಮರ್ಶಕರು ಈ ವಾಕ್ಯಗಳನ್ನೇ ಮತ್ತೊಮ್ಮೆ ಉಪಯೋಗಿಸಬಹುದೆಂಬ ಭೀತಿ ಬಲವಾಯಿತು !

ಆದರೆ, ನಾಮಕರಣದ ದಿನ ಬಂದವರು ಕೂಸಿಗೆ ಮೂಗು ಅಗಲ, ಕಣ್ಣು ಸಣ್ಣ, ಹಣೆ ಚಿಕ್ಕದು, ಕೂದಲುದುರಿದೆ, ಬಾಯಿ ಸೊಟ್ಟ ಎಂದು ಹೇಳಿದರೂ ಕೂಡ, ಯಾರೂ ತಕ್ಷಣವೇ ಮಗುವನ್ನು ರಿಪೇರಿ ಮಾಡಲು ಹೋಗುವುದಿಲ್ಲ. ಯಾರಾದರೂ ಪುಣ್ಯಾತ್ಮರು ತಂದೆಯ ಹತ್ತಿರ ಬಂದು, 'ಸ್ವಾಮಿ, ಒಟ್ಟಿನಲ್ಲಿ ಈ ಮಗು ಒಂದು ರೀತಿಯಲ್ಲಿ ಚೆನ್ನಾಗಿದೆ; ಸಾಕ್ಷಾತ್ ನಿಮ್ಮ ಹಾಗಿದೆ; ತದ್ರೂಪು!' ಅಂದರೆ, ಆಗ ಅವರ ಆನಂದಕ್ಕೆ ಪಾರವೇ ಇಲ್ಲ........

ಹಾಗೆಯೇ, ಈ ಪುಸ್ತಕದಲ್ಲಿ ನೂರಾರು ಕೊರತೆಗಳಿವೆ. ಕೊನೆಯ ಪುಟವಲ್ಲ, ಇಡೀ ಪುಟಗಳೇ ಇಲ್ಲದಿದ್ದರೆ ಚೆನ್ನಾಗಿತ್ತೋ, ಏನೋ ! ಆದರೂ, ಇದು ನನ್ನ ಕೂಸು ! ಇದಕ್ಕೆ ನಾಮಕರಣ ಮಾಡಿ, ಬೀದಿಯುದ್ದಕ್ಕೂ ಮೆರವಣಿಗೆ ಮಾಡಿಸಬೇಕೆಂಬ ಆಸೆ, ನನಗೆ! ಜನ ಏನನ್ನುತ್ತಾರೋ,

ಅವರಿವರ ಕೂಸುಗಳ ವಿಷಯವಾಗಿ ಅಂದದ್ದನ್ನು ಈಗಲೂ ಅನ್ನುತ್ತಾರೋ, ಎಂಬ ಭೀತಿ ಬಂದಾಗ, . . ಅನ್ನಲಿ, ಅನ್ನಿಸಿಕೊಳ್ಳೋಣ, ಎಂದು ಧೈರ್ಯ ಮಾಡಿಬಿಟ್ಟಿದೇನೆ.

ಏಕೆಂದರೆ, ಪ್ರಕಾಶ ಸಮಿತಿಯವರ ಬೆಂಬಲ ದೊರೆಯಿತು. ಶ್ರೀಮಾನ್ ಬೇಂದ್ರೆಯವರ ಸಲ್ನುಡಿಯಿಂದ ಉತ್ತೇಜನ ಲಭಿಸಿತು. ಶ್ರೀಮಾನ್ ಆನಂದರವರು ಬರೆದ ಹೊದಿಕೆಯ ಚಿತ್ರದಿಂದ ಗ್ರಂಥಕ್ಕೆ ಕಳೆ ಬಂತು; ನನ್ನ ಆಪ್ತ ಮಿತ್ರರಾದ ಶ್ರೀಮಾನ್ ನಂ. ಶಿವರಾಮಶಾಸ್ತ್ರಿ ಅವರು ನಾನು ಇಡೀ ಪುಸ್ತಕವನ್ನು ಅವರೆದುರು ಕುಳಿತು ಓದಿದಾಗ ಉದ್ದಕ್ಕೂ ಎಚ್ಚರವಾಗಿದ್ದು ಅಲ್ಲಲ್ಲಿ ಆಗಾಗ ತಲೆದೂಗಿದರು. 'ಚಿಂತೆ ಇಲ್ಲ. ಮನೋಹರ ಗ್ರಂಥ ಮಾಲೆಗೆ ನನ್ನದಿನ್ನೊಂದು ಪುಷ್ಪ' ಎಂದು ಹೇಳಿ, 'ಗಾಳಿಗೋಪುರ'ವನ್ನು ಧಾರವಾಡಕ್ಕೆ ಕಳುಹಿಸಿದೆ.

ಆದರೆ, ಆತುರದ ಅಡಿಗೆ; ಅವಸರದ ಬಡಿಸುವಿಕೆ! ಪದಾರ್ಥಗಳನ್ನು ಅಗಿದು ಊಟಮಾಡುವವರಿಗೆ ಕಬಳಕ್ಕೊಂದೆರಡು ಕಲ್ಲು ಸಿಕ್ಕಿದರೂ ಸಿಗಬಹುದು. ಸಾಮಾನ್ಯವಾಗಿ ಅವೆಲ್ಲವನ್ನೂ ವಾಚಕರು ಜೀರ್ಣಿಸಿಕೊಳ್ಳಬಹುದೆಂದು ತೋರುತ್ತದೆ. ದಪ್ಪವಾದ ತಪ್ಪುಗಳನ್ನು ಆಯ್ದು ಬೇರೆಡೆ ಸೇರಿಸಿ ತೋರಿಸಿದೆ......ಹೊಸ ಪದಗಳು ಕೆಲವಿಗೆ ಇನ್ನೊಂದೆಡೆಯಲ್ಲಿ ಅರ್ಥ ಕೊಟ್ಟಿದೆ.

ಮತ್ತೊಂದು ಮುಖ್ಯ ವಿಷಯ! 'ಗಾಳಿಗೋಪುರ'ದಲ್ಲಿ ತೂರಿ ಬರುವ ವ್ಯಕ್ತಿಗಳೂ ಸನ್ನಿವೇಶಗಳೂ ಕೇವಲ 'ಗಾಳಿ!' 'ಈ ವ್ಯಕ್ತಿ ನಾನಿರಬಹುದೇ? ಆ ಸನ್ನಿವೇಶ ಅಲ್ಲಿ ನಡೆದದ್ದಲ್ಲವೇ?' ಎಂದು ಯಾರೂ ಅನುಮಾನಿಸಬೇಕಾದ್ದಿಲ್ಲ. ಗಾಳಿಗೋಪುರಕ್ಕೆ ಬುಡವೆಲ್ಲಿಂದ ಬರಬೇಕು?

ಇನ್ನೇನೂ ಬಿನ್ನಹ ಮಾಡಿಕೊಳ್ಳಬೇಕಾಗಿಲ್ಲವೆಂದು ತೋರುತ್ತದೆ. ಆದ್ದರಿಂದ ಇಕೋ,—ಮುಂದಿನ ಪುಟಗಳಲ್ಲೇ ಒಪ್ಪೋಲೆ, ಕೆಲವು ಪದಗಳಿಗೆ ಅರ್ಥ, ಅಧ್ಯಾಯಗಳ ವಿವರ, ಅದರ ಆಚೆ ಪುಟದಿಂದ ಕಥೆ ಪ್ರಾರಂಭ!......ಓದೋಣವಾಗಲಿ........

೨೫-೭-೪೦ —ನಾ. ಕಸ್ತೂರಿ

# ಒಪ್ಪೋಲೆ

| ಪುಟ | ತಪ್ಪು | ಒಪ್ಪು |
|---|---|---|
| ೭ | ವಿಷಯಿಸುತ್ತದೆ | ವಿಷಮಿಸುತ್ತದೆ |
| ೯ | ಆದರೆ ಏನಿದು | ಅರರೆ ಏನಿದು |
| ೧೨ | ಹೊರಸೋಡಿತ್ತು | ಹೊರಸೋರಿತ್ತು |
| ೨೪ | ಆರ್ತಪ್ರಾಣಪರಾಯಣಾ | ಆರ್ತತ್ರಾಣಪರಾಯಣಾ |
| ೪೧ | ಬಹುಳೋಪಾಯದೊಳಾರ್ಚಿಸುತ್ತ | ಬಹುಳೋಪಾಯದೊಳಾರ್ಜಿಸುತ |
| ೪೩ | ಪಿರಂಗಿಯವರು | ಪರಂಗಿಯವರು |
| ೪೩ | ಮಗ ದಿನವೂ ಒಂದು | ಮಗ ದಿನವೂ ಬಂದು |
| ೪೮ | ಬೇಳಮ್ಮನ ಪೂಜಿ | ಚೇಳಮ್ಮನ ಪೂಜೆ |
| ೫೨ | ಆಫೀಸರುಗಳು ದೂರ ನಿಂತು | ಆಫೀಸರುಗಳ ದೂರ ನಿಂತು |
| ೫೪ | ನೂಕಿದರೆ ೫೦ ರೂಪಾಯಿ | ನೂಕಿದರೆ ೧೫ ರೂಪಾಯಿ |
| ೬೦ | ನಾಮದೇಹ | ನಾಮಧೇಯ |
| ೬೮ | ಬೆಬ್ಬೆಚ್ಚೇ | ಬೆಬೆಬ್ಬೇ |
| ೭೫ | ಕತ್ತಲಲ್ಲೇ ಕಿಡಕಿ ತೆಗೆದು | ಕತ್ತಲಲ್ಲೇ ಕೆದಕಿ ತೆಗೆದು |
| ೯೧ | ಶಾಮಣ್ಣನವರೂ ಹನುಮಂತನೂ | ರಾಮಣ್ಣರವರೂ ಹನುಮಂತನೂ |
| ೧೦೯ | ಹೊಲಬುವನು | ಹಲಬುವನು |
| ೧೧೦ | ಬಿಸಿಲಡಿಗೆ ಊಟಕ್ಕೆ ಕರೆದು ಕೂರಿಸಿದರು | ಊಟಕ್ಕೆ ಕರೆದು ಕೂರಿಸಿದರು |
| ೧೧೧ | ಊಟಮಾಡಿರುವವರ ಅನುಕೂಲವರಿತು | ಊಟಮಾಡುವವರ ಅನುಕೂಲವರಿತು |
| ೧೧೪ | ಕರೆದುಕೊಂಡು ಬಂದು ಇಲ್ಲ ಬಿಟ್ಟು ಬಿಟ್ಟು | ಕರೆದುಕೊಂಡು ಬಂದು ಇಲ್ಲಿ ಬಿಟ್ಟು ಬಿಟ್ಟು |
| ೧೬೨ | ಒಬ್ಬರು ಒಂದೊಂದು ರೀತಿಯಾಗಿ | ಒಬ್ಬೊಬ್ಬರು ಒಂದೊಂದು ರೀತಿಯಾಗಿ |

# ಕೆಲವು ಪದಗಳಿಗೆ ಅರ್ಥ



ಆಡಿಮೆ (ಪುಟ ೧೨) — ಗುಲಾಮ

ಅಪರೋಪಕಾರಿ (ಪುಟ ೨೯) — ಅಪರಕರ್ಮಕ್ಕೆ ಉಪಕಾರ ಮಾಡುವವನು.

ಅನಧಿಕಾರಿಗಳು (ಪುಟ ೫೬) — ಅಧಿಕಾರಿಗಳಲ್ಲದವರು Non-Officials.

ಇಂದಾ—ಗೆ (ಪುಟ ೪೦) — ಯಾರಿಂದ ಕಾಗದಗಳು ಬಂದುವು, ಯಾರಿಗೆ ಕಾಗದಗಳನ್ನು ಕಳುಹಿಸಲಾಯಿತು, ಎಂದು ಗುರುತುಮಾಡುವ ಗುಮಾಸ್ತೆ.

ಕರ್ಮಿಷ್ಠ (ಪುಟ ೨೯) — ಧರ್ಮಿಷ್ಠ ಎಂಬುವ ಹಾಗೆ.

ದಾನಿನಾನುತನ (ಪುಟ ೩೬) — Superiority Complex.

ದೀನನಾನುತನ (ಪುಟ ೩೫) — Inferiority Complex.

ದಂತ್ಯವಾದಿ (ಪುಟ ೫೭) — ಕರ್ನಾಟಕ ಎಂದು ಸಾಧಿಸಲು ಹೊರಟಿರುವ ಧೀರ.

ನಾಮುದೇಹ (ಪುಟ ೬೦) — ನಾಮ ಉಳಿದಿರುವ ದೇಹ.

ಪೆದ್ದುವಂತಿಕೆ (ಪುಟ ೧೪) — ಬುದ್ಧಿವಂತಿಕೆ ಇಲ್ಲದೆ ಕೆಲಸ.

ಮಹಳೀಯರು (ಪುಟ ೫೬) — ಮಹಿಳೆಯರಂತಿರುವ ಮಾಹನೀಯರು.

ಮೂರ್ಧನ್ಯವಾದಿ (ಪುಟ ೫೬) — ಕರ್ಣಾಟಕ ಎಂಬುದೇ ಸಾಧು ಎಂದು ವಾದಿಸುವವನು.

ವಿವಿಧ ವಿನೋದ ಹಾವಳಿ (ಪುಟ ೫೨) — Variety Entertainment.

ಸತ್ತ ಕಾಗದದ ಆಫೀಸ್ (ಪುಟ ೧೭೮) — Dead letter office.

ಸಾಲಿಗ (ಪುಟ ೮೭) — ಸಾಲವುಳ್ಳವನು.

ಸೀಠಗಳು (ಪುಟ ೫೫) — ಅಭಿನವ ಪೀಠಗಳು; Seats.

ಹವ್ಯಾಸಂಗ (ಪುಟ ೯) — ಇತರ ಹವ್ಯಾಸಗಳೊಂದಿಗೆ ವ್ಯಾಸಂಗ.

ಹಿಂಗೋಪಿ (ಪುಟ ೧೩೪) — ಕೋಪೋದ್ರೇಕವಾದ ಸನ್ನಿವೇಶ ಕಳೆದ ನಂತರ ಕೋಪಿಸಿಕೊಳ್ಳುವವನು.

ಹಿಂದು ಜೀವಿ (ಪುಟ ೧೦೨) — ಮುಂದು ಜೀವಿ ಅಲ್ಲದವನು; Backward bloc.

ಹುಳಿವಂತ (ಪುಟ ೯) — ತರುಣ.

ಹೆಬ್ಬೀಳು (ಪುಟ ೫೨) — ಅಪಾರವಾದ ಅವನತಿ.

# ಅಧ್ಯಾಯಗಳ ವಿವರ







ಮನೋಹರ ಗ್ರಂಥಮಾಲೆಯ

೪೪ನೆಯ ಕುಸುಮ



ಎಂಟನೆಯ ವರುಷದ ಎರಡನೆಯ

ಕು ಸು ಮ



# ಮೂ ಕ ಬ ಲಿ

(ಸಾಮಾಜಿಕ ಸ್ವತಂತ್ರ ಕಾದಂಬರಿ)



ಬರೆದವರು

“ ಜ ಡ ಭ ರ ತ ”

# ಗಾಳಿಗೋಪುರ

—❖—

## ಒಂದನೆಯ ಅಧ್ಯಾಯ

### ಅಣ್ಣನ ಕಣ್ಣುಬೇನೆ

●

ನನಗೇನ್ಬೇಡ ನಿನ್ಬುದ್ವಾದ
ನಂಗೂ ನಿಂಗೂ ಬಾಳ ಬೇದ...............ರತ್ನ

ಅಣ್ಣ ತಮ್ಮದಿರು ತಾವಣ್ಣ ತಮ್ಮದಿರೆಂದು
ತಿಳಿಯಲಾರರು, ನಡೆಯಲಾರರು............ಶ್ರೀನಿವಾಸ

●

'ಆ ಬೆಳ್ಳಿ ಕಪ್ಪು ತೆಗೆದು ನಿನ್ನ ಹಾಳುಪೆಟ್ಟಿಗೆಯೊಳಕ್ಕೆ ಎಸೆಯೋ!'

ಶೀನ ಮಾತನಾಡಲಿಲ್ಲ.

'ಪೆಟ್ಟಿಗೆಯಲ್ಲಿರಿಸಿ ಬೀಗ ಹಾಕೋ!'

ಶೀನ ಓದುತ್ತಲೆ ಕುಳಿತಿದ್ದ; ಇತ್ತಕಡೆ ತಿರುಗಿ ನೋಡಲೇ ಇಲ್ಲ.

'ತೆಗೆಯುತ್ತೀಯೋ, ಇಲ್ಲವೋ?'

ಶೀನ ಕಿವುಡನೇನೂ ಅಲ್ಲ; ಆದರೂ ತನ್ನ ಪಾಡಿಗೆ ತಾನು ಗಿರಗಿರನೆ ಏನನ್ನೋ ಗೀಚತೊಡಗಿದ.

ಅಲ್ಲಿಗೆ ಹನುಮಂತನ ಸಹನೆ ಮಿತಿ ಮೀರಿತು; ಅವನ ಕೋಪ ಕೆರೆ ತುಂಬಿ ಕೋಡಿಹರಿಯಿತು! ಶೀನನ ಮೇಜಿನ ಹತ್ತಿರಕ್ಕೆ ಎದ್ದುಬಂದ. ಶೀನನೂ ಕೂಡ ಏಳಬೇಕಾಗಿ ಬಂತು. ‘ಬೇಡ, ಹನು! ಹೊಟ್ಟೆಕಿಚ್ಚಿನಿಂದ ಉರಿದುಹೋಗಬೇಡ ನೀನು!’ ಎಂದು ಹೇಳುತ್ತಾ ಶೀನ ತನ್ನ ಅಣ್ಣನ ರಟ್ಟೆ ಹಿಡಿದು ಹಿಂದಕ್ಕೆ ನೂಕಿದ....ಕೋಪ, ಕೋಪಕ್ಕಿಂತ ಮಿಗಿಲಾಗಿ ಒಳಗಿಂದ ಉಕ್ಕಿ ಬಂದ ಒಂದು ಬಗೆಯ ಅಸಹ್ಯತೆ, ಬೇಸರ—ದಿನ ಬೆಳಗಾದರೆ ಈ ವ್ಯಾಜ್ಯ ತಪ್ಪದಲ್ಲಾ ಎಂಬ ವ್ಯಸನ—ಅಲ್ಲದೆ, ನಾಲ್ಕು ವರ್ಷ ಕಿರಿಯವ-ನಾದರೂ ವ್ಯಾಯಾಮದಿಂದ ಬಲಗೊಂಡ ಮೈಕಟ್ಟು, ಇವೆಲ್ಲವೂ ಶೀನನ ನೂಕಿನ ಒತ್ತನ್ನು ಹೆಚ್ಚಿಸಿದುವು....ಸಾಲದುದಕ್ಕೆ ಆ ಬೆಳ್ಳಿ ಕಪ್ಪು ‘ಭಾರ ಎತ್ತುವ ಮೇಲಾಟ’ದಲ್ಲಿ ಶೀನನಿಗೆ ಬಂದ ಮೊದಲನೆಯ ಬಹುಮಾನ. ಒಟ್ಟಿನಲ್ಲಿ ಹನುಮಂತ ತನ್ನ ಕುರ್ಚಿಯೊಳಕ್ಕೆ ಕೊಂಚ ರಭಸದಿಂದಲೇ ಬಿದ್ದ.

— ಅಣ್ಣತಮ್ಮಂದಿರ ಕಾದಾಟವು ನಿನ್ನೆ ಮೊನ್ನೆಯದಲ್ಲ. ಪ್ರಪಂಚದ ಮೂಲೆ ಮೂಲೆಯಲ್ಲೂ ಅದು ಪ್ರಚಂಡ ತಾಂಡವವಾಡಿದೆ. ಆದರಿಂದ ಸಾವಿರಾರು ಸಿಂಹಾಸನಗಳುರುಳಿವೆ; ಕೆನ್ನೀರು ಕಣ್ಣೀರುಗಳ ಹೊಳೆಗಳು ಹರಿದಿವೆ. ಮಹಾಭಾರತದ ಕಾಲದಿಂದಲೂ ಅದು ಭಾರತವರ್ಷಕ್ಕೆ ಬೆನ್ನು ಹತ್ತಿದ ಭೇತಾಳವಾಗಿ ಕುಳಿತಿದೆ—ಆದ್ದರಿಂದ, ‘ಈ ಇಬ್ಬರಲ್ಲಿ ಇವನಿಗೆ ಕೊಂಚ ತಿಳುವಳಿಕೆ ಹೆಚ್ಚು’ ಎಂದು ಹಲವರಿಂದ ಹೊಗಳಿಸಿಕೊಳ್ಳುತ್ತಿದ್ದ ಶೀನ, ತಗ್ಗು ಶ್ರುತಿಯಲ್ಲೇ, ‘ಯಾಕಣ್ಣಾ, ಹೀಗೆ ಹಗಲೂ ಇರುಳೂ ನನ್ನ ಮೇಲೆ ವಿಷ ಕಾರುತ್ತೀಯಾ? ನನಗೆ ಕಪ್ಪು ಬಂದರೆ, ನಿನ್ನ ಮುಖ ಏಕೆ ಕಪ್ಪಾಗಬೇಕು? ತಮ್ಮನಿಗೆ ಜಯವಾದರೆ, ಅಣ್ಣ ಎಂದೆನಿಸಿಕೊಂಡಿರುವವನಿಗೆ ತಮಗಾದಷ್ಟೇ ಸಂತೋಷವಾಗಬೇಡವೆ? ಅಸೂಯೆಪಡಬಾರದು, ಹನು! ಈ ಕಪ್ಪು ಹೊಡೆಯಬೇಕೆಂದು ನಾನು ಏಕೆ ಕಷ್ಟಪಟ್ಟೆ, ಗೊತ್ತೆ? ಹೇಳಿಬಿಡುತ್ತೇನೆ, ಇದರ ಗುಟ್ಟನ್ನ....ನಾಳೆ ನನಗೆ ಪಾಸು-ಗೀಸು ಆದರೆ, ಓದು ನಿಲ್ಲಿಸಿಬಿಡಬೇಕಾಗುತ್ತದೆ. ಎಲ್ಲೂ ಚಾಕರಿ ಸಿಗುವುದಿಲ್ಲ, ಖಂಡಿತ. ಆಗ ರೆಯಿಲು ಸ್ಟೇಷನಿಗಾದರೂ ಹೋಗಿ ಸಾಮಾನು ಹೊತ್ತಾದರೂ ನಾಲ್ಕು ಕಾಸು ಸಂಪಾದಿಸಬಹುದಲ್ಲಾ ಅಂತ ನಾನು ಪ್ರಯತ್ನಮಾಡುತ್ತಿದೇನೆ....ಅಷ್ಟೆ....’ಎಂದು ಮೊದಲುಮಾಡಿದ.

'ಸಾಕು, ಸುಮ್ಮನಿರು! ನಾನೇನು ಎಳೆಯ ಮಗು ಅಂತ ತಿಳಿದು-ಕೊಂಡಿದ್ದೀಯೋ ನೀನು? ನಿನ್ನ ಹಾಸ್ಯ ಗೀಸ್ಯ ನನ್ನ ಹತ್ತಿರ ಬಿಚ್ಚಬೇಡ.. ನೀನು ಮೈ ಬೆಳೆಸಿ ಕೊಬ್ಬಿ ಕಬಂಧನ ಹಾಗಾದರೆ ನನಗೇನೂ ನಷ್ಟವಿಲ್ಲ; ಭೂಮಿಗೆ ಇನ್ನೂ ಕೊಂಚ ಭಾರ, ಅಷ್ಟೆ! ಆದರೆ, ಇಲ್ಲಿ ನೋಡಿಲ್ಲಿ, ನೀನು ನನಗೆ ಬುದ್ಧಿವಾದ ಮಾತ್ರ ಹೇಳಬೇಡ....ಅಪ್ಪನಿಗೇನು? ಅಲ್ಲಿ ಕುಳಿತು-ಕೊಂಡು ಮಾರುದ್ದ ಕಾಗದ ಬರೆಯುತ್ತಾನೆ ನಿನಗೆ, 'ಹನುವಿಗೆ ಹಿಸ್ಟರಿ ಹೇಳಿಕೊಡು, ಮಿಸ್ಟರಿ ಹೇಳಿಕೊಡು' ಅಂತ......ಆದರೆ, ನೋಡಿಲ್ಲಿ, ಗೋಮಯ ಹಚ್ಚಿ ಶುದ್ಧಿಮಾಡದೆ ನಿನ್ನ ಪುಸ್ತಕ ಒಂದನ್ನೂ ನಾನು ಮುಟ್ಟುವುದಿಲ್ಲ. ನೀನು ಬರೆದ ಅಕ್ಷರ ಒಂದನ್ನ ನಾನು ಓದಿದರೆ, ನನ್ನ ಕಣ್ಣಿಗೆ ಸಾಬೂನು ಹಾಕಬೇಕು; ಮೆದುಳಿಗೆ ಸುಣ್ಣ ಬಳಿಯಬೇಕು, ತಿಳಿ-ಯಿತೆ....ನಿನ್ನ ದಾರಿ ನಿನಗೆ, ನನ್ನ ದಾರಿ ನನಗೆ! ನನ್ನ ಬುರುಡೆ ತಿಕ್ಕುವು ದಕ್ಕೆ ನೀನೂ ಬರಬೇಡ; ನಿನ್ನ ಜೆಳ್ಳಿ ಕಪ್ಪು ನೋಡಿ ಹಲ್ಲು ಕಿರಿಯುವುದಕ್ಕೆ ನಾನೂ ಬರುವುದಿಲ್ಲ........'

'ಅಲ್ಲಾ, ಹನು, ಅಪ್ಪನಿಂದ ಕಾಗದ ಬಂದು ಆರು ದಿನವಾಯಿತಲ್ಲಾ! ನಿನ್ನನ್ನು ಕೂರಿಸಿಕೊಂಡು ಹಿಸ್ಟರಿಯೋ ಮಿಸ್ಟರಿಯೋ ಬೋಧಿಸುವುದಕ್ಕೆ ಬಂದೆನೇ ನಾನು? ಸುಮ್ಮನೆ ಯಾಕೆ ಎಗರಾಡುತ್ತೀಯಾ?....ಇಂತಿಂತಹ ಪುಸ್ತಕ ಓದಿಕೊ ಅಂತ ಹೇಳಿದ್ದೇ ತಪ್ಪೇ?'

'ತಪ್ಪು? ತಲೆಹರಟೆ, ಪ್ರತಿಷ್ಠೆ, ದುರಹಂಕಾರ....'

'ನಿನ್ನ ಇಂಗ್ಲೀಷು ಕೊಂಚ ಉತ್ತಮವಾಗಲಿ ಅಂತ....'

'ಲೋ, ಶೀನಾ! ನಾನು ಗಟ್ಟಿಮುಟ್ಟಾಗಿ ಓಡಾಡುತ್ತಾ ಇದ್ದ ಕಾಲದಲ್ಲಿ ನೀನಿನ್ನೂ ಹೆಬ್ಬೆಟ್ಟು ಚೀಪುತ್ತಿದ್ದೆ, ನೆನಪಿರಲಿ! ನನ್ನ ಇಂಗ್ಲೀಷು ಯಾರಿಗೆ ಅರ್ಥವಾಗುವುದಿಲ್ಲವೋ ಅವರು ಬಿಡಲಿ ಅದನ್ನ! ಅರ್ಥಮಾಡಿ-ಕೊಳ್ಳುವವರು ಹುಟ್ಟಿಬರುತ್ತಾರೆ ನಾಳೆ.'

'ನಾಳೇನೂ ಇಲ್ಲ; ಆದರಾಚೆ ನಾಳೇನೂ ಅನುಮಾನವೇ! ಅಲ್ಲಾ, ಹನು! ನಿನ್ನ ಈಗಿನ ಉಪಾಯಗಳಿಂದ ಭಾಷಾಜ್ಞಾನ ಉತ್ತಮವಾಗುವು ದಿಲ್ಲ, ಖಂಡಿತ. ಆದರೂ,ಅವುಗಳನ್ನ ಬಿಟ್ಟೇಬಿಡಬೇಕೆಂದು ನಾನು ಹೇಳಿದೆನೇ? ಡಿಕ್ಷನರಿ ಗಟ್ಟುಮಾಡಬೇಡ ಅಂತ ಹೇಳಿದೆನೇ? ಎನ್‌ಸೈಕ್ಲೊಪೀಡಿಯಾ

ಪುಸ್ತಕವನ್ನು ತಲೆದಿಂಬಾಗಿಟ್ಟುಕೊಂಡರೆ ಪ್ರಯೋಜನವಿಲ್ಲ, ತೆಗೆದುಬಿಡು ಅಂತ ಅಂದೆನೇ? ಇಲ್ಲವಲ್ಲಾ! ಜೊತೆಗೆ ನಾಲ್ಕು ಪುಸ್ತಕ ಓದು, ನಾಲ್ಕು ಪ್ರಬಂಧ ಬರೆ, ಅಂತ ಹೇಳಿದೆ, ಅಷ್ಟೇ ತಾನೆ?'

'ನನಗೆ ಬುದ್ಧಿ ಕಲಿಸುವುದಕ್ಕೆ ಅಂತ ದೇವರು ನಿನ್ನನ್ನು ಹುಟ್ಟಿಸ ಲಿಲ್ಲ; ನಿನಗೆ ನೀನೇ ಮೊದಲು ಬುದ್ಧಿ ಸಂಪಾದಿಸಿಕೋ, ಸಾಕು!'

'ಬೇಡ, ಹನು! ಈ ಮೊಂಡಾಟವನ್ನು ಬಿಡದೆ ಹೋದರೆ, ನಿನ್ನ ಗತಿ ಆ ಘಜನಿಮುಹಮ್ಮದನದೇ!'

'ಹಾಗೆಂದರೆ?'

'ಈಗ ಮೆರೆದಿರುವ ದಂಡಯಾತ್ರೆ ಜೊತೆಗೆ ಇನ್ನೊಂದೆಂಟು!'

'ಹಾ!'

ಹನುಮಂತನಿಗೆ — ಯಾರೋ ಈಟಿಯಿಂದ ತಿವಿದಹಾಗಾಯಿತು. 'ಇಷ್ಟಕ್ಕೆ ಬಂತೇನೋ ನಿನ್ನ ಸೊಕ್ಕು?..ರಾಸ್ಕಲ್' ಎಂದು ಕೂಗುತ್ತಾ ಎದ್ದ. ತಮ್ಮನನ್ನು ಹಿಡಿದು, ಬಲವಾಗಿ ಮುಂದಕ್ಕೆ ಎಳೆದು ಹಿಂದಕ್ಕೆ ತಳ್ಳಿದ....ಭಾರ ಎತ್ತುವುದರಲ್ಲಿ ಬಹುಮಾನ ಬಂದದ್ದು ಶೀನನಿಗೆ.... ಹನುಮಂತನಿಗಲ್ಲ....ಆದರೂ, ಬಲವಾಗಿ ತಳ್ಳಿದ; ಬಲಗೈಯನ್ನು ಬೀಸಿ, ಶೀನನ ಕಪಾಳಕ್ಕೆ ಒಂದು ಬಿಟ್ಟ. ಶೀನನೂ ಸುಮ್ಮನಿರಲಿಲ್ಲ....ಶಾಂತಂ ಪಾಪಂ....ಯಾರ ಏಟಿನಿಂದ ಯಾರಿಗೆ ಹೆಚ್ಚು ನೋವಾಯಿತೋ, ಹೇಳು ವವರು ಯಾರು?....ಆಗ....

'ಶೀನಾ'

ಹಿಡಿತವನ್ನು ಸಡಿಲಿಸಿ ಇಬ್ಬರೂ ಬಾಗಿಲಕಡೆ ತಿರುಗಿದರು.

'**ಶೀನಾ**'

ಇಬ್ಬರೂ ಮೋರೆ ಇಳಿಸಿ, ದೂರ ದೂರ ನಿಂತು ಹೆಬ್ಬೆಟ್ಟಿಂದ ನೆಲ ಕೆರೆದರು.

'ಹನುಮಂತರಾವು! ನಾಚಿಕೆ ಆಗುವುದಿಲ್ಲವೇನೋ? ಎಷ್ಟಾದರೂ ಹಿರಿಯವನು ನೀನು. ತಮ್ಮನ ಮೇಲೆ ಬಲಪ್ರಯೋಗ ಮಾಡುತ್ತೀಯಲ್ಲಾ.. ಹೋಗು! ಆಫೀಸ್ ರೂಂನಲ್ಲಿ ಕಾದಿರು, ಬರುತ್ತೇನೆ......ಬೋರಾ! ಕರೆದುಕೊಂಡು ಹೋಗು, ಅಯ್ಯನವರನ್ನ.'

ಸದ್ದಿಲ್ಲದೆ ಬಾಲ ಮುದುರಿಕೊಂಡು ಹನುಮಂತರಾಯ ಬೋರನ ಹಿಂದೆ ಹೊರಟ. ಒಮ್ಮೆ ಕೂಡ ಹಿಂತಿರುಗಲಿಲ್ಲ. ಎದುರಿಗೆ ಬರುತ್ತಿದ್ದ ಕೆಲವರು ಹುಡುಗರನ್ನ ತಲೆ ಎತ್ತಿ ನೋಡಲಿಲ್ಲ. ಆವರು ಯಾಕೆ, ಏನಾಯ್ತು, ಎಂದು ಬೋರನಿಗೆ ಕಣ್ಣುಸನ್ನೆ ಮಾಡಿ, ಆತನ ಹುಬ್ಬುಸನ್ನೆಗಳಿಂದ ವಿಷಯ ತಿಳಿದುಕೊಂಡರು! ಅಂದರೆ, ಒಬ್ಬೊಬ್ಬರು ಒಂದೊಂದು ರೀತಿಯಾಗಿ ತಿಳಿದು-ಕೊಂಡರು.

'ಬಿಸ್ಸಿರೋ, ಏನಿಲ್ಲ....ಹಾಸ್ಟಲ್ ಹಣ ಇನ್ನೂ ಪೂರ್ತ ಕೊಟ್ಟಿಲ್ಲ ವಂತೆ, ವಾರ್ಡನವರು ವಾರಂಟಿನಲ್ಲಿ ಹಿಡಿದಿದಾರೆ' ಎಂದರು, ಒಬ್ಬರು.

'ಅವನಿಗೇನು ಬಂತು ಕೇಡು? ಅವನ ತಂದೆಗೆ 'ಉದಾರಶಿರೋಮಣಿ' ಅಂತ ಬಿರುದು ಬೇರೆ ಇದೆಯಂತೆ, ಶೀನ ಹೇಳಿದ..' ಎಂದರಿನ್ನೊಬ್ಬರು.

'ಮನೆಗೆ ಮಾರಿ, ಪರರಿಗುಪಕಾರಿ ಅನ್ನುವ ಗುಂಪಿಗೆ ಸೇರಿದವರೋ ಏನೋ?'

'ಇಲ್ಲ, ಇಲ್ಲ......ಬೇರೆ ಯಾವುದೋ ಸೆಕ್ಷನ್ ಮೇಲೆ ಆರೆಸ್ಟ್ ಆಗಿರಬೇಕು.'

'ಹಾಸ್ಟಲ್ ಪುಸ್ತಕದಿಂದ ಹಾಳೆ ಹರಿದಿರಬೇಕು; ಈಗ, ಈ ವಾರ್ಡನ್ ಬಂದಮೇಲೆ ಅದನ್ನೂ ಕೂಡ ಒಂದು ತಪ್ಪು ಅಂತ ಮಾಡಿ ಕೂರಿಸಿಬಿಟ್ಟಿ ದಾರೆ....'

'ಅಥವಾ ಹಾಗೆ ಮಾಡಿದ ಅಂತ ತಮ್ಮನ ಮೇಲೆ ಚಾಡಿ ಹೇಳಿ ದನೋ, ಏನೋ?'

'ಇರಬೇಕು, ಇರಬೇಕು. ಶ್ರೀನಿವಾಸರಾಯನ ವಿಷಯದಲ್ಲಿ ಯಾವು ದಾದರೂ ತಂಟೆ ತಕರಾರು ತೆಗಿಯುತ್ತಲೇ ಇರುತಾನೆ, ಪುಣ್ಯಾತ್ಮ!'

'ಛೆ, ಛೆ, ಚಾಡಿ ಹೇಳುವಷ್ಟು ಕೆಳಕ್ಕಿಳಿದಿಲ್ಲ ಅವನು, ನನಗೆ ಗೊತ್ತು. ಕೊಂಚ ಮುಂಗೋಪಿ, ದಡ್ಡ—ಅಷ್ಟೇ ಹೊರತು, ಕೆಟ್ಟವನೇನೂ ಅಲ್ಲ. ಗೊತ್ತಿಲ್ಲ ಗುರಿಯಿಲ್ಲ, ಸುಮ್ಮನೆ ಚಾಡಿಕೋರ ಅಂತ ಬೈಯ್ಯಬೇಡ ಅವ ನನ್ನ....'

ಹೀಗೆ ಚರ್ಚಿಸುತ್ತಾ, ಅವರು, ಐದು ಜನರು, ಕುಳಿತು ಕಾಲು

ನೋಡುವುದಕ್ಕೆ ಬಿಸಿಲು ಹುಡುಕುತ್ತಾ ಹೊರಟರು....ಧನುರ್ಮಾಸ.. ಬೆಳಿಗ್ಗೆ ಎಂಟುಗಂಟೆ ಹತ್ತಿರ.

ವಾರ್ಡನ್‌ಸಾಹೇಬರು ಹನುಮಂತರಾಯನ ಕುರ್ಚಿಯಲ್ಲಿ ತೆಪ್ಪಗೆ ಕುಳಿತಿದ್ದರು. ಶೀನ ಅಲ್ಲೇ ಮೂಲೆಯಲ್ಲಿ ಒರಗಿಕೊಂಡು ನಿಂತಿದ್ದ. ಕುಳಿತುಕೊ ಎಂದು ಯಾರೂ ಹೇಳಲಿಲ್ಲ.

' ಹಿಂದೂಸ್ತಾನದ ವಿವಿಧ ಜನಾಂಗಗಳಲ್ಲಿ ಹೇಗೆ ಭ್ರಾತೃಭಾವವನ್ನು ಉಂಟುಮಾಡಿ ನೆಲೆಗೊಳಿಸುವುದು ? ' ಎಂಬ ವಿಷಯವನ್ನು ಕುರಿತು ' ಪುಂಡರ ತಂಡ 'ದವರು ನಡೆಸಿದ ಪ್ರಬಂಧ ಸ್ಪರ್ಧೆಯಲ್ಲಿ ಶ್ರೀನಿವಾಸರಾಯ ನಿಗೆ ಎರಡನೆಯ ಬಹುಮಾನ ದೊರೆತಿದೆ ಎಂಬ ಹಿಗ್ಗಿನ ಸುದ್ದಿಯನ್ನು ತಾವೇ ಅವನಿಗೆ ಮೊದಲು ತಿಳಿಸಿ ಅಭಿನಂದಿಸಬೇಕೆಂಬ ಕುತೂಹಲದಿಂದ ಆ ದಿನ ಅಷ್ಟು ಬೇಗನೆ ವಾರ್ಡನ್‌ಸಾಹೇಬರು ಹಾಸ್ಟಲಿಗೆ ದಯಮಾಡಿಸಿದರು ! ಆದರೆ, ಶೀನನ ರೂಮಿನಲ್ಲಿ ನಡೆಯುತ್ತಿದ್ದ ಸಹೋದರ ಭಾವನೆಯ ಪ್ರದರ್ಶನ ವನ್ನು ಕಂಡಾಗ ಅವರ ನಾಲಿಗೆ ಏಳಲೇ ಇಲ್ಲ. ತಂಡದವರು ಬರೆದಿದ್ದ ಕಾಗದವು ವಾರ್ಡನರ ಕಿಸೆಯಲ್ಲೇ ಬಿದ್ದಿತ್ತು !

ತುಸು ಹೊತ್ತು ಇಬ್ಬರೂ ತುಟಿ ಪಿಟಕೆನ್ನಲಿಲ್ಲ. ' ತುಸು ಹೊತ್ತು ' ಅಂದರೆ, ಗಡಿಯಾರಕ್ಕೆ ' ತುಸು ' ಅಷ್ಟೆ. ಅವರಿಬ್ಬರ ಮಟ್ಟಿಗೆ ಅರ್ಧಗಂಟೆ ಯಷ್ಟು ಹೊತ್ತು ಕಳೆದಿರಬೇಕು. ಆದರೆ ತುಟಿ ಮೀರಿ ಮಾತು ಹೊರಬೀಳ ದಿದ್ದರೂ, ಒಬ್ಬರ ಅಂತರಂಗದಲ್ಲಿ ಮೂಡಿದ ಸಂದೇಹ ಸಂತಾಪಗಳಿಗೆ ಮರು ಕ್ಷಣದಲ್ಲೇ ಮತ್ತೊಬ್ಬರ ಅಂತರಂಗದಿಂದ ಸಮಾಧಾನ ಸಹತಾಪಗಳು ಹೊರಹೊಮ್ಮುತ್ತಿದ್ದುವು. ಉದಾಹರಣೆಗೆ: ವಾರ್ಡನರ ಒಳಮನಸ್ಸು, ' ನೀನು ಇಷ್ಟು ಬುದ್ಧಿವಂತನಾಗಿದ್ದೂ ಕೂಡ ಏನು ಪ್ರಯೋಜನವಾಯಿತು? ಕುದಿಯುವ ತನಕ ಉರಿ ಹೊತ್ತಿಸಬಾರದಾಗಿತ್ತು ' ಎಂದು ಹೇಳುವಷ್ಟರಲ್ಲೇ, ಶೀನನ ಅಂತರಂಗ, ' ಅಲ್ಲಾ, ಸಾರ್, ಬೇಡ ಬೇಡ ಅಂತ ಎಷ್ಟು ಹೇಳಿದರೂ ಅಪ್ಪ ನನಗೇ ಕಾಗದ ಬರೆಯುತ್ತಾನೆ, ಈ ರೀತಿ; ಈ ಹಾಳು ಕಪ್ಪು ಬಹು- ಮಾನ ಬಂದದ್ದೂ ನನ್ನ ತಪ್ಪೇ ? ಅವನಿಗೆ ವಿಪರೀತ ಕಣ್ಣುಬೇನೆ, ಸಾರ್ ' ಎಂದು ಉತ್ತರ ಕೊಟ್ಟಿತು. ಅದನ್ನು ಹೇಗೋ ತಿಳಿದುಕೊಂಡ ವಾರ್ಡನರ ಮನಸ್ಸು, ' ಆದರೂ ಇಡೀ ಭರತಖಂಡದಲ್ಲಿ ಎಲ್ಲರೂ ಅಣ್ಣ-ತಮ್ಮಂದಿರ

ಹಾಗಿರಬೇಕು' ಎಂದು ಬರೆದ ನೀನು ಅವರಿಗೆಲ್ಲಾ ಒಳ್ಳೇ ಉದಾಹರಣೆಯನ್ನು ತೋರಿಸುತ್ತಿದೀಯಲ್ಲಾ!" ಎಂದು ಅನುಮಾನಿಸುವುದರೊಳಗೆ, ಅವರ ಭಾವವನ್ನರಿತ ಶೀನ, ತಡೆಯಲಾರದೆ, ಬಿಗಿದ ಬಾಯನ್ನು ಬಿಡಿಸಿ, ಗಟ್ಟಿಯಾಗಿ, 'ಕ್ಷಮಿಸಿ ಸಾರ್! ಆ ಸ್ಪರ್ಧೆಗೆ ನಾನು ಸೇರಬಾರದಾಗಿತ್ತು; ನಿಜವಾಗಿಯೂ ನನಗೆ ಅಧಿಕಾರವಿಲ್ಲ; ಈಗಲೂ ನನ್ನ ಪ್ರಬಂಧವನ್ನು ಹಿಂದಕ್ಕೆ ಕಳುಹಿಸಿ ಅಂತ ತಂಡದ ಅಧ್ಯಕ್ಷರಿಗೆ ಬರೆದುಬಿಡಿ, ಸಾರ್, ನನ್ನದೇನೂ ಅಭ್ಯಂತರವಿಲ್ಲ.' ಎಂದು ಹೇಳಿದ.

ಅದಕ್ಕೆ, ವಾರ್ಡನರು ಒಂದು ಕಿರುನಗೆ ಬೀರುತ್ತಾ 'ಪುಂಡರ ತಂಡಕ್ಕೆ ಅಧ್ಯಕ್ಷ ಅಂತ ಒಬ್ಬರಿರುವುದೇ ಇಲ್ಲ; ಅಲ್ಲಿ ಎಲ್ಲರೂ ಅಧ್ಯಕ್ಷರೇ!...... ಅದಿರಲಿ! ಅಣ್ಣಾ ತಮ್ಮ ಎಂಬುದು ಹೋಗಿ, ಮಾರ ಮಾರಿ ಎಂಬುದು ಬಂದಿದೆ ಅಂತ ನನಗೆ ಗೊತ್ತಿರಲಿಲ್ಲ. ನಿಮ್ಮ ನಡತೆ ನುಡಿತಗಳಿಂದ ಹಾಸ್ಟಲಿನ ಹವಾ ವಿಷಯಿಸುತ್ತದೆ. ನೀವಿಬ್ಬರೂ ಬೇರೆ ಬೇರೆ ರೂಂಗಳಿಗೆ ಈಗಲೇ ಹೊರಡಬೇಕು.'

'ಆಗುವುದಿಲ್ಲ, ಸಾರ್! ನಾವು ಬೇರೆ ಬೇರೆ ಹಾಸ್ಟಲುಗಳಲ್ಲೇ ಇರಬೇಕು.'

'ಮತ್ತೂ ಒಳ್ಳೆಯದು....ನಾನು ಈಗಲೇ ಉದಾರಶಿರೋಮಣಿಗಳಿಗೆ ಬರೆಯುತ್ತೇನೆ.'

'ಬೇಡಿ, ಬೇಡಿ, ನಾವೇ ಇಲ್ಲಿ ಹೇಗಾದರೂ ಸರಿಪಡಿಸಿದರಾಯಿತು; ತಂದೆಯವರು ಈಗ ತುಂಬಾ ಕಷ್ಟದಲ್ಲಿದಾರೆ. ಈ ಸಮಾಚಾರ ಕೇಳಿದರೆ ಬಹಳ ನೊಂದುಕೊಳ್ಳುತ್ತಾರೆ....'

'ಬರಲಿ! ನಿಮ್ಮ ಯೋಗ್ಯತೆ ಏನೂ ಅಂತ ಅವರೂ ತಿಳಿದುಕೊಳ್ಳಲಿ.'

ವಾರ್ಡನರು ಎದ್ದು ಆಫೀಸ್ ರೂಮಿಗೆ ಹೊರಟುಹೋದರು. ಹತ್ತಿಪ್ಪತ್ತು ನಿಮಿಷಗಳ ನಂತರ ಬೋರ ಬಂದು ಹನುಮಂತನ ಟ್ರಂಕು ಹಾಸಿಗೆಗಳನ್ನು ಎತ್ತಿಕೊಂಡು ಹೋದ. ಬಿಸಿಲು ಕಾಯುತ್ತಿದ್ದ ಹುಡುಗರೆಲ್ಲರೂ ಶೀನನ ಕೋಣೆ ಕಿಟಕಿಯ ಬಳಿ ಇಣಿಕಿ ನೋಡುತ್ತಾ 'ಅಣ್ಣನನ್ನು ಓಡಿಸಿಬಿಟ್ಟೆಯೇನೋ? ಭೂಪ, ಕಣೋ ನೀನು, ಭೂಪ!' ಎಂದು ಅಣಕಿಸಿ

ದರು; ಕಿಲಕಿಲ ನಕ್ಕರು. ಬಂದ ಕೋಪದಲ್ಲಿ ಅವರ ಮುಖಗಳ ಮೇಲೆ ಉಗಿದಾದರೂ ಅವರನ್ನು ಓಡಿಸೋಣವೆನಿಸಿತು. ಆದರೆ, ಆಗ ಬೋರ ಮತ್ತೆ ಬಂದು ' ಅಯ್ಯನವರ 'ಡಿಸ್ನೇರಿ' ಕೊಡಿ, ಬುದ್ದಿ ' ಎಂದ. ಅಲ್ಲದೆ, ಊಟದ ಘಂಟೆ ಬೇರೆ ಹೊಡೆಯಿತು. ಕೀಟಲೆ ತೆಗೆದ ಹುಡುಗರೆಲ್ಲರೂ ದಡದಃನೆ ಓಡಿ ಮಾಯವಾದರು......ಶೀನ ಬಾಗಿಲು ಹಾಕಿ, ಮೇಜಿನ ಮೇಲೆ ಇಟ್ಟಿದ್ದ ಒತ್ತುವ ಕಾಗದದ ಮೇಲೆ ಕಂಬನಿ ಸುರಿಸುತ್ತಾ ಬಹಳ ಹೊತ್ತು ಕುಳಿತಿದ್ದ.

—

## ಎರಡನೆಯ ಅಧ್ಯಾಯ

# ಮೃತ್ಯುವಿನ ಮಹದಾನಂದ

•

ಆದರೆ ಹಿಡಿದು ಸದ್ದು ...... ... .. **ಕಾರಂತ**

ರೇಂತ ರಾಗ ಎಳಿಯೋದೆಲ್ಲ
ನಡದ್ದು ಹೋಮಂಗಿದ್ರೆ. . . . .. **ರತ್ನ**

ಗಾನವನು ಹಾಡುವೊಡೆ
ಗಾಯಕನೆ ಬಾ ಇಲ್ಲಿ!............**ಪುಟ್ಟಪ್ಪ**

•

ತನ್ನ ಗೋಳು ಕೇಳಿದರೆ ಕರುಳು ಬೇಯುವ ಗೆಳೆಯ ಇಡೀ ಕಾಲೇಜದಲ್ಲೇ ಹನುಮಂತನಿಗೆ ಒಬ್ಬರೂ ಇರಲಿಲ್ಲವೆನ್ನಬಹುದು. ಬಿ. ಎ. ಪರೀಕ್ಷೆಯಲ್ಲಿ ಆಗಲೇ ನಾಲ್ಕು ಸಲ ಫೇಲ್ಸು ತಿಂದದ್ದರಿಂದ ಅವನ ಒಡನೋದುಗರೆಲ್ಲರೂ ಹನುಮಂತನಿಗಿಂತ ಕಿರಿಯವರಾಗಿಯೇ ಇದ್ದರು; ಅವನಿಗಿಂತ ಉತ್ಸಾಹಿಗಳಾಗಿದ್ದರು; ಹುಳಿಪಂತರಾಗಿದ್ದರು. ಅದೂ ಅಲ್ಲದೆ, ಹನುಮಂತನದು ಸ್ವಲ್ಪ ಅಳುಮೋರೆ; ವರ್ಷೇ ವರ್ಷೇ ಪರೀಕ್ಷಕರು ಎತ್ತಿ ಆಡಿಸಿದ ಮಂಗಳಾರತಿಯ ಹೊಗೆಯಿಂದ ಅದಕ್ಕೆ ಮಸಿ ಹಿಡಿದಿತ್ತು. ತಗ್ಗು ಮೂಗು, ಉಬ್ಬು ಹಲ್ಲು. ಸಾಲದುದಕ್ಕೆ ಎದ್ದು ಕಾಣುವ ಕೆನ್ನೆ ಎಲುಬುಗಳು.... ಆದದ್ದು ೨೫ ಆದರೂ, ಹತ್ತಿರದಿಂದ ನೋಡಿದವರೆಲ್ಲರೂ ಹನುಮಂತನಿಗೆ ೩೦ ವರ್ಷ ವಯಸ್ಸು ಕಟ್ಟುತ್ತಿದ್ದರು. ಆದ್ದರಿಂದ, ತರುಣರೊಬ್ಬರೂ ತಮ್ಮ 'ಹವ್ಯಾಸಂಗ'ವನ್ನು ಬಿಟ್ಟು ಹನುಮನ ಸಮೀಪಕ್ಕೆ ಬರುತ್ತಲೇ ಇರಲಿಲ್ಲ. ಅಥವಾ, ಒಬ್ಬಿಬ್ಬರು ಬಂದರೂ ಅವನಿಂದ ಪುಡಿನಶ್ಯ ಎರವಲು ತೆಗೆದುಕೊಂಡು ಕೂಡಲೇ ದೂರ ಸರಿದುಬಿಡುವರು.

ಇಂತಹ ತಿರುಕರಲ್ಲಿ ಒಬ್ಬ ಮಾತ್ರ 'ಹನುಮಂತನ ಸ್ನೇಹಿತ ನಾನು; ಅವನ ಆರೋಗ್ಯ ಆರ್ಥಿಕಸ್ಥಿತಿ ಆಸೆ-ಪ್ರತ್ಯಾಸೆಗಳು ಇವುಗಳ ವಿಷಯವಾಗಿ ನನಗೆ ತಿಳಿದಿರುವ ಮಟ್ಟಿಗೆ ಬೇರೆ ಯಾರಿಗೂ ತಿಳಿಯದು.' ಎಂದು ಹೇಳಿ-ಕೊಂಡು ಹೆಮ್ಮೆಪಡುವಷ್ಟು ಹತ್ತಿರಕ್ಕೆ ಬಂದಿದ್ದ.

ಅವನ ಹೆಸರು ಮೃತ್ಯುಂಜಯ; ಅಂದರೆ, 'ಮೃತ್ಯು'. ಅವರಿಬ್ಬರಿಗೂ ಸ್ನೇಹ ಬೆಳೆದದ್ದು ಮೂಗಿನ ದಾಹದಿಂದ ಮಾತ್ರ ಅಲ್ಲ, ಮೃತ್ಯು ಹನುಮಂತ ಶೀನರ ಸೋದರಮಾವನ ಮಗ. ಅಲ್ಲದೆ ಅವರಿಬ್ಬರನ್ನೂ ಬಿಗಿ ಹಿಡಿದಿದ್ದ ಬೇರೊಂದು ಆಕರ್ಷಣ-ಶಕ್ತಿಯೂ ಇತ್ತು. ಅದೊಂದು ವಿಚಿತ್ರ ಸಂಘಟನೆ! ಎರಡು ವರ್ಷದ ಹಿಂದಿನ ಮಾತು. ಅವರಿಬ್ಬರೂ ಕೆರೆ ಏರಿ ಮೇಲಿನ ಹುಲ್ಲು ದಿಬ್ಬದಲ್ಲಿ ಮಲಗಿ, ನಶ್ಯವೇರಿಸುತ್ತಾ, ಪಾಠ ಹೇಳುವವರ ಬೆಪ್ಪುತನವನ್ನೂ ಪರೀಕ್ಷಕರ ಕಲ್ಲುತನವನ್ನೂ ಕಠೋರವಾಗಿ ಟೀಕಿಸುತ್ತಿದ್ದರು. ಅನತಿ ದೂರದಲ್ಲೇ ಚಿತ್ರದಲ್ಲಿ ಬರೆದ ಹಾಗೆ ಅಲುಗಾಡದೆ ನಿಂತು ಹಗಲು-ಕನಸು ಕಾಣುತ್ತಿದ್ದ ಒಂದು ಕತ್ತೆ ಹೊರತು ಸುತ್ತಲೂ ಒಬ್ಬರೂ ಇರಲಿಲ್ಲ.... ಬರಬರುತ್ತಾ ಅವರಿಬ್ಬರ ಆಕ್ರೋಶ ಕಡಿಮೆಯಾಗಿ, ಒಬ್ಬರ ಮಾತು ಇನ್ನೊಬ್ಬರ ಕಿವಿಗೆ ಕರ್ಕಶವಾಗಿ, ಇಬ್ಬರಿಗೂ ಝೊಂಪು ಹತ್ತಿತು......ಆಗ, ಅಕಸ್ಮಾತ್ತಾಗಿ ಹೊರಟ ಒಂದು ಹೇಷಾರವವು ಅಲೆ ಅಲೆಯಾಗಿ ಮೊಳಗಿ ಆಕಾಶವನ್ನು ಭೇದಿಸಿ ದಿಗಂತವನ್ನು ಮುಟ್ಟಿ ಮಾರ್ದನಿಕೊಟ್ಟಿತು..ಹೀಗೆ ಜೋರಾಗಿ ಕಿರಿಚುತ್ತಾ ಆ ಕತ್ತೆ ದೂರಕ್ಕೆ ಓಡಿಹೋಯಿತು....

ದೇವರು ಯಾವ ಪುಣ್ಯಶ್ಲೋಕನಿಗೆ ಎಂತಹ ಸಾಮರ್ಥ್ಯವನ್ನು ಅನುಗ್ರಹಿಸಿರುತ್ತಾನೋ, ಯಾವ ಗಂಟಲಲ್ಲಿ ಯಾವ ನಾದ ಅಡಗಿರುತ್ತದೋ, ಬಲ್ಲವರು ಯಾರು?

ಹನುಮಂತ ಥಟಕ್ಕನೆ ಎದ್ದು ಕುಳಿತ. ಕುಳಿತವನು ನನು ಕೆಮ್ಮಿದ. ಆಮೇಲೆ, ವಕ್ಷಸ್ಥಳವನ್ನು ವಿಸ್ತರಿಸಿ ಕೋಶಗಳೆರಡರಲ್ಲೂ ಶ್ವಾಸ ತುಂಬಿ-ಕೊಂಡು, ಅಷ್ಟೇ ಆರ್ಭಟದಿಂದ ಅಂತಹದ್ದೇ ಒಂದು ಆಸ್ಫೋಟನಲಹರಿಯಿಂದ, ಮೊಳಗಿನಿಂದ ತಾನೂ ಒಂದು ಸಾರಿ ವೈಭವದಿಂದ ಕಿರಿಚಿದ! ಓಡಿ ಕಣ್ಮರೆಯಾಗಿದ್ದ ಆ ವಿಶ್ವಾಮಿತ್ರಸೃಷ್ಟಿ ಬಡಬಡನೆ ಹಿಂದಕ್ಕೆ ಬಂತು. ಆಶ್ಚರ್ಯದಿಂದ ದಿಗ್ಭ್ರಮೆ ಹಿಡಿದು, ಕಲ್ಲುಕತ್ತೆಯಂತೆ, ಹತ್ತು ಹೆಜ್ಜೆ

ದೂರದಲ್ಲೇ ಅವರಿಬ್ಬರನ್ನೂ ನೋಡುತ್ತಾ ನಿಂತಿತು. ಆದರೆ, ಕತ್ತೆಗಿಂತ ನೂರ್ಮಡಿಯಾದ ಕುತೂಹಲವು ಮೃತ್ಯುಂಜಯನಿಗುಂಟಾಯಿತು. ಕೇವಲ ಮಾನವನಲ್ಲಿ ಇಷ್ಟು ಮೃಗೀಯತೆ ಇರುವುದೆಂದು ಅವನಿಗೆ ಅದುವರೆಗೂ ತಿಳಿಯದು. ಸಹಜಗುಣದಿಂದ ಕತ್ತೆ ಮಾಡಿದ ಧ್ವನಿಗಿಂತ ಪ್ರತಿಭೆ ಉತ್ಸಾಹ ಗಳಿಂದ ಹನುಮಂತ ಅದನ್ನು ಅನುಕರಣಮಾಡಿದ್ದೇ ಮೃತ್ಯುವಿಗೆ ಹೆಚ್ಚು ಚಿತ್ತಾಕರ್ಷಕವಾಗಿತ್ತು. ಅಲ್ಲದೆ, ಮೃತ್ಯುವಿಗೆ ಮತ್ತೊಂದು ವಿಷಯವೂ ತಿಳಿದಹಾಗಾಯಿತು. ತಾನು ಅದೂವರೆಗೂ ನಶ್ಯಕ್ಕಾಗಿ ಪೂಜಿಸುತ್ತಿದ್ದ ಆ ಮೂರ್ತಿ ಈಗ ಒಂದು ಹೊಸ ಕಳೆಯಿಂದ ರಾರಾಜಿಸುತ್ತಿತ್ತು! ನೆಂಟರಿಷ್ಟರ ಚುಚ್ಚುಮಾತುಗಳಿಂದ ಒಂದು ರೀತಿಯ ಪೆಚ್ಚುಮುದ್ರೆ ಹನುಮಂತನ ಮುಖದಲ್ಲಿ ನಿಂತುಬಿಟ್ಟಿತ್ತು. ಆದರೆ, ಸುಖಪುರುಷರಾದ ಇತರ ಹುಡುಗ ರಂತೆ ಹನುಮಂತನೂ ಲೀಲಾಜಾಲವಾಗಿ ನಕ್ಕು ನಗಿಸಬಲ್ಲ ಎಂಬುದನ್ನು ಹೊಸದಾಗಿ ಪತ್ತೆ ಹಚ್ಚಿದಾಗ ಮೃತ್ಯುವಿನ ಆನಂದಕ್ಕೆ ಪಾರವೇ ಇರಲಿಲ್ಲ.

'ಹನುಮಂತಾ! ಎಂತಹ ದಿವ್ಯವಾದ ಅಣಕ! ಮನುಷ್ಯಮಾತ್ರದವ ನಿಂದ ಇದು ಸಾಧ್ಯವಿಲ್ಲ......ಆಹಾ! ಒಂದು ಸಾರಿ ನೀನು ಹೀಗೆಯೇ ನಮ್ಮ ಯೂನಿಯನ್ನಲ್ಲಾಗಲಿ ಹಾಸ್ಟಲಿನಲ್ಲಾಗಲಿ ಕಿರಿಚಿ ತೋರಿಸಬೇಕು. ಇಷ್ಟು ಸೊಗಸಾದ ಸರಕು ನಿನ್ನ ಕಂಠದಲ್ಲಿದೆ ಅಂತ ಗೊತ್ತಾದರೆ, ಅದಕ್ಕೆ ವಿಶ್ರಾಂತಿ ಕೂಡ ಕೊಡುವುದಿಲ್ಲ ಹುಡುಗರು. ಕಾಲೇಜಲ್ಲೆಲ್ಲಾ ಅಗ್ರಪೂಜೆ ನಿನಗೇ ಸಿಗುತ್ತದೆ. ಯಾವ ಅಸೋಸಿಯೇಷನಿಗೆ ಬೇಕಾದರೂ ನೀನು ಸೆಕ್ರೆಟರಿ ಆಗಬಹುದು. ಪ್ರಿನ್ಸಿಪಾಲರೂ ಕೂಡ ನಿನ್ನ ಕೈ ಹಿಡಿದು ಕುಲುಕು- ತ್ತಾರೆ; ಬಿಡುವುದೇ ಇಲ್ಲ. ಇನ್ನುಮೇಲೆ ನೀನು ಡಿ. ವಿ. ಜಿ. ಅವರ ಆ ಕವನವನ್ನ ಬಾಯಲ್ಲಿ ಹೇಳಲೇಬಾರದು. ವನಸುಮವಾಗಿ ವಿಕಸಿಸಿ ಏನು ಪ್ರಯೋಜನ? ವಿವೇಕಾನಂದರು ಹೇಳಿದರಲ್ಲಾ, 'ಉತ್ತಿಷ್ಠತ, ಜಾಗ್ರತ' ಅಂತ, ಹಾಗೆ ಮುಂದಕ್ಕೆ ಬರಬೇಕು..ಆಹಾ! ಎಷ್ಟು ಚೆನ್ನಾಗಿತ್ತು.. ಆ ಕತ್ತೆಗೇ ಹುಚ್ಚು ಹಿಡಿಸಿಬಿಟ್ಟಿದ್ದೀಯಲ್ಲಾ!..ಎಷ್ಟು ವರ್ಷದ ಅಭ್ಯಾಸ! ಏನು ಕಥೆ!....'

'ಅಯ್ಯೋ ಮೃತ್ಯು! ಅಭ್ಯಾಸವೂ ಇಲ್ಲ, ಗಿಭ್ಯಾಸವೂ ಇಲ್ಲ. ಹೇಗೋ ಥಟಕ್ಕನೆ ಬಂತು. ತಡೆಯಲಾರದೆ ಹೋದೆ..ಆದರೆ, ದಮ್ಮಯ್ಯ, ಒಬ್ಬರಿಗೂ

ಹೇಳಬೇಡ. ಮೃತ್ಯು! ನನ್ನಾಣೆ, ಸತ್ಯದಾಣೆ....ಕಾಲೇಜಲ್ಲಿ ಈ ಸಮಾಚಾರ ಒಂದು ಪಿಳ್ಳೆಗೆ ತಿಳಿದುಬಿಟ್ಟರೂ ಸಹ ಅವರು ನನ್ನನ್ನು ಸುಮ್ಮನೆ ಬಿಡುವುದಿಲ್ಲ..ಮೊದಲೇ ಶೀನನ ಕಡೆಯವರು ಜಾಂಬವಂತ, ಓಬೀರಾಯ ಅಂತ ನಾಮಕರಣ ಮಾಡಿದಾರೆ......ಇನ್ನು ಈ ಹಾಳು ಪ್ರಾಣಿಯ ಹೆಸರೊಂದು ಬಾಕಿ!'

'ನಿನಗಷ್ಟು ಕಷ್ಟವಾದರೆ ನಾನು ಯಾರಿಗೂ ಹೇಳುವುದಿಲ್ಲ..ಆದರೆ, ನೀನು ಮಾತ್ರ ನನಗೆ ಒಂದು ಮಾತು ಕೊಡಬೇಕು, ಸಾಧ್ಯವೋ?'

'ಏನದು?'

'ನನಗೆ ಯಾವಾಗ ಕೇಳಬೇಕು ಅಂತ ಆಸೆಯಾಗುತ್ತದೋ ಆವಾಗ ನಿನ್ನ ಹತ್ತಿರಕ್ಕೆ ಓಡಿಬರುತ್ತೇನೆ. ತಕ್ಷಣ ಇಬ್ಬರೂ ಇಲ್ಲಿಗೆ ಬರೋಣ. ಸ್ಥಳ, ಪ್ರಶಸ್ತವಾಗಿದೆ. ಈಗ ಕಿರಿಚಿದೆಯಲ್ಲಾ ಹಾಗೆಯೇ, ಅದೇ ಅಮರ ವಾಣಿಯಿಂದ....'

'ಹಾಳಾಗಿ ಹೋಗಲಿ! ಹಾಗೆಯೇ ಮಾತು ಕೊಟ್ಟೆ. ಆದರೆ ನೋಡು, ನಮ್ಮ ನಮ್ಮಲ್ಲೇ ಇರಬೇಕು, ಖಂಡಿತವೋ?'

'ಹುಂ. ಎಷ್ಟು ಸಲ ಕೇಳಿದರೂ ನೀನು ಬೇಜಾರುಪಟ್ಟುಕೊಳ್ಳಬಾರದು.'

'ಇಲ್ಲ.'—ಹೀಗೆ ಮೃತ್ಯುವಿಗೆ ಅಭಯ ಕೊಟ್ಟಮೇಲೆ, ಇಬ್ಬರೂ ಹಾಸ್ಟಲಿನ ಕಡೆ ಪಾದ ಬೆಳೆಸಿದರು.... ಆ ದಿನವೆಲ್ಲಾ ಮೃತ್ಯುಂಜಯನಿಗೆ ಮಿತಿಮೀರಿದ ಆನಂದ! ಹನುಮಂತನಿಗೆ ಎದೆ ತುಂಬ ಪಶ್ಚಾತ್ತಾಪ! ಅಂತೂ ಇಬ್ಬರಿಗೂ ಅಂದು ನಿದ್ದೆಯಿಲ್ಲ.

ಅಂದಿನಿಂದ ಇದುವರಗೆ ೭೬ ಸಲ ಮೃತ್ಯುವಿಗೆ ಕಿವಿಯ ಚಪಲ ಹೊರ ಸೋಡಿತ್ತು; ಹನುಮಂತನೂ ಅವನ ಆಸೆಯನ್ನು ಪೂರ್ಣಮಾಡಿದ್ದ.... ಪ್ರತಿಸಲವೂ ತನ್ನ ಡಯರಿಯಲ್ಲಿ ಅವನು '....ಬಲ್ಲುದೇ ಹೊತ್ತ ಕತ್ತುರಿಯ ಪರಿಮಳವ?' ಎಂಬ ಸಂಕೇತದಿಂದ ಈ ಸಂಕಟಸನ್ನಿವೇಶವನ್ನು ಗುರುತು ಹಚ್ಚಿ ಬರೆದನಾದ್ದರಿಂದ, 'ನೋಡು, ಮೃತ್ಯು, ಇದನ್ನೂ ಸೇರಿಸಿದರೆ ೭೭ ಆಯಿತು' ಎಂದು ಹನುಮಂತ ಮೃತ್ಯುವಿಗೆ ಲೆಕ್ಕ ಹೇಳುತ್ತಿದ್ದನು.

ಹೀಗೆ ಮೂಗು ಕಿವಿ ಎರಡರಿಂದಲೂ ಹನುಮಂತನಿಗೆ ಅಡಿಮೆಯಾಗಿ

ಬಿದ್ದಿದ್ದ ಮೃತ್ಯುವಲ್ಲದೆ ಹನುಮಂತನಿಗೆ ಬೇರೆ ಗೆಳೆಯರೇ ಇರಲಿಲ್ಲ. ಆದ್ದರಿಂದ, ವಸತಿ ಬದಲಾಯಿಸಿದ ಕೂಡಲೇ ಅವನು ಮೃತ್ಯುವಿಗೆ ವರದಿಯೊಪ್ಪಿಸಿ ಕೊಂಚ ಶಾಂತಿ ಪಡೆದಿದ್ದ.

ಮರುದಿನ ಕಾಲೇಜಿಗೆ ಹೋಗುತ್ತಿದ್ದಾಗಲೂ ಇಬ್ಬರಿಗೂ ಅದೇ ಮಾತು. 'ಶೀನ ಬಿ. ಎ. ಪಾಸು ಮಾಡಲಿ, ಎಂ. ಎ. ನೂ ಆಗಲಿ. ಆದರೆ, ಮೃತ್ಯು, ದೊಡ್ಡ ಮನುಷ್ಯ ಅಂತ ಅನ್ನಿಸಿಕೊಳ್ಳುವುದಕ್ಕೆ ಬಿ. ಎ.-ಗಿ. ಎ. ಬೇಕೇಬೇಕೇನು?' ಎಂದು ಹನುಮಂತ ಕೇಳಿದ. ಆಗ ಮೃತ್ಯು, ಅಕ್ಷರ ಮಾಲೆಯಿಂದ ಹೆಣೆದು ಕಟ್ಟಿರುವ ಬಾಲಂಗೋಚಿಯ ಸಹಾಯವಿಲ್ಲದೆ ಆಕಾಶದಲ್ಲಿ ಹಾರಾಡಿದ ಅನೇಕ ಗಾಳಿಪಟಗಳನ್ನು—ಕರ್ಣ, ಕಾಳಿದಾಸ, ಕಿಂಪುರುಷ ಕೀಚಕ, ಕುಬೇರ, ಕೂಸುಮರಿ ಇತ್ಯಾದಿಗಳನ್ನು—ಬಹು ಚಮತ್ಕಾರದಿಂದ ಉದಹರಿಸಿದ. ಹನುಮಂತನಿಗೆ ಕೊಂಚ ಸಮಾಧಾನವಾಯಿತು. 'ಎದೆ ಸೀಳಿದರೆ ಎರಡಕ್ಷರ ಬರದ ಪ್ರೊಫೆಸರ್ ಪಶುಪತಿರವರು, ಪ್ರೊಫೆಸರ್ ಇಂದ್ರು, ಪ್ರೊಫೆಸರ್ ಭೂತರಾಯರು—ಇವರೆಲ್ಲರೂ ಹಿಂದೂಸ್ತಾನದಲ್ಲೆಲ್ಲಾ ಕೀರ್ತಿ ಪಡೆದಿಲ್ಲವೆ?' ಎಂದು ಮೃತ್ಯು ಕೇಳಿದಾಗ, ಹನುಮಂತನಿಗೆ ಮತ್ತೂ ಧೈರ್ಯವಾಯಿತು. 'ಯಾರಿವರು?' ಎಂದು ಅವನು ನಡುವೆ ಬಾಯಿ ಹಾಕಿದ. 'ಪಶುಪತಿವರ ಸರ್ಕಸ್ಸು ನೀನು ನೋಡಿಲ್ಲವೋ? ಬಹಳ ಹೆಸರುವಾಸಿ. . . . ಸಮುದ್ರದ ನೀರು ಉಪ್ಪೋ, ಹುಳಿಯೋ ಎಂದು ಗೊತ್ತಿಲ್ಲದಿದ್ದರೂ ಕೂಡ, ಇಂದ್ರು ಅವರು ಸಾಮುದ್ರಿಕಶಾಸ್ತ್ರದಲ್ಲಿ ಪ್ರೊಫೆಸರಂತೆ. ಸಾವಿರಾರು ಜನ ಅವರ ಹತ್ತಿರ ಕೈ ತೋರಿಸಿ ಅವಲಕ್ಷಣ ಅನ್ನಿಸಿಕೊಂಡಿದಾರೆ. ಪ್ರೊ. ಭೂತರಾಯರು ಮಂತ್ರ ಮಾಟದಲ್ಲಿ ನುರಿತವರು; ಅವರ ಮುಖ ನೋಡಿದರೆ ಪಿಶಾಚಿಗಳೆಲ್ಲವೂ ಪರಾರಿ. ಇವರೆಲ್ಲರೂ ಪೇಪರುಗಳಲ್ಲಿ 'ಪ್ರೊಫೆಸರ್' ಅಂತ ಹೆಸರು ಹಾಕಿಕೊಳ್ಳುತ್ತಾರಲ್ಲೋ! ನಮ್ಮ ಪ್ರೊಫೆಸರುಗಳ ಫೋಟೋ ಪೇಪರಲ್ಲಿ ಬರಬೇಕಾದರೆ ಅವರು ಸಾಯಬೇಕು ಅಥವಾ ಕೆಲಸದಿಂದ ನಿವೃತ್ತರಾಗಬೇಕು. ಆದರೆ, ಡಿಗ್ರಿ ಇಲ್ಲದ ಪ್ರೊಫೆಸರುಗಳ ಫೋಟೋ ದಿನವೂ ಬರುತ್ತಲೇ ಇರುತ್ತವೆ.'

'ಅದೂ ಅಲ್ಲದೆ, ಮೃತ್ಯು, ಬುದ್ಧಿವಂತರೊಬ್ಬರೂ ವಿದ್ಯಾಭ್ಯಾಸದ ವಿಷಯವಾಗಿ ಒಂದು ಒಳ್ಳೆಯ ಮಾತನಾಡುವುದಿಲ್ಲವಲ್ಲಾ, ಅಂತೀನಿ.'

'ವಿದ್ಯಾವಂತ ಅಂದರೇನು ಗೊತ್ತೆ? ಗುಮಾಸ್ತಗಿರಿಗೆ ತಕ್ಕ ಪೆಡ್ಡು ವಂತಿಕೆ ಪಡೆದವನು, ಅಂತ, ಅಷ್ಟೆ!'

'ಹಾಗಾದರೆ, ಎಷ್ಟು ಬೇಗನೆ ಪಾಸು ಮಾಡುತ್ತಾನೋ ಅಷ್ಟು ಬೇಗ ಕತ್ತಿನ ಮೇಲೆ ನೊಗ!'

'ಹನು! ಶೀನನ ಹಣೆಯುಬರಹವೂ ಅಷ್ಟೆ, ನೋಡುತ್ತಿರು!'

ಆ ಸಮಯಕ್ಕೆ ಸರಿಯಾಗಿ ಅವರಿಬ್ಬರೂ 'ಇಂಗ್ಲೀಷು ಹಾಲ್'ಗೆ ಬಂದುಬಿಟ್ಟಿದ್ದರು. ಹನುಮಂತ ಮೃತ್ಯುವಿನ ಎರಡು ಕೈಗಳನ್ನೂ ಹಿಡಿದು ಕೊಂಡು, 'ನೋಡು, ಮೃತ್ಯು, ಈ ವರ್ಷ ಢುಂಕಿ ಆಗಲಿ, ಆಗದೆ ಇರಲಿ, ಮುಂದಕ್ಕೆ ದಾರಿ ಯಾವುದೂ ಅಂತ ಈಗಲೇ ನಿರ್ಧರಿಸಬೇಕು. ಬಿರುಗಾಳಿಗೆ ಸಿಕ್ಕಿದ ಡೋಣಿಯ ಹಾಗೆ ಕೆಲವರು ಗಿರ್ರನೆ ಸುತ್ತುತ್ತಾ ಇದಾರಲ್ಲಾ, ಹಾಗೆ ಅಲೆಯಕೂಡದು ನಾನು. ಹೆಸರಾಗಿ ಬಾಳುವ ವಿಧಾನ ಯಾವುದು ಅನ್ನುವುದನ್ನು ಯೋಚನೆ ಮಾಡಿ ಗುರುತುಹಾಕಿರು; ಸಂಜೆ ಚರ್ಚೆ ಮಾಡೋಣ' ಎಂದು ಹೇಳಿದ. ಆಮೇಲೆ, ಅವರುತಮ್ಮ ತಮ್ಮ ಪಾಠ ಗಳಿಗಾಗಿ ಬೇರೆ ಬೇರೆ ಹಾಲುಗಳಿಗೆ ಹೋದರು.

ಹನುಮಂತ 'ಇಂಗ್ಲೀಷು ಹಾಲ್'ಗೆ ನುಗ್ಗಿದ. ಇಂಗ್ಲೀಷು ಪ್ರೊಫೆಸರ್‌ರವರು, 'ವೈಯಾಕರಣನನ್ನು ಹೂತಿದ್ದು' ಎಂಬ ಸ್ವಾರಸ್ಯವಾದ ಕವನವನ್ನು ಕೂಗಿ ಹೇಳಿ, ತುಂಡು ತುಂಡಾಗಿ ಕತ್ತರಿಸಿ, ಗದ್ಯಕ್ಕೆ ತಿರುಗಿಸಿ, ಚಿತ್ರಹಿಂಸೆ ಮಾಡುತ್ತಿದ್ದಾಗ, ಹನುಮಂತನ 'ಮನೋಬುದ್ಧಿ ಅಹಂಕಾರ' ಗಳು ಶೀನನನ್ನು ಮೀರಿಸುವ ಪ್ರಸಿದ್ಧಿಯನ್ನು ಪಡೆಯುವುದು ಹೇಗೆ ಎಂಬ ತೊಡಕಿನಲ್ಲೇ ತೊಳಲುತ್ತಿದ್ದುವು....'ಆಂಗ್ಲ ಕವನಗಳನ್ನು ರಚಿಸಿ ಎರಡ ನೆಯ ಷೇಕ್ಸ್ಪಿಯರೆನಿಸೋಣವೇ?....ಬೇಡ. ಇಂತಹ ಪ್ರೊಫೆಸರುಗಳೇ ಅವುಗಳನ್ನು ಕಾಲೇಜುಗಳಲ್ಲಿ ಪಾಠ ಹೇಳುವ ನೆಪದಿಂದ ಹಿಸುಕಿ ಹುಡಿ ಗುಟ್ಟುವರಲ್ಲಾ! ನಾವು ಹೆತ್ತ ಕೃತಿಗಳನ್ನು ಇಂತಹ ಕಟುಕರು ಕೊಂದು ಹಾಕುತ್ತಾರಲ್ಲಾ....ಅದೂ ಅಲ್ಲದೆ, ಕಾಯಿಪಲ್ಯ ತಿಂದು ನೀರುಮಜ್ಜಿಗೆ ಕುಡಿದು ಉರಿಬಿಸಿಲಲ್ಲಿ ಓಡಾಡುವ ಕರಿಯ ಜನರಿಗೆ ಆಂಗ್ಲಮಾತೆ ಸುಲಭ ದಲ್ಲಿ ತನ್ನ ಬೊಕ್ಕಸವನ್ನು ನೀಡುವುದಿಲ್ಲ, ಖಂಡಿತ........ಹಾಗಾದರೆ, ಸ್ವತಂತ್ರವಾಗಿ ಕವನಗಳನ್ನು ಕಟ್ಟುವುದು ನಮ್ಮಿಂದ ಅಸಾಧ್ಯ.' ಕರಿಯ

ಜನರಿಗೆ ಇಂಗ್ಲೀಷು ಕರಗತವಾಗುವುದಿಲ್ಲವೆಂಬ ತನ್ನ ಸಿದ್ಧಾಂತವನ್ನು ಸಮರ್ಥಿಸಿ ಹನುಮಂತ ಒಂದು 'ಅಮೋಘವಾದ ಲೇಖನ'ವನ್ನು 'ಎಚ್ಚೆತ್ತ ಕನ್ನಡ' ಎಂಬ ಪತ್ರಿಕೆಗೆ ಕಳುಹಿಸಿದ್ದ. ಅದನ್ನು ಅಚ್ಚುಹಾಕಿಸಲು ಸಾಧ್ಯವಾಗಲಿಲ್ಲವಲ್ಲಾ ಅಂತ, ಪಾಪ, ಆ ಸಂಪಾದಕರು ತುಂಬಾ ವಿಷಾದಿಸಿದರಂತೆ, ಅವರೇ ಹನುಮಂತನಿಗೆ ಕಾಗದ ಬರೆದಿದ್ದರು!

'ಆಂಗ್ಲ ಸಾಹಿತ್ಯದಲ್ಲಿ ತೊಳಗುತ್ತಿರುವ ಮಣಿಗಳನ್ನು ಭಾಷಾಂತರ ಮಾಡಿ, ಅಂದರೆ 'ಗಾಜಿಸಿ', ಕನ್ನಡಮ್ಮನ ಕೊರಳಿಗೆ ಹಾಕಿ ಕೃತಾರ್ಥನಾಗೋಣವೆಂದರೆ, ಹಾಳು ಇಂಗ್ಲೀಷು ಮೂಲವನ್ನ ಮೊದಲು ಅರ್ಥ ಮಾಡಿಕೊಳ್ಳಬೇಕಲ್ಲಾ. ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು ಅಂತ ವಿಮರ್ಶಕರು ಬೇರೆ ಕಾದು ಕುಳಿತಿದಾರೆ. ಪ್ರತಿಯೊಬ್ಬ ಕನ್ನಡಿಗನೂ ಕನ್ನಡದಲ್ಲೇನೋ ಮಹಾಪಂಡಿತ, ಅನುಮಾನವಿಲ್ಲ! ಆದರೆ, . . . . ಇಂಗ್ಲೀಷು ? '

ಅಷ್ಟುಹೊತ್ತಿಗೆ ವೈಯಾಕರಣನ ಅಪರಕರ್ಮವು ಸಂಪೂರ್ಣವಾಯಿತು. . . . ಹುಡುಗರೆಲ್ಲರೂ 'ಚರಿತ್ರೆ ಹಾಲ್'ಗೆ ಬಂದರು. ಚರಿತ್ರೆಯ ಪ್ರೊಫೆಸರ್‌ರವರು ಒಬ್ಬ ನೇಟಿವ್ ಡಾಕ್ಟರ್! ಅಂದರೆ, ಆಯುರ್ವೇದ ಪಂಡಿತ ಅಲ್ಲ; ಹಿಂದೂಸ್ತಾನದ ವಿಶ್ವವಿದ್ಯಾನಿಲಯವೊಂದರಿಂದಲೇ ಅವರು ಪಿಎಚ್. ಡಿ. ಎಂಬ ಪದವಿಯನ್ನು ಧಕ್ಕಿಸಿಕೊಂಡಿದ್ದರು! ಮನೆ ಹೆಂಚಿನ ಮೇಲೆ ಟಪಟಪನೆ ಆನೆಕಲ್ಲಿನ ಮಳೆ ಬೀಳುವ ರೀತಿಯಲ್ಲೇ ಅವರು ಎಡೆಬಿಡದೆ ಒಟಗುಟುತ್ತಿದ್ದರು. ಅವರ ಉಪನ್ಯಾಸವು ಹನುಮಂತನ ವಿಚಾರಸರಣಿಗೆ ಒಳ್ಳೆಯ ಹಿಮ್ಮೇಳವನ್ನೊದಗಿಸಿತು. 'ಷೇಕ್ಸ್ಪಿಯರ್ ಬೇಡ. ನೆಪೋಲಿಯನನ್ನು ಮೇಲುಪಂಕ್ತಿಯಾಗಿಟ್ಟುಕೊಂಡು ಬದುಕನ್ನು ನೇರ್ಪಡಿಸೋಣವೇ? ಅವನೂ ನನ್ನಹಾಗೆನಶ್ಯ ಹಾಕುತ್ತಿದ್ದ! . . ಆದರೆ, ಪರದೇಶೀ ವೀರರನ್ನನುಸರಿಸಿದರೆ, ಭಾರತಾಂಬೆ ಏನಂದಾಳು? ಶಿವಾಜಿ? ಏಕಾಗಬಾರದು? ಭಕ್ಷ್ಯಭೋಜ್ಯಗಳನ್ನು ತುಂಬಿದ ಕುಕ್ಕೆಯಲ್ಲಿ ಕುಳಿತು ಹೊರಬಂದರೆ, ಈಗಿನ ಕಾಲದಲ್ಲಿ ಕ್ಷಾತ್ರವೆನಿಸುತ್ತದೆಯೇ? ಬೇಡ. ಕಾಲಧರ್ಮ ಬದಲಾಯಿಸಿದೆ. . ಅಲ್ಲದೆ ಆಲಾಂಗೀರನೂ ಮತ್ತೊಮ್ಮೆ ಅವತಾರ ಮಾಡಬೇಕಾಗುತ್ತದೆ! . . ರಂಜಿತ್ ಸಿಂಹ? . . ಆತನಿಗಿದ್ದುದು ಒಂದೇ ಕಣ್ಣು! . . . . ಹೈದರ್? . . ನನಗೆ ಬೆನ್ನುಫಣಿಯ ಸೂಚನೆಯೇ ಇಲ್ಲವಲ್ಲಾ!'—ಹೀಗೆ ವಕ್ರವಕ್ರವಾಗಿ ಅವನ

ಮೆದುಳು ಉರುಳುತ್ತಿರುವಾಗಲೇ ಮೆಲ್ಲಮೆಲ್ಲನೆ ಹಿಮ್ಮೇಳದ ಸದ್ದಡಗಿತು. ಏಕೆಂದರೆ, ಹನುಮಂತರಾಯನಿಗೆ ನಿಧಾನವಾಗಿ ನಿದ್ದೆ ಹತ್ತಿಬಿಟ್ಟಿತ್ತು. ತೂಕಡಿಸುವ ಭಾರದಿಂದ ಅವನು ತನ್ನ ಶಿರಸ್ಸನ್ನು ಮಗ್ಗುಲಲ್ಲಿ ಕುಳಿತಿದ್ದ ವಿದ್ಯಾರ್ಥಿಯೊಬ್ಬನ ಎಡಭುಜದ ಮೇಲಿರಿಸಿದನು. ಆತ, ಪಾಪ, ಪ್ರಾಣಿ ದಯಾ ಸಂಘದ ಉಪಾಧ್ಯಕ್ಷರ ನಾಲ್ಕನೆಯ ಮಗ—ಆಡುವುದಕ್ಕಿಲ್ಲ, ಅನು ಭವಿಸುವುದಕ್ಕಿಲ್ಲ! ಪ್ರೊಫೆಸರ್‌ರವರು 'ಸದ್ಯಕ್ಕೆ ಇಲ್ಲೇ ನಿಲ್ಲಿಸಿರುತ್ತೇನೆ; ಇನ್ನುಮುಂದೆ ಅಮಂಗಳ ಸನ್ನಿವೇಶ!' ಎಂದು ತಮ್ಮ ಪ್ರವಚನವನ್ನು ನಿಲ್ಲಿಸಿದಾಗ. ಆತ ಹನುಮಂತನನ್ನು ಮೆಲ್ಲನೆಚ್ಚರಿಸಿ, ಹೊರಕ್ಕೆ ಕರೆದು ಕೊಂಡು ಹೋದ.

ಹೊರಗಡೆ ಮೃತ್ಯು ಸಿದ್ಧ! 'ಬಾ! ಹನು! ಕತ್ತೆದಿಬ್ಬಕ್ಕೆ ಹೋಗೋಣ. ಅಲ್ಲಿ ಒಂದು ಸಾರಿ ನಾದಲೀಲೆ ನಡೆದುಬಿಡಲಿ. ಆಮೇಲೆ ಚರ್ಚೆಗೆ ಕುಳಿತು ಕೊಳ್ಳೋಣ' ಎಂದ. 'ಅಯ್ಯೋ! ಪ್ರಾರಬ್ಧವೆ! ಇವತ್ತು ನನಗೆ ಕೊಂಚವೂ ಲವಲವಿಕೆ ಇಲ್ಲ; ಮೂಗುತುಂಬಾ ನೆಗಡಿ ಬೇರೆ; ಕಂಠ ತೀರ ಕಟ್ಟಿದೆ; ತಲೆ ನೋವು; ನೀರಡಿಕೆ'—ಎಷ್ಟೆಷ್ಟೋ ಹೇಳಿ ನೋಡಿದ. ಊಹುಂ—ಮೃತ್ಯು ಬಿಟ್ಟರೆ ತಾನೆ? ಅವನ ಆಸೆಯನ್ನು ನೆರವೇರಿಸದೆ ಇದ್ದರೆ ಊರಲ್ಲೆಲ್ಲಾ ಡಂಗುರ ಹೊಡೆಯುತ್ತಾನೆ; ಕಾಲೇಜಲ್ಲಿ ಓದುವ, ಅಂದರೆ ಓದದ, ಹುಡುಗ ರೆಲ್ಲರೂ ತನ್ನ ಬಾಗಿಲ್ಮುಂದೆ ದೊಂಬಿ ಹೂಡಿ ಧಾಳಿ ಎಬ್ಬಿಸಿ ಬಿಡುತ್ತಾರೆ, ಎಂದು ಹನುಮಂತ ಹೆದರಿದನ್. 'ಧನುರ್ಮಾಸದ ಕುಳಿರ್ಗಾಳಿಯೊಳುಂ ಬೆಮರ್ದನ್.'

ಸರಿ! ಇಬ್ಬರೂ ಕೆರೆಯ ಕಡೆ ಕಾಲು ತಿರುಗಿಸಿದರು.... ಅಂದು ಹನುಮಂತ ಕಿರಿಚಿದ್ದು ಎಪ್ಪತ್ತೇಳನೆಯ ಸಲವಾದರೂ, ಮೊಟ್ಟಮೊದಲು ಕೇಳಿದಾಗ ಮೃತ್ಯುವಿಗೆ ಎಷ್ಟು ಆನಂದವಾಯಿತೋ ಅಷ್ಟೇ ಇಂದೂ ಅವನು ಸಂತೋಷವನ್ನು ಅನುಭವಿಸಿದನು. ಎಳೆಗರುವಿನ ಹಾಗೆ ಅವನು ಹನು ಮಂತನ ಸುತ್ತ ಕುಣಿದಾಡಿದ. 'ಅಬ್ಬಬ್ಬಾ!' 'ಅಬ್ಬಬ್ಬಾ!' ಎಂದು ಕೂಗಿಕೊಂಡ.

ಆದರೆ, ಹನುಮಂತನಿಗೆ ಮಾತ್ರ ಮುಖದಲ್ಲಿ ಹರ್ಷದ ಸುಳಿವೇ ಇರ ಲಿಲ್ಲ. ಅವನ ಸಂಕಟ ಅವನಿಗೆ; ಮೃತ್ಯುವಿಗೇನು ಗೊತ್ತು ಅವನ ಅಂತ ರಂಗದ ನೋವು?....'ಯಾರಾದರೂ ಪುಣ್ಯಾತ್ಮರು ಕಿರಿಚುವುದಕ್ಕೆ ಒಂದು

ಸ್ಪರ್ಧೆ ನಡೆಸಿದರೆ, ಬೆಳ್ಳಿ ಕಪ್ಪು ಹೊಡಿಯಬಹುದಲ್ಲಾ ಅಂತ ಕೊರಗುತ್ತಿ ದೀಯಾ ? ' ಅಂತ ಕೇಳಿದ . . . . ಹನುಮಂತನ ಮುಖಭಾವವನ್ನು ಕಂಡಾಗ, ' ಛೆ; ನನ್ನ ನಾಲಿಗೆಯನ್ನು ಸುಡಬೇಕು; ಹಾಗೆ ಕೇಳಬಾರದಾಗಿತ್ತು ನಾನು ! ಅವನಿಗೆ ಅಸಹ್ಯವಾದರೂ ನನಗೋಸ್ಕರ ಮಾತ್ರ ಕಿರಿಚಿ ತೋರಿಸು ತ್ತಿರುವವನನ್ನ ನಾನು ಹೀಗೆ ಅನ್ನಬಹುದೇ ? ' ಎಂದು ಮೃತ್ಯು ನೊಂದು ಕೊಂಡ . . . . . .

ಮೃತ್ಯು ತಂದಿದ್ದ ಕಾಗದದ ತುಂಡನ್ನು ಹುಲ್ಲಿನ ಮೇಲೆ ಇರಿಸಿ, ಇಬ್ಬರೂ ಎದುರುಬದುರಾಗಿ ಕುಳಿತು ಚರ್ಚೆಗೆ ಸಿದ್ಧರಾದರು. ' ಕಾಲೇಜು ಬಿಟ್ಟ ಮೇಲೆ ಏನು ಮಾಡಬೇಕು ಅಂತ ನಿನ್ನ ಸಲಹೆ ? ' ಎಂದು ಹನುಮಂತ ಕೇಳಿದ. ' ಮೊದಲನೆಯದಾಗಿ ನಾನು ಬರೆದಿರುವುದು **ವಿಟಮೀನುಗಳನ್ನು ಹಿಡಿದು ಮಾರುವುದು** ಅಂತ ' ಎಂದು ಮೃತ್ಯು ಮಾರುತ್ತರವಿತ್ತನು. ಅವುಗಳ ಸ್ವರೂಪವೇನು, ಎಲ್ಲಿ ದೊರೆಯುತ್ತವೆ, ಎಂಬುದನ್ನರಿಯದ ಹನು ಮಂತ, ' ಅಯ್ಯೋ ! ಈಜುವುದಕ್ಕೆ ಕಲಿಯದ ನಾನು ಮೀನು ಹಿಡಿದು ಮಾರುವುದೆಂದರೇನು ? ಬೆಸ್ತರ ಕೆಲಸ ಕೀಳು ಅಂತಲ್ಲ. ನೀರಿಗಿಳಿಯದೆ ಮೀನು ಹಿಡಿಯುವುದು ಹೇಗೆ ? ನೀರಿನಲ್ಲಿ ಬಿದ್ದು ಸಾಯುವುದೇ ನನ್ನ ಹಣೆ ಬರಹ ಅಂತ ಜಾತಕ ನೋಡಿ ಜೋಯಿಸರು ಬೇರೆ ಹೇಳಿದಾರೆ; ಅದನ್ನು ಕೇಳಿ ಹೆದರಿಕೊಂಡು ನನ್ನ ತಂದೆ ಕೂಡ ಈಜುವುದಕ್ಕೆ ಚೆನ್ನಾಗಿ ಅಭ್ಯಾಸ ವಾಗುವ ವರೆಗೂ ನೀರಿಗಿಳಿಯಲೇ ಕೂಡದು ಅಂತ ಕಟ್ಟಪ್ಪಣೆ ಮಾಡಿದಾರೆ. . . . . ಆಮೇಲೆ, ಇನ್ನೇನು ? . . . . **ಇಂಗೋಪತಿ**— . . . . ಹಾಗೆಂಧರೆ ? ' ಎಂದ

' ಪ್ರಾಣಿವರ್ಗಕ್ಕೆ ಬರಬಹುದಾದ ಎಲ್ಲಾ ವ್ಯಾಧಿಗಳನ್ನೂ ಇಂಗಿ ನಿಂದಲೇ ಹೋಗಲಾಡಿಸುವ ಒಂದು ಹೊಸ ವೈದ್ಯಕ್ರಮ, ಇಂಗೋಪತಿ ಅಂದರೆ. ಲಾಹೋರಿನ ಒಬ್ಬ ಪ್ರಸಿದ್ಧ ಇಂಗು ವ್ಯಾಪಾರಿ ಈ ಕ್ರಮವನ್ನು ಎಲ್ಲರಿಗೂ ಉಚಿತವಾಗಿ ಕಲಿಸುತ್ತಾನಂತೆ. ಮುಂದಿನ ಸೂಟಿಯಲ್ಲಿ ನಾನೂ ಇದನ್ನು ಟಪಾಲ್ ಮೂಲಕ ಕಲಿಯಬೇಕೆಂದಿದ್ದೇನೆ. '

' ನೀನು ಕಲಿಯುವುದಾದರೆ ನನಗದು ಬೇಡ . . . . ನಾವಿಬ್ಬರೂ **ಪೈಪೋಟಿ** ಮಾಡಕೂಡದು. '

'ಹಾಗಾದರೆ, ಇನ್ನೊಂದು ಬರೆದಿದ್ದೇನೆ ಇಲ್ಲಿ, ಅದನ್ನು ನೋಡು.. **'ರೋದನ ಸಾಹಿತ್ಯ'**....ಹೇಗಿದೆ? ಹಣ, ಹೆಸರು ಎರಡನ್ನೂ ಪಡೆಯಲು ಒಳ್ಳೆಯ ಉಪಾಯ! ಇತರರು ಸುಖಪಡುವುದನ್ನು ಕೇಳುವುದಕ್ಕಿಂತ ಅವರು ಕಷ್ಟದಲ್ಲಿ ನರಳುವುದು, ಕಣ್ಣೀರಲ್ಲಿ ಮುಳುಗುವುದು ಇಂತಹದ್ದನ್ನು ಕೇಳಿದರೆ, ಓದಿದರೆ, ನಮಗೆ ಆಂತರಿಕವಾಗಿ ಹೆಚ್ಚು ಆನಂದ, ತೃಪ್ತಿ. ಆದ್ದರಿಂದ, 'ನೀಲಾಂಬರಿ' ಎಂಬ ಹೆಸರಿನ ಒಂದು ರೋದನಪ್ರಧಾನವಾದ ಮಾಸಪತ್ರಿಕೆಯನ್ನು ಹೊರಡಿಸಿದರೆ, ಎಲ್ಲರೂ ಮೆಚ್ಚುವರು. ಹೊಸ ಸಾಹಸ! ಪ್ರತಿ ಮಾಸಪತ್ರಿಕೆ ಸಂಗಡಲೂ ವಾಚಕರ ಉಪಯೋಗಕ್ಕಾಗಿ ಒಂದು ಕರವಸ್ತ್ರವನ್ನೂ ಸಹ ಇನಾಮಾಗಿ ಕೊಡಬಹುದು.'

ಹನುಮಂತನ ಮುಖ ಅರಳಲಿಲ್ಲ......ತಲೆಯಲ್ಲಾಡಿಸಿದ.... 'ಮುಂದಿನದು?' ಅಂದ.

'ಮುಂದಿನದೇ **ಉಪ-ನ್ಯಾಸಿಸಂ.**'

'ಅಂದರೇನು?'

'ಭಾಷಣ ಕೊಡುವುದು; ಮುಂದಾಳಾಗುವುದು.'

'ಯಾರು ಕೇಳುತ್ತಾರೆ? ನಾವು ಮುಂದಾಳಾದರೆ ಹಿಂದಾಳುಗಳಾಗಿ ಯಾರು ಬರುತ್ತಾರೆ?'

'ಕಿವಿಗಳಿರುವವರೆಲ್ಲರೂ ಕೇಳುತ್ತಾರೆ; ಕಿವಿಗಳ ನಡುವೆ ಮೆದುಳಿಲ್ಲದವರೆಲ್ಲರೂ ಹಿಂದೆ ಬರುತ್ತಾರೆ....ಜೈ, ಜೈ, ಎನ್ನುತ್ತಾರೆ. ಪಂಚಾಯತ್ತು, ಮುನಿಸಿಪಾಲಿಟಿ, ಬಗೆಬಗೆಯ ಕಮಿಟಿಗಳು, ತಾಲೂಕು ಬೋರ್ಡು, ಜಿಲ್ಲಾ ಬೋರ್ಡು, ಅಸೆಂಬ್ಲಿ, ಕೌನ್ಸಿಲು, ಕ್ಯಾಬಿನೆಟ್ಟು—ಹೀಗೆ ಹಂತ ಹಂತವಾಗಿ ಹಿಂದಾಳುಗಳು ನಮ್ಮನ್ನ ಏರಿಸಿ ಕೂರಿಸಿ ಮೆರವಣಿಗೆ ಮಾಡುತ್ತಾರೆ.'

'ಉಪನ್ಯಾಸ ಮಾಡುವುದು ಹೇಗೆ ಅಷ್ಟು ಸ್ವಾರಸ್ಯವಾಗಿ?'

'ಮೊದಮೊದಲು ನಾಟಕದವರ ಹಾಗೆ ಇಡೀ ಉಪನ್ಯಾಸವನ್ನು ಉರುಹೊಡೆದು ಕನ್ನಡಿ ಮುಂದೆ ಕೈಬೀಸಿ ಕಣ್ಣುರುಳಿಸಿ ಸಾಧನೆ ಮಾಡಿಕೊಳ್ಳಬೇಕಾಗುತ್ತದೆ. ಡೆಮಾಸ್ತನೀಸ ಅಂತ ಒಬ್ಬ ಉಪನ್ಯಾಸಕ ಇದ್ದ, ಪ್ರಾಚೀನ ಯವನದಲ್ಲಿ. ಕೇಳಿಲ್ಲವೇ ನೀನು? ಅಲೆಕ್ಸಾಂಡರನ ಅಪ್ಪನನ್ನೇ ಅಪ್ಪಳಿಸಬೇಕೆಂದು ಹೊರಟಿದ್ದ, ಧೀರ. ಅವನು ಬಾಯಲ್ಲಿ ಕಲ್ಲು ತುಂಬಿ-

ಕೊಂಡು, ತಲೆ ಬೋಳಿಸಿಕೊಂಡನಂತೆ. ಕಲ್ಲು ಕರಗುತ್ತಾ ಕರಗುತ್ತಾ, ಕೂದಲು ಬೆಳೆಯುತ್ತಾ ಬೆಳೆಯುತ್ತಾ ಅವನ ನಾಲಿಗೆಯಲ್ಲಿ ಸರಸ್ವತಿ ನೆಲೆಸಿ ನಲಿದಾಡಿ, ಕೂಡಿ ಕಡೆಗೆ ಮಲಗಿ ನಿದ್ದೆಮಾಡುವಾಗಲೂ ಅವನ ಗೊರಕೆಯೇ ಒಂದು 'ಅಮೋಘವಾದ' ಭಾಷಣವಾಗಿ ಮಾರ್ಪಡುತ್ತಿತ್ತಂತೆ!—ನಮ್ಮ ಮೇಷ್ಟರು ಹೇಳಿದರು!....ಸದ್ಯಕ್ಕೆ ನೀನು, 'ಸಮಾಜಸೇವೆ, ಸಾಹಿತ್ಯ ಸುಧಾರಣೆ, ರೈತರ ವಿದ್ಯಾಭ್ಯಾಸ, ಜವಾಬ್ದಾರಿ ಸರ್ಕಾರ ಇಷ್ಟು ಭಾಷಣ ಗಳನ್ನ ಬರೆಸಿ ಗಟ್ಟುಮಾಡಿಬಿಡು.'

'ಅದೇನೋ ಸುಲಭ, ಮೃತ್ಯು! ಆದರೆ ಆಗಲೇ ಎಷ್ಟು ಜನ ನಾ ಮುಂದು ತಾ ಮುಂದು ಎಂದು ಈ ಕಸಬಿಗೆ ನುಗ್ಗುತ್ತಾ ಇದ್ದಾರಲ್ಲಾ! ನನಗೆ ಯಾರು ಸ್ಥಳ ಕೊಡುತ್ತಾರೆ? ಕೊರೆಯುವವರು ಹೆಚ್ಚು; ಕಿವಿ ಕೊಡುವವರು ಕಡಿಮೆ..ನನಗೇನೋ ಭಯವಾಗುತ್ತದೆ ನಿನ್ನ ಉಪಾಯ ಕೇಳಿದರೆ....ಇವತ್ತು ಯಾಕೊ ನಮ್ಮ ಬುದ್ಧಿ ನೆಟ್ಟಗಿಲ್ಲ......ನಾಳೆ ಸೇರೋಣ ಇಲ್ಲಿ' ಎಂದು ಹೇಳುತ್ತಾ ಹನುಮಂತ ಎದ್ದ. ಸಂಜೆ ಆಗುತ್ತಾ ಬಂತು.

ಹನುಮಂತರಾಯನೂ ಮೃತ್ಯುಂಜಯನೂ ಅದುವರೆಗೂ ಒಂದೇ ಹಾಸ್ಟಲಿನಲ್ಲಿದ್ದವರು ಈಗ ಬೇರೆ ಬೇರೆ ದಾರಿಗಳನ್ನು ಹಿಡಿಯಬೇಕಾಗಿತ್ತು. ಮನಸ್ಸಿಲ್ಲದ ಮನಸ್ಸಿನಿಂದ, ಹನುಮಂತ ರಾಮಮೋಹನ್ ಹಾಸ್ಟಲಿನ ಹತ್ತಿರಕ್ಕೆ ಬಂದ. ಗೇಟು ಬಾಗಿಲನ್ನು ತೆಗೆದು ನಿಧಾನವಾಗಿ ತನ್ನ ಹೊಸ ನಿವಾಸಸ್ಥಾನವಾದ ಕೋಣೆಯ ಕಡೆ ನಡೆದ....

ಆಗ ಅವನ ಬಾಗಿಲ ಮುಂದುಗಡೆ ಕಂಬಕ್ಕೆ ಒರಗಿಕೊಂಡು ಯಾರೋ ನಿಂತಿದ್ದರು. 'ಯಾರೋ?....ಯಾರಾದರೇನಂತೆ?......ಯಾರನ್ನು ಕಾಣುವುದಕ್ಕೆ ಬಂದಿದ್ದಾರೋ, ನನಗೇನು?' ಎಂದು ಯೋಚಿಸಿದ....

ಆಗ, ಅಲ್ಲಿ ನಿಂತಿದ್ದವರು, 'ಹನೂ!' ಎಂದರು.

'ಓ! ತಂದೆ!'....ಅವರ ಹಿಂದೆ, 'ಶೀನ!' 'ಶೀನನ ಟ್ರಂಕು ಹಾಸಿಗೆ!'

ಹೌದು! ಉದಾರಶಿರೋಮಣಿ ಎ. ಆನಂದರಾಯರು!—

—

## ಮೂರನೆಯ ಅಧ್ಯಾಯ

# ಗೋಳಪ್ಪನ ಬೋಳು ಬಿರುದು



ಮನವಿದುವೆ ಉಕ್ಕುತಿದೆ !
ಮೈಯಿದುವೆ ಉಬ್ಬುತಿದೆ ! ............ ಕಾರಂತ

ಪೋಷವರ ಪದವಿಗಳಿಗಿನ್ನಾರು ಬಂದಪರೋ ?.... ವಿ. ಸೀ.

ಸಲಿಗೆಯನು ಬೆಳೆಸುತ್ತ
ಸುಲಿಗೆಯನು ಮಾಡಿದರು...............ವಿನಾಯಕ



'ಉದಾರಶಿರೋಮಣಿ' ಎ. ಆನಂದರಾಯರು ? ಹೌದು.

ಆದರೆ, ಕ್ರಿ. ಶ. ೧೯೩೭ನೆಯ ಮೇ ತಿಂಗಳು ೮ ನೇ ತಾರೀಖು ಸಂಜೆ ೭ ಗಂಟೆಗೆ ಸರಿಯಾಗಿ ವಿಚಿತ್ರದುರ್ಗದ ನಭೋಮಂಡಲದ ಕೆಳಕ್ಕೆ ಮಳೆ ಬೀಳದಿದ್ದರೆ ಹನುಮಂತನ ತಂದೆ 'ಉದಾರಶಿರೋಮ'ಣಿಗಳಾಗುತ್ತಿರಲಿಲ್ಲ!

ಆ ದಿನ ಸಂಜೆ ವಿಚಿತ್ರದುರ್ಗದ ಪುರಭವನದಲ್ಲಿ ಎಂದೂ ಇಲ್ಲದ ಸಡಗರ; ತಳಿರುಗಳ ತೂಗಾಟ, ತೋರಣಗಳ ಹಾರಾಟ, ಸ್ವಯಂಸೇವಕರ ಪರದಾಟ! ಅಷ್ಟೆ! ಮಹಾಜನರು ಒಬ್ಬರೂ ಬಂದಿರಲಿಲ್ಲ. ಉತ್ತರದ ಬಾಗಿಲಿಂದ ಗಂಡಸರನ್ನೂ ದಕ್ಷಿಣದ ಬಾಗಿಲಿಂದ ಹೆಂಗಸರನ್ನೂ ಒಳಕ್ಕೆ

ಕರೆದು ತಂದು ಕೂರಿಸುವುದೆಂದು ನಿರ್ಧಾರವಾಗಿತ್ತು. ಬಹುಶಃ ಈ ತೆರನ ನಿರ್ಬಂಧಕ್ಕೆ ಒಳಗಾಗಲು ಮನಸ್ಸಿಲ್ಲದೆಯೋ ಏನೋ, ಒಬ್ಬರೂ ತಲೆ ಹಾಕಲಿಲ್ಲ. ಗಂಡಸರೂ ಇಲ್ಲ, ಹೆಂಗಸರೂ ಇಲ್ಲ. ಏಕೆ ಹೀಗಾಯಿತು ಅಂತ ಗೋಳಪ್ಪನವರು ತಮ್ಮ ಆಪ್ತಮಿತ್ರರೊಂದಿಗೆ ವೇದಿಕೆಯ ಮೇಲೆ ಕುಳಿತು ಚರ್ಚೆಮಾಡುತ್ತಿದ್ದರು. ವಿಚಿತ್ರದುರ್ಗದಲ್ಲೇ ಆ ದಿನ ಸಂಜೆ ಒಂದು ಕೋಳಿ ಕಾಳಗವಂತೆ. ಅಲ್ಲಿಗೆ ಅನೇಕರು ದೊಡ್ಡ ಮನುಷ್ಯರು ಹೋಗಿರಬಹುದೆಂದು ಒಬ್ಬರು ಸೂಚನೆ ಕೊಟ್ಟರು ! ತೇರಿನ ಬೀದಿ ರಾಮಮಂದಿರದಲ್ಲಿ ರಾಮೋತ್ಸವದ ಫಂಡಿನ ವಿಷಯದ ಚರ್ಚೆಯಾಗುತ್ತಿದೆ, ಜನವೆಲ್ಲ ಅಲ್ಲಿ ನುಗ್ಗಿರಬಹುದೆಂದು ಮತ್ತೊಬ್ಬರು ಹೇಳಿದರು. ಸಿದ್ದಯ್ಯನ ಹೊಲದಲ್ಲಿ ಒಂದು ಬೇವಿನ ಮರ ನಿನ್ನೆಯೆಲ್ಲಾ ಹಾಲು ಸುರಿಸುತ್ತಾ ಇತ್ತಂತೆ, ಅದಕ್ಕೆ ಪೂಜೆ ಮಾಡಿ ಪ್ರದಕ್ಷಿಣೆ ಮಾಡುವುದಕ್ಕೆ ಹೆಂಗಸರೆಲ್ಲರೂ ಹೋಗಿದಾರೆ ಅಂತ ಇನ್ನೊಬ್ಬರು ಅಭಿಪ್ರಾಯಪಟ್ಟರು.

ಅಂತು, ಹೇಗೊ, ಪುರಭವನದಲ್ಲಿದ್ದ ಹಳೆಯ ಜಾಪಾನ್ ಗಡಿಯಾರ ಆರೂಕಾಲಿಗೆ ಬದಲಾಗಿ ಏಳು ಹೊಡೆದಾಗ, ಅಲ್ಲೊಂದು ಇಲ್ಲೊಂದು ಅಂತ ಕೆಲವು ಜನ ಸಭೆಯಲ್ಲಿ ಕುಳಿತಿದ್ದರು. ಅವರೆಲ್ಲರಿಗೂ ನಿಜವಾಗಿಯೂ ಏಳು ಘಂಟೆ ಆಯಿತೇನೋ ಎಂಬ ಗಾಬರಿ! ಆಕಾಶದಲ್ಲಿ ದಟ್ಟವಾಗಿ ಕಾರ್ಮೋಡಗಳು ಕವಿದುಬಿಟ್ಟಿದ್ದರಿಂದ ಆಗಲೇ ಕತ್ತಲೆ ಆಗಿಬಿಟ್ಟಿತ್ತು. ಗಡಿಯಾರದಲ್ಲಿ ದೊಡ್ಡ ಮುಳ್ಳು ನಾಲ್ಕಕ್ಕೆ ಬಂತು. ಜನ ಬರಲೇ ಇಲ್ಲ; ಒಳಗಿದ್ದವರಿಗೂ ಕೂಡ ಕೋಳಿಕಾಳಗಕ್ಕೆ ಹೋಗಿದ್ದರೆ ಮೇಲಾಗಿತ್ತೆಂದೆನಿಸಿತು. ೬-೨೫ ಆಯಿತು; ನಾಲ್ಕಾರು ಹನಿಗಳುದುರಿದುವು. ಇಷ್ಟೇನೆ, ಅಂತ ಜನಗಳು ಜುಗುಪ್ಸೆ ಪಡುವುದರೊಳಗೆ ಮಳೆ ಹುಚ್ಚು ರೊಚ್ಚಿನಿಂದ ಬಂದೇ ಬಂತು. ಆಗ ಮೀಟಿಂಗೇ ಇಲ್ಲ ಎಂದು ಗೋಳಪ್ಪನವರು ಹೇಳಿ ಎಲ್ಲಿ ತಮ್ಮನ್ನು ಓಡಿಸಿಬಿಡುತ್ತಾರೋ ಎಂಬ ಹೆದರಿಕೆ ಪ್ರಾರಂಭವಾಯಿತು. ಅಥವಾ, ಮೀಟಿಂಗ್ ನಡೆದರೂ ಮಳೆ ಮುಗಿಯುವ ತನಕ ಜರುಗಬಹುದೋ ಎಂದು ಪತ್ತೆ ಹಚ್ಚಲು ಇಬ್ಬರು ಮೂರು ಮಹನೀಯರು ಕಾರ್ಯಕ್ರಮದ ಕಾಗದವನ್ನು ಕಿಸೆಯಿಂದ ಹೊರಗೆಳೆದರು. ಎರಡು ಘಂಟೆಗಳಿಗೆ ಏನೂ ಮೋಸವಿಲ್ಲ, ಎನಿಸುವಷ್ಟು ದೊಡ್ಡದಾಗಿತ್ತು ಆ ದಿನದ ಕಾರ್ಯಕ್ರಮ.

## ಕಾರ್ಯಕ್ರಮ

**ಮಾನ್ಯ ಅತಿಥಿಗಳ ಆಗಮನ.**

**ಮಾನ್ಯ ಅತಿಥಿಗಳನ್ನು ವೇದಿಕೆಯ ಮೇಲೆ ಏರಿಸುವುದು.**

**ಪ್ರಾರ್ಥನೆ—** 'ಅಪಮಾನವಾದರೆ ಒಳ್ಳಿತು.......' ಎಂಬ ಕೀರ್ತನೆ.
[ಪ್ರಾಣಿದಯಾಸಂಘದವರಿಂದ]

**ಮಾನಪತ್ರ ಸಮರ್ಪಣೆ—** [ಪುರಜನರ ಪರವಾಗಿ ಶ್ರೀ. ಗೋಳಪ್ಪನವರಿಂದ.]

**'ಉದಾರಶಿರೋಮಣಿ'** ಎಂಬ ಬಿರುದನ್ನು ದಯಪಾಲಿಸುವಿಕೆ.
[ಪುರಜನರ ಪರವಾಗಿ ಶ್ರೀ. ಡಿಟೋರವರಿಂದ.]

**ಜಯಘೋಷ—** [ಪುರಜನರಿಂದ]

**ಕೀರ್ತನೆಗಳ ಹಾಡುಗಾರಿಕೆ** [ಶ್ರೀ. ಮೂಕಯ್ಯನವರಿಂದ]

| | | |
|---|---|---|
| ೧. | **ಏನು ಬರುವುದೋ ಸಂಕಟ ?** | ರಾಗ—ಧನ್ಯಾಸಿ |
| ೨. | **ತಾಳ ಬೇಕು; ತಕ್ಕ ಮೇಳ ಬೇಕು.** | ,, ಮಧ್ಯಮಾವತಿ |
| ೩. | **ಮೋಸಹೋದೆನಲ್ಲಾ !** | ,, ಕೇದಾರಗೌಳ |
| ೪. | **ನಾ ಮಾಡಿದ ಕರ್ಮ!** | ,, ರೇಗುಪ್ತಿ |
| ೫. | **ಇನ್ನೂ ದಯೆ ಬಾರದೆ ?** | ,, ಕಲ್ಯಾಣಿ |
| ೬. | **ಕೇಳೆನೋ, ಹರಿ, ತಾಳೆನೋ !** | ,, ಡಿಟೊ |
| ೭. | **ವಿಧಿಗೆ ದಯವಿಲ್ಲವೇಕೆ ?** | ,, ಕಾಂಬೋಧಿ |
| ೮. | **ಪಾಪಿ ! ಬಲ್ಲನೇ ಪರರ ಸುಖದುಃಖ ?** | ,, ಕಾಂಬೋಧಿ |
| ೯. | **ಮಂಗಳಂ** | ,, ಮುಖಾರಿ |

**ವಂದನಾರ್ಪಣ—** [ಮಾನ್ಯ ಅತಿಥಿಗಳಿಂದ]

ಅನೇಕ (!) ಜನರನ್ನು ಪೀಡಿಸಿ ಕೂಡಿಸಿ ಇಷ್ಟು ಒಳ್ಳೆಯ ಕಾರ್ಯಕ್ರಮ ಏರ್ಪಾಟು ಮಾಡಿ ಕಡೆಗೆ ಎಲ್ಲವನ್ನೂ ಮಳೆ ಬಂದು ಕೊಚ್ಚಿಕೊಂಡು ಹೋಗುತ್ತದೋ ಏನೋ ಎಂದು ನಡುಗುತ್ತಿದ್ದ ಗೋಳಪ್ಪನವರನ್ನು ಸಂತೈಸಲು ಇದ್ದಕ್ಕಿದ್ದ ಹಾಗೆ ಬಡಗಲ ಬಾಗಿಲಲ್ಲಿ ಮಳೆಯ ಗಲಾಟೆಯನ್ನೂ ಭೇದಿಸಿ 'ಭೂಂ' 'ಭೂಂ' ಎಂಬ ಸದ್ದು ಮೊಳಗಿತು ! ಸಭಾಮಂದಿರದಲ್ಲಿದ್ದ ಹತ್ತಾರು ಜನರೂ, ಅಂದರೆ, ಹದಿನಾರು ಜನರೂ, ಅಲ್ಲಿಗೆ ಓಡಿದರು. ಮಾನ್ಯ ಅತಿಥಿಗಳಾದ ಶ್ರೀಮಾನ್ ಎ. ಆನಂದರಾಯರು ಒಂದು ಬಾಡಿಗೆ ಮೋಟಾರಿನಲ್ಲಿ ಕುಳಿತು ಬಿಜಯಮಾಡಿದ್ದರು. ಕೊಬ್ಬಿದ ಗೂಡಲ್ಲ; ತೆಳುವಾದ ಬಡಕಲು ಮೈಕಟ್ಟು. ಅದಕ್ಕೆ ತಕ್ಕಂತೆ ಸರಳವಾದ ಉಡಿಗೆ ತೊಡಿಗೆಗಳು. . ಆದರೆ, ಏಕೊ ಏನೊ ಅವರ ಮೋರೆ ಮಾತ್ರ ಕೋಪದಿಂದ ಕಾದು ಕೆಂಚಗಾಗಿತ್ತು. ಬಿರುದು ಬರುವ ದಿನದ ಕಾಂತಿ ಮುಖದಲ್ಲಿರಲೇ ಇಲ್ಲ. ಬಹುಶಃ

ತನುಗಾಗದವರು ಬರುವ ಬಿರುದನ್ನು ತಪ್ಪಿಸುವ್ರದಕ್ಕಾಗಿ ಮಾಟ ಮಾಡಿಸಿ ಮಳೆ ಬರಸಿದರು ಅಂತ ರೇಗಿದರೋ ಏನೋ ?

ಆ ದಿನದ ಸಂತೋಷಕೂಟದ ಸಂಚಾಲಕರಾದ ಶ್ರೀಮಾನ್ ಗೋಳಪ್ಪ ನವರು ಮಾನ್ಯ ಅತಿಥಿಗಳ ಕೊರಳಿಗೆ ಹೂ-ಮಾಲೆ ತೊಡಿಸಲು ಸಂದಣಿ ಯನ್ನು ಇಬ್ಭಾಗ ಮಾಡುತ್ತಾ ಮುನ್ನುಗ್ಗಿದರು. ಅವರನ್ನು ಕಂಡಾಗ, ಶ್ರೀಮಾನ್ ಆನಂದರಾಯರು ಗಂಭೀರವಾಗಿ ನಿಂತಲ್ಲೇ ನಿಂತರು...... 'ಯಾರ್ರೀ ನೀವು ?' ಅಂತ ಕೇಳಿದರು. 'ನೀವು ತಾನೆ ಇಲ್ಲಿಗೆ ಕಾರ್ಯದರ್ಶಿ ಗಳು ?' ಎಂದು ಏನೂ ತಿಳಿಯದೆ ಇದ್ದವರ ಹಾಗೆ ವಿಚಾರಿಸಿದರು. 'ನೋಡಿ! ಈ ಮೋಟಾರಿನವನಿಗೆ ಒಂದೂಕಾಲು ರೂಪಾಯಿ ಕೊಟ್ಟು ಕಳುಹಿಸಿ, ಬೇಗ.' ಅಂದರು !

ಗೋಳಪ್ಪನವರಿಗೆ ಏನೂ ತೋಚಲಿಲ್ಲ. ಅವರಿಗೆ ಕೋಪ, ವ್ಯಸನ– ಒಂದು ಕಡೆ; ಸಂಕಟ, ಸುಸ್ತು ಮತ್ತೊಂದು ಕಡೆ. ಆನಂದರಾಯರ ಅಳಿ ಯನ ಮಾತು ಮೀರಲಾರದೆ ಈ ಅವಾಂತರವನ್ನು ತಲೆಯ ಮೇಲೆ ಹೊತ್ತು ಕೊಂಡು ಆರು ವಾರದಿಂದ ಅಲೆದಿದ್ದಾರೆ. ಯಾರು ಯಾರೋ ಅವರನ್ನ ಆಗಲೇ ಏನೇನೋ ಅಂದುಬಿಟ್ಟಿದ್ದರು. 'ನಿನಗೇನು ತೀಟೆ, ಅವನೇನು ಕಡಿದಿದಾನೆ, ಮಾಡುವುದಕ್ಕೆ ಬೇರೆ ಕೆಲಸವಿಲ್ಲವೆ ನಿನಗೆ, ಅವನಿಗೆ ಯಾಕೆ ಬಿರುದು, ನಿನಗೇನು ಕಮಿಶನ್ ಕೊಡುತ್ತಾರೆ, ನನಗೇನಾದರೂ ಬಿರುದು ಕೊಡುತ್ತೀಯೇನು—' ಈ ಎಲ್ಲಾ ವಿಧವಾದ ಮಾತುಗಳೂ ಬಂದಿದ್ದುವು! ಕಡೆಗೂ, ಎಲ್ಲರೊಂದಿಗೆ ಗುದ್ದಾಡಿ ಒದ್ದಾಡಿ ತೊಟ್ಟ ಕೆಲಸವನ್ನು ಇಷ್ಟು ದೂರ ಸುಸೂತ್ರವಾಗಿ ಜರುಗಿಸಿಕೊಂಡು ಬಂದರೆ, 'ಯಾರ್ರೀ ನೀವು ?' ಅಂತ ಕೇಳುತ್ತಾ ಇದಾರೆ, ಮಾನ್ಯ ಅತಿಥಿಗಳು ! ಎ. ಆನಂದರಾಯರಿಗೆ ಅರ್ಪಿಸಬೇಕಾಗಿದ್ದ ಮಾನಪತ್ರದ ಐನೂರು ಪ್ರತಿಗಳಲ್ಲೂ 'ಉದಾರ'ಕ್ಕೆ ಬದಲಾಗಿ ಆ ಪಾಳು ಅಚ್ಚುಕೂಟದವನು 'ಉದರ' ಅಂತ ಮುದ್ರಿಸಿದ್ದನ್ನ ತಾವೊಬ್ಬರೇ ಹಗಲೆಲ್ಲಾ ಕುಳಿತು ತಿದ್ದಿದ್ದರು. ಪ್ರಾಣಿದಯಾ ಸಂಘದವರು ಇನ್ನೂ ಬಂದಿರಲಿಲ್ಲ; ಮೂಕಯ್ಯನವರು ಪತ್ತೆಯೇ ಇರಲಿಲ್ಲ. ಆಗಲೇ ಎಂಟು ಹತ್ತು ರೂಪಾಯಿಗಳಷ್ಟು ಕೈ ಕಚ್ಚಿತ್ತು. ಆದ್ದರಿಂದ, ಬಿರುದು ಬಾವಲಿ ತಗುಲಿಸಿಕೊಂಡು ನಾಳೆಯಿಂದ ಓಡಾಡುವ ಆನಂದರಾಯರೇ

ಬಂದು ಒಂದೂಕಾಲು ರೂಪಾಯಿಗೋಸ್ಕರ ಗಾಳ ಹಾಕಿದರೆ, ಗೋಳಪ್ಪನವರಿಗೆ ರೇಗುವುದಿಲ್ಲವೆ?....ರೇಗಿತು.

'ಹಣ ಅಂದರೆ ಏನು ಕಡಲೆಪುರಿಯೋ? ಕಾಗದದಲ್ಲಿ ಇಪ್ಪತ್ತು ರೂಪಾಯಿ ಬಿದ್ದಿದ್ದರೂ ಕೈಗೆ ಬಂದದ್ದು ಏಳೇ ರೂಪಾಯಿ. ನನ್ನ ಹತ್ತಿರ ಕಾಸಿಲ್ಲ. ನೀವು ಮೋಜಿಸಿಂದ ಮೋಟಾರಿನಲ್ಲಿ ಬಂದರೆ ಹಣ ತೆರುವುದಕ್ಕೆ ಇಲ್ಲಿ ಕುಬೇರ ಕುಳಿತಿಲ್ಲ.' ಅಂತ ಹೇಳೇಬಿಟ್ಟರು!..ಆನಂದರಾಯರಿಗೂ ಕೋಪ ಬಂತು. ಉಪ್ಪು ಹುಳಿ ಖಾರ ತಿಂಬುವ ದೇಹವಲ್ಲವೆ? 'ಇಷ್ಟು ಪಾಪರಾಗರೆ ಮೀಟಿಂಗು ಯಾಕಯ್ಯಾ ಕೂಡಿಸಿದೆ? ನಿನ್ನ ಹಾಳು ಬಿರುದು ಯಾರಿಗೆ ಬೇಕಾಗಿದೆ? ಗತಿ ಕೆಟ್ಟ ತಿರುಕರು ಬಾ ಅಂತ ಕರೆದರೆ ಅಂತಹ ಜಾಗಕ್ಕೆ ಹೋಗಬಾರದು ಅಂತ ಈಗ ಗೊತ್ತಾಯಿತು!' ಅಂತ ಹೇಳುತ್ತಾ ಮತ್ತೆ ಗಾಡಿಯಲ್ಲಿ ಕುಳಿತರು....ಟ್ರ್ ಟ್ರ್‌ರ್ ಟ್ರ್‌ಟ್ರ್ ರ್‌ರ್ ಟ್ರ್‌ಟ್‌ಟ್‌ಟ್.. ಅಂತ ಶಪಿಸುತ್ತ ಬಾಡಿಗೆ ಮೋಟಾರು ಹೊರಟೇ ಹೋಯಿತು....

ಬಂದಿದ್ದ ಮಹಾಜನಗಳು ತೆಪ್ಪಗೆ ಮನೆಗೆ ಹೋಗಲಿಲ್ಲ. ಪುರಭವನದಲ್ಲೇ ಕುಳಿತರು. ಗಡಿಬಿಡಿ ಎಬ್ಬಿಸಿದರು; ಕೂಗಿದರು. ಗದ್ದಲವೋ ಗದ್ದಲ....ಮಳೆ ನಿಲ್ಲುವ ತನಕ ಯಾವುದಾದರೊಂದು ಕಾರ್ಯಕ್ರಮವನ್ನು ನಡೆಸಲೇಬೇಕೆಂದು ಹಟ ಹಿಡಿದರು. 'ಗೊಳಪ್ಪಾ! ಪ್ರೋಗ್ರಾಂ!' 'ಪ್ರೋಗ್ರಾಂ! ಗೋಳಪ್ಪಾ!' ಎಂದು ಒಟ್ಟಾಗಿ ತಾಳ ಹಾಕಿಕೊಂಡು ಬೊಬ್ಬೆಯಿಟ್ಟರು.

ಗೋಳಪ್ಪನವರಿಗೆ ಉಳಿಗತಿಯಿರಲಿಲ್ಲ......'ದೇವರೇ! ನನ್ನನ್ನು ಕಾಪಾಡು!' ಅಂತ ಮೊರೆಯಿಟ್ಟರು............'ಆಪದ್ಬಾಂಧವಾ, ದೀನರಕ್ಷಕಾ, ಆರ್ತಪ್ರಾಣಪರಾಯಣಾ!'......

ಆಗ, ಮೈದಾನದ ಹುಲ್ಲು ಹಾಸಿನ ಮೇಲೆ ಕುಳಿತು ಗಾಳಿ ಕುಡಿಯುತ್ತಿದ್ದ ಶ್ರೀಮಾನ್ ಎ. ಆನಂದರಾಯರು ಮಳೆಯ ರಭಸಕ್ಕೆ ನಡುಗಿ ಪುರಭವನದ ಆಶ್ರಯವನ್ನು ಹುಡುಕಿಕೊಂಡು ಓಡಿ ಬಂದು ನನೆದ ಅಂಗಿಯನ್ನು ಬಿಚ್ಚಿ ಕೊಡವುತ್ತಿದ್ದರು. ತಲೆ ಹೋಗುವ ವಿಷಘಳಿಗೆಯಲ್ಲಿ ಎಂತಹ ದಡ್ಡನೂ ಕೂಡ ಬುದ್ಧಿವಂತನಾಗುತ್ತಾನೆ ಎಂಬಂತೆ ಗೋಳಪ್ಪನವರಿಗೆ ಥಟಕ್ಕನೆ ಒಂದು ಯೋಚನೆ ಹೊಳೆಯಿತು. ಅವರು ಉದ್ದುದ್ದ ಕಾಲು

ಹಾಕಿ ಶ್ರೀಮಾನ್ ವಿ. ಆನಂದರಾಯರ ಹತ್ತಿರ ಹೋಗಿ ಅವರ ಎಡಕಿವಿ-ಯಲ್ಲಿ ಏನನ್ನೋ ಪಿಸುಪಿಸನೆ ಉಸುರಿ, ಅವರನ್ನು ಸರಸರನೆ ವೇದಿಕೆಯ ಮೇಲಕ್ಕೆ ಎಳೆದುಕೊಂಡು ಹೋಗಿ ಕುಳ್ಳಿರಿಸಿದರು. ಜನರ ಕೋಲಾಹಲ ಕೊಂಚ ಅಡಗಿತು. ಮಳೆಯ ದೆಸೆಯಿಂದ ಪ್ರಾರ್ಥನೆಯವರು ಬರಲಿಲ್ಲವಾಗಿ ಗೋಳಪ್ಪನವರೇ ಎದ್ದು, ಸರಾಗವಾಗಿ ಬರುತ್ತಿದ್ದ 'ಏನು ಸುಖಾ! ಇದು ಏನು ಸುಖಾ!' ಎಂಬ ದೇವರ ನಾಮವನ್ನು ಅಂದೇಬಿಟ್ಟರು. ಬೇಗ ಬೇಗನೆ ತಾವೇ ಮಾನಪತ್ರವನ್ನು ಓದಿ ಮುಗಿಸಿದರು. 'ಉದಾರಶಿರೋಮಣಿ ಆನಂದರಾವ್ರಕೀ' ಅಂತ ಒಂದು ಕೂಗು ಹಾಕಿದರು. ನೆರೆದಿದ್ದ ಮಹಾ-ಜನಗಳೆಲ್ಲರೂ 'ಜೈ' ಎಂದು ಉತ್ತರವಿತ್ತರು. ಅವರಿಗೇನು? ಯಾವ ಆನಂದರಾಯರಾದರೇನಂತೆ? ಹೊರಗಿನ ಮಳೆ ನಿಲ್ಲುವ ತನಕ ಒಳಗೆ ಕಾರ್ಯಕ್ರಮ ನಡೆಯುತ್ತಿದ್ದರಾಯಿತು.

ಆನಂದರಾಯರು ಎದ್ದು ಕೈಮುಗಿದು ಸಭೆಯನ್ನು ವಂದಿಸಿ, ಮಹಾ ಜನಗಳ ಅನುಗ್ರಹವನ್ನು ಶಿರಸಾವಹಿಸಿದರು. ಅಷ್ಟು ಹೊತ್ತಿಗೆ ಮೂಕಯ್ಯ-ನವರೂ ಅವರ ಪರಿಜನರೂ ಎಲ್ಲಿಂದಲೋ ಬಂದುಬಿಟ್ಟಿದ್ದರು; ವೇದಿಕೆಯ ಮೇಲೆ ತಮ್ಮ ಸಾಮಗ್ರಿಗಳನ್ನು ಹರಡಿಕೊಂಡು ಕುಳಿತುಬಿಟ್ಟಿದ್ದರು. ಎಲ್ಲರೂ ಸಂಗೀತ ಕೇಳಲು ಸಿದ್ಧರಾಗಬೇಕಾಯಿತು.

'ಏನು ಬರುವುದೋ ಸಂಕಟ?' ಎಂಬ ಮೊದಲನೆಯ ಕೀರ್ತನೆಯನ್ನು ಅವರು ಹಾಡಿ ಮುಗಿಸುವುದರೊಳಗೆ, ಭಕ್ತರ ಮೊರೆಯನ್ನು ಲಾಲಿಸಿ ಪರಮ ಗುರು ಚೆನ್ನಾದಿಕೇಶವನು ಮಳೆಯನ್ನು ನಿಲ್ಲಿಸಿದ! ಸಂಕಟವನ್ನು ಪರಿಹರಿಸಿದ! ಆದ್ದರಿಂದ, ಮೂಕಯ್ಯನವರು ಎರಡನೆಯ ಕೀರ್ತನೆಯಾದ 'ತಾಳ ಬೇಕು' ಎಂಬುದನ್ನು ಪ್ರಾರಂಭಿಸಿದಾಗ, ಒಬ್ಬರೂ 'ತಾಳ'ಲಿಲ್ಲ. ಸಭೆ ಅಲ್ಲಿಗೇ ಮುಕ್ತಾಯವಾಗಬೇಕಾಯಿತು!

ಅಂತು ಇಂತು, 'ಒಂದೆ ನಾಮವು ಪ್ರಹ್ಲಾದನ್ನ ಕಾಯಿತು ಮತ್ತೊಂದೆ ನಾಮವು ಅಜಮಿಳನ ಸಲಹಿತು' ಎಂದು ದಾಸರು ಹೇಳಿರುವ ಹಾಗೆ, ಇಬ್ಬರಿಗೆ ಆನಂದರಾಯರು ಎಂಬ ಒಂದೇ ನಾಮ ಇದ್ದುದರಿಂದ ಗೋಳಪ್ಪನವರು ಉಳಿದುಕೊಂಡರು. ಮಾನಪತ್ರದ ೫೦೦ ಪ್ರತಿಗಳಲ್ಲೂ 'ಎ' ಅನ್ನು 'ವಿ' ಮಾಡುವುದು ಅವರಿಗೆ ಅಷ್ಟೇನೂ ಕಷ್ಟವೆನಿಸಲಿಲ್ಲ.

ಹೀಗೆ, ಆ ದಿನ ಮಳೆಗಾಗಿ ನುಗ್ಗಿದ ಹನುಮಂತನ ತಂದೆ, ಉದಾರ ಶಿರೋಮಣಿ ಎನಿಸಿಕೊಂಡು ಹೊರಕ್ಕೆ ಬಂದರು. ವಿಧಿವಿಲಾಸವನ್ನು ಬಲ್ಲವರು ಯಾರು? ಹುಳವಾಗಿ ಗೂಡು ಸೇರಿದ್ದು ಚಿಟ್ಟೆಯಾಗಿ ಹೊರಬರುತ್ತದಂತೆ!

'ಉ ದಾ ರ ಶಿ ರೋ ಮ ಣಿ!'

'ಉದಾರ ಶಿರೋ ಮಣಿ!'

'ಉದಾರ ಶಿರೋಮಣಿ!'

ಹೀಗೆ ತನ್ನ ಬಿರುದಿನ ಬಿಂಕವನ್ನು ಮೆಲುಕು ಹಾಕುತ್ತಾ ಪಿ. ಆನಂದ ರಾಯರು ಮನೆಗೆ ನಡೆದರು. ದಾರಿಯಲ್ಲೇ ಪೆರುಮಾಳ್ ಸಾಮಿ ಅಂಗಡಿಗೆ ನುಗ್ಗಿ ಉದಾರಶಿರೋಮಣಿ ಪಿ. ಆನಂದರಾವ್ ಎಂದು ಒಂದು ಬಣ್ಣದ ಬೋರ್ಡ್ ಬರೆದು ತರುವಂತೆ ಹೇಳಿ ಮುಂಗಡವಾಗಿ ಹಣ ಕೊಟ್ಟರು; ಹಾಗೆಯೇ 'ವಿಚಿತ್ರ' ಮುದ್ರಣಾಲಯದೊಳಕ್ಕೂ ನುಗ್ಗಿ ಅದೇ ಬಿರುದಾಲಂಕೃತವಾದ ಹಾಳೆಗಳನ್ನೂ ಚೀಟಿಗಳನ್ನೂ ಅಚ್ಚು ಮಾಡಲು ಅಡ್ವಾನ್ಸು ಕೊಟ್ಟರು.

ಆ ರಾತ್ರಿ ಮನೆಯಲ್ಲಿ ಆನಂದರಾಯರ ನಡೆ ನುಡಿ ಎಲ್ಲವೂ ವಿಲಕ್ಷಣವಾಗಿತ್ತು. ಊಟಕ್ಕೆ ಬಡಿಸುತ್ತಿದ್ದಾಗ ಆಕೆಯೊಂದಿಗೂ ಕೂಡ ಕೊಂಚ ಕಟುವಾಗಿಯೇ ಮಾತನಾಡಿದರು. 'ರಾತ್ರಿ ಹೊತ್ತು ಇನ್ನು ಮೇಲೆ ಬರೀ ಅನ್ನ ಸಾರು ಮಾತ್ರ ಸಾಲದು; ತಿನ್ನಲಿ ತಿನ್ನದೆ ಹೋಗಲಿ ಎಲ್ಲರಿಗೂ ಮೂರು ಮೂರು ಚಪಾತಿ ಹಾಕಲೇಬೇಕು' ಅಂದರು. 'ನಿನ್ನ ಕೈ ವಿಪರೀತ ಹಿಡಿತ' ಅಂದರು. ಶೀನನೂ ಹನುಮಂತನೂ ಬೇಸಿಗೆ ಸೂಟಿಗಾಗಿ ಬಂದವರು ಇನ್ನೂ ಮನೆಯಲ್ಲೇ ಇದ್ದರು. ಅವರಿಬ್ಬರನ್ನೂ ಮಹಡಿ ಮೇಲಿನ ತಮ್ಮ ಕೊಠಡಿಗೆ ರಾಯರು ಕರೆಸಿದರು. 'ಲೋ! ನನ್ನ ಯೋಗ್ಯತೆ ಏನು? ನೀವು ಮಾಡುತ್ತಿರುವುದೇನು? ನನ್ನ ಅಂತಸ್ತೇನು? ನಿಮ್ಮ ಗುಣ ಯಾಕೆ ಹೀಗಾಗುತ್ತಾ ಇದೆ? ಸಿಂಹದ ಹೊಟ್ಟೆಯಲ್ಲಿ ಶಿಂಗ್ಳೀಕ ಹುಟ್ಟಿದ ಹಾಗೆ, ನೀವು ಏಕೆ ಅವತಾರ ಮಾಡಿದಿರಿ ಈ ಜಗತ್ತಿನಲ್ಲಿ?' ಎಂದು ಯದ್ವಾತದ್ವಾ ರೇಗಿದರು. ಹುಡುಗರು ನಗುನಗುತ್ತಾ ಮೆಟ್ಟಿಲಿಳಿದರು. ಸುಂದರಮ್ಮನವರು ಮಾತ್ರ ಸಂಜೆತನಕ ಸೆಟ್ಟಗಿತ್ತಲ್ಲ ಇವರ ಬುದ್ಧಿ, ಬೆಳಗ್ಗೆ ಎದ್ದ ಕೂಡಲೇ

ಎಲ್ಲಾ ನೂ ವಾಸಿಮಾಡಿಬಿಡಮ್ಮ ತುಂಗಾವತಮ್ಮಾ, ನಿನಗೊಂದು ಸಹಸ್ರ ನಾಮಾರ್ಚನೆ ಮಾಡಿಸುತ್ತೇನೆ ’ ಅಂತ ಹರಕೆ ಹೊತ್ತರು.

ಮರುದಿನ ಬೋರ್ಡ್ ಬಂದಾಗ ಅವರೆಲ್ಲರಿಗೂ ವಿಷಯ ಏನು ಎಂಬುದು ತಿಳಿಯಬಂತು. ‘ ನೋಟೀಸಿನಲ್ಲಿ ‘ಎ’ ಅಂತ ಇತ್ತಲ್ಲಾ ? ’ ಎಂದು ಹನುಮಂತ ಕೇಳಿದಾಗ ಶೀನ, ‘ ವಿ ’ ಗೆ ಬದಲಾಗಿ ತಪ್ಪು ಬಿದ್ದಿರಬಹುದು ’ ಎಂದು ಸಮಾಧಾನ ಹೇಳಿದ. ಸುಂದರಮ್ಮನವರು ಹಿಗ್ಗಿ ಹಿರಿದಾದರು. ಅವರಿಗೆ ಆಗ ಒಂದೇ ವ್ಯಸನ. ‘ ಚೆನ್ನಾಯಿತು, ಊರಿನವರೆಲ್ಲಾ ಸೇರಿ ಬಿರುದು ಕೊಟ್ಟು ಜೈ ಅಂತ ಕೂಗುವಾಗ ಮನೆಯವರನ್ನು ಮಾತ್ರ ಮೂಲೆ ಯಲ್ಲಿ ಕೂರಿಸಿದ್ದು ಯಾವ ನ್ಯಾಯ ? ಆ ಪ್ರಸ್ತಾಪವನ್ನೇ ಎತ್ತಲಿಲ್ಲವಲ್ಲಾ ಮನೆಯಲ್ಲಿ ? ಅಯ್ಯೋ ! ನನಗೆ ಗೊತ್ತಿದ್ದರೆ ನಿನ್ನೆ ಸಾಯಂಕಾಲ ಹೊರಕ್ಕೆ ಹೊರಟಾಗ ಒಂದು ಒಳ್ಳೆಯ ಅಂಗಿಯನ್ನಾದರೂ ತೊಡಿಸಿ ಕಳುಹಿಸುತ್ತಿದ್ದೆ. ಜರಿ ಪೇಟವೇನೋ ಇತ್ತು; ಆದರೆ, ವಲ್ಲಿ ಇರಲಿಲ್ಲ; ಕರಿ ಅಂಗಿ ಹಾಕಿಕೊಂಡಿ ರಲಿಲ್ಲ. ಸದ್ಯಃ ಮಳೆ ಬಿದ್ದದ್ದರಿಂದ ಅದೇ ಅವತಾರದಲ್ಲಿ ಫೋಟೋ ಗೀಟೋ ತೆಗೆದಿರಲಾರರು....ಅಂತೂ ನಮ್ಮನ್ನೂ ಕರೆದುಕೊಂಡು ಹೋಗಬಹು ದಾಗಿತ್ತಲ್ಲಾ....ಬಿರುದು ಅಂದರೆ ಆದೇನು ಕದ್ದದ್ದೇ ಅಥವಾ ರಸ್ತೆಯಲ್ಲೆ ಲ್ಲಾದರೂ ಬಿದ್ದಿತ್ತೇ ? ಏಕೆ ಇಷ್ಟೊಂದು ಮುಚ್ಚುಮರೆ ? ’ ಅಂತ ಅಡಿಗೆ ಮನೆಯಲ್ಲಿ ಒಬ್ಬರೇ ಗೊಣಗಿಕೊಂಡರು.

ಆದರೆ, ಬಿರುದಿನಿಂದ ಇದಕ್ಕೂ ಹೆಚ್ಚಿನ ಕಸಿಪಿಸಿಗಳು ಪ್ರಾರಂಭ ವಾದುವು.... ಆ ದಿನ ಸಂಜೆ ಕೋಳಿ ಕಾಳಗ ನೋಡಲು ಹೋಗಿ ಮಳೆ ನನೆದು ನೆಗಡಿಹಿಡಿದ ಪತ್ರಿಕಾಪ್ರತಿನಿಧಿಗಳು ಆಹ್ವಾನ ಪತ್ರದ ಆಧಾರದ ಮೇಲೆ, ‘ ವಿಚಿತ್ರದುರ್ಗದ ಅಶೇಷ ಮಹಾಜನಗಳು ನಿನ್ನೆ ಪುರಭವನದಲ್ಲಿ ಕಿಕ್ಕಿರಿದು ತುಂಬಿ, ಇತರ ಮರ್ಯಾದೆಗಳ ಸಹಿತವಾಗಿ, ‘ಉದಾರಶಿರೋಮಣಿ’ ಎಂಬ ಬಿರುದನ್ನು ಶ್ರೀಮಾನ್ ಎ. ಆನಂದರಾಯರವರಿಗೆ ದಾನ ಮಾಡಿದರು ’ ಎಂದು ಸುದ್ದಿ ಕಳುಹಿಸಿದರು. ಈ ಸಮಾಚಾರ ಅಚ್ಚಾಗಿ ಬರುತ್ತಲೂ ಶ್ರೀಮಾನ್ ವಿ. ಆನಂದರಾಯರು ‘ ಬಿಸಿಬಿಸಿ ’ ಮತ್ತು ‘ ತಂಗಳು ’ ಎಂಬ ಎರಡು ಪತ್ರಿಕೆಗಳ ಮೇಲೂ ಮಾನನಷ್ಟಕ್ಕೆ ದಾವಾ ಹೂಡಿದರು. ಪತ್ರಿಕೆಗಳಿಗೆ ಅಜನ್ಮಹಕ್ಕಾದ ಪತ್ರಿಕಾಸ್ವಾತಂತ್ರ್ಯವನ್ನು ಕಸಿದುಕೊಳ್ಳಲು

ಆನಂದರಾಯರು ವ್ಯವಹಾರ ಹೂಡಿದಾರೆ ಎಂದು ಅವು ಮೊರೆಯಿಟ್ಟವು. ರಾಯರು ಎದೆಗೆಡಲಿಲ್ಲ. ಲಾಯರೇ ಮೊದಲಾದ ಉಪಕರಣಗಳಿಗಾಗಿ ಸುಮಾರು ೩೦೦ ರೂಪಾಯಿಗಳನ್ನು ತೆತ್ತರು. ಆರು ತಿಂಗಳ ತನಕ ಕೋರ್ಟು ಕಚೇರಿಗಳಲ್ಲೇ ಅಲೆದಾಡಿದರು. ಕಡೆಗೆ ಎರಡು ಪತ್ರಿಕೆಗಳೂ ಅವರಿಗೆ ಒಂದೊಂದು ರೂಪಾಯಿ ದಂಡ ತೆರಬೇಕೆಂದು ನ್ಯಾಯಸ್ಥಾನದಿಂದ ತೀರ್ಪಾಯಿತು. ಅಪೀಲು ಮಾಡಿದರು. ದಂಡದ ಮೊತ್ತ ಒಂದೇ ರೂಪಾಯಿಗೆ ಇಳಿಯಿತು. ಅಲ್ಲದೆ ಎರಡು ಪತ್ರಿಕೆಗಳಲ್ಲೂ, 'ಶ್ರೀಮಾನ್ ಎ. ಆನಂದ ರಾಯರು ಉದಾರಶಿರೋಮಣಿಗಳಲ್ಲ' ಎಂದು ಅಚ್ಚು ಮಾಡಿದರು. ಈ ಅಪಮಾನವನ್ನು ಸಹಿಸಲಾರದೆ, ಎ. ಆನಂದರಾಯರು, ಪಾಪ, ಹೊಲ ಗದ್ದೆ ಗಳನ್ನು ಮಾರಿ ಮನೆಯನ್ನು ಗಿರವಿ ಇಟ್ಟು ಕೊಬ್ಬಳ್ಳಿಗೆ ಹೊರಟು ಹೋದರು! ........ ಶ್ರೀಮಾನ್ ವಿ. ಆನಂದರಾಯರೇ ಉದಾರಶಿರೋಮಣಿಗಳು ಎಂಬುದು ನಿರ್ಧರವಾಯಿತು.

ಮಾನನಷ್ಟದ ಮೊಕದ್ದಮೆ ಮುಗಿದಾಗ ಆನಂದರಾಯರು ಬೋರ್ಡನ್ನು ಮತ್ತಷ್ಟು ದೊಡ್ಡದು ಮಾಡಿಸಿದರು. ದಾರಿಹೋಕರ ಕಣ್ಣು ಕೀಳುವಂತೆ ಬಿರುದನ್ನು ದಪ್ಪ ದಪ್ಪ ಅಕ್ಷರದಲ್ಲಿ ಬರೆಸಿದರು. UDARA VILLA 'ಉದಾರವಿಲ್ಲ' ಅಂತ ಮನೆಗೆ ಹೆಸರಿಟ್ಟು, ಇಂಗ್ಲೀಷಿನಲ್ಲಿ ಒಂದು ಬೋರ್ಡು ತಯಾರಿಸಿ ಹಾಕಿಸಿದರು.

ಮರುದಿನ ಶನಿವಾರ. ಬೆಳಕು ಹರಿಯುತ್ತಲೂ ಆನಂದರಾಯರ ಮನೆ ಬಾಗಿಲಲ್ಲಿ ಒಂದು ಭಾರಿ ದೊಂಬಿ! ಹುಡುಗರಿಬ್ಬರೂ ಮನೆಯಲ್ಲಿರಲಿಲ್ಲ. ಸುಂದರಮ್ಮನವರಿಗೆ ಗಾಬರಿ ಆಯಿತು. ಆಕೆ, ಪಾಪ, ಏದುತ್ತಾ ಏದುತ್ತಾ ಮೆಟ್ಟಲು ಹತ್ತಿ ಮಹಡಿ ಮೇಲೆ ಹೋಗಿ, ಅಲ್ಲಿ ತಮ್ಮ ಜಾತಕವನ್ನು ಗುಣಿಸಿ ನೋಡುತ್ತಿದ್ದ ಯಜಮಾನರನ್ನು ಕರೆದು, 'ಇದೇನಿದು ಇಷ್ಟೊಂದು ಜನ ನಮ್ಮ ಮನೆ ಮುಂದೆ? ಬನ್ನಿ, ಅಂದರೆ!' ಎಂದರು. ರಾಯರು ಸಿಧಾನ ವಾಗಿ ಎದ್ದು ಪಿಟಿಕಿ ಬಾಗಿಲು ತೆರೆದರು.

'ಧರ್ಮರೇ, ತಾಯಿ ತಂದೆ, ಶಿವಾ!'—'ಕಣ್ಣಿಲ್ಲದ ಕಪೋತಿ, ಕಪೋತಿ'—'ಒಂದು ಕಾಸು ಕೊಡಿ, ಬುದ್ಧೀ'—'ಹ್ರಾಂ, ಹ್ರಾಂ, ಶೀತಾ ರಾಂ'—'ಮಕ್ಕಳ ಹೆತ್ತ ತಾಯಿ ಮಹರಾಜ'—'ಧೋಮ್‌ಡ ಧೋಮ್‌ಡ

ಪ್ಯಾಪ ಪ್ಯಾಪ '—'ಸಾರ್, ತ್ರೀ ಪೈಸ್ '—'ಅಮ್ಮಾ, ಅಮ್ಮಾ '— 'ಸುಲಭವಲ್ಲವೋ ಬ್ರಹ್ಮಾನಂದಾ '—'ಅ..ಅ....ಬಾಬ್ಯಾ...... ಬಾಬ್ಯಾ....' 'ಗೋಹಿಂಧಾ ಗೋಹಿಂಧಾ '—'ಕಪೋತಿ ಕಪೋತಿ '— 'ಹರ ಹರೋ ಹರ '..........

ಉದಾರಶಿರೋಮಣಿಗಳು ಕಿಟಿಕಿ ಮುಚ್ಚಿ, ಕೆಳಕ್ಕಿಳಿದರು....ಎಂಟು ಸೇರು ಅಕ್ಕಿ ಆಗಿನ ಖರ್ಚು.

ಇತರರೆಲ್ಲರೂ ರಸ್ತೆಯಲ್ಲೇ ನಿಂತು ಕೈ ನೀಡುತ್ತಿದ್ದರೆ, ಒಬ್ಬರು ಆಚಾರರು ನೆಟ್ಟಗೆ ಒಳಕ್ಕೇ ದಯಮಾಡಿಸಿಬಿಟ್ಟರು. ಉಡುಪಿ ಕಡೆಯವ ರಂತೆ. ದೊಡ್ಡ ವಿದ್ವಾಂಸರಂತೆ. ಕರ್ಮಿಷ್ಠರಂತೆ. ಮಂತ್ರಾಕ್ಷತೆ ತಂದಿದ್ದರು. ಸಂಗಡಲೇ ಗೊತ್ರೋದ್ಧಾರಕನೂ ಇದ್ದ. ಅವನಿಗೆ ಚೌಳ ಮಾಡಿಸುವುದಕ್ಕೆ ಏನಾದರೂ ಯತ್‌ಕಿಂಚಿತ್ ಸಹಾಯ ಮಾಡಿದರೆ....ಇತ್ಯಾದಿ, ಇತ್ಯಾದಿ. ಉದಾರಶಿರೋಮಣಿ ಅಂದಮೇಲೆ ಮೂರು ರೂಪಾಯಾದರೂ ಕೊಡ ಬೇಡವೇ ಅವರಿಗೆ?

ಆಮೇಲೆ ಕರ್ನಾಟಕ ಸಂಘದ ಕಾರ್ಯದರ್ಶಿಗಳು ಬಂದು ತಮ್ಮ ಸಂಸ್ಥೆಗೆ 'ಮಹಾಪೋಷಕ'ರಾಗಲು ಒಪ್ಪಿ, ಅದನ್ನು ಜೀರ್ಣೋದ್ಧಾರ ಮಾಡಬೇಕೆಂದು ಸ್ವಾರಸ್ಯವಾದ ಒಂದು ಉಪನ್ಯಾಸ ಮಾಡಿದರು. ಉದಾರ ಶಿರೋಮಣಿಗಳ ಪೆಟ್ಟಿಗೆಯಿಂದ ಹತ್ತು ರೂಪಾಯಿ ಕಾರ್ಯದರ್ಶಿಯ ಕಿಸೆ ಯೊಳಕ್ಕೆ ಹೋಯಿತು! ಆತ ಹೊರಡುವಾಗ, 'ಸ್ವಾಮಿ, ನಿಮ್ಮ ಮನೆ ಹೆಸರನ್ನ ಕನ್ನಡದಲ್ಲಿ ಬರೆಸಿ ಹಾಕಿ' ಅಂತ ಒಂದು ಸೂಚನೆ ಬೇರೆ ಕೊಟ್ಟ; ಫಾಟಿ!

ಅರ್ಧ ಘಂಟೆಯೊಳಗೆ ಇನ್ನೂ ಏಳೆಂಟು ಜನರು ಬಂದರು. ವಿಚಿತ್ರ ದುರ್ಗದ ಮಹಿಳಾ ಸದನದ ಹಾಲಿ ಮತ್ತು ಮಾಜಿ ಕಾರ್ಯದರ್ಶಿಗಳು, ಹಾಲಿ ಮತ್ತು ಮಾಜಿ ಅಧ್ಯಕ್ಷೆಯರು ಒಬ್ಬರನ್ನೊಬ್ಬರು ದೂಷಿಸುತ್ತಾ ಒಬ್ಬರಾದ ಮೇಲೊಬ್ಬರು ಬಂದು ಚಂದಾ ಕೇಳಿ ತೆಗೆದುಕೊಂಡು ಹೋದರು. ಗರುಡಪುರಾಣದ ಕನ್ನಡ ಭಾಷಾಂತರವನ್ನು ಹತ್ತು ಸಂಚಿಕೆಗಳಲ್ಲಿ ಪ್ರಕಟಿ ಸುತ್ತಿರುವ ಅಪರೋಪಕಾರಿಗಳೊಬ್ಬರು; ಮಾನನಷ್ಟಕ್ಕೆ ವಿಮೆ ಅನುಕೂಲ ವನ್ನು ಕಲ್ಪಿಸಿಕೊಡುವ ಕಂಪನಿಯ ಏಜಂಟರೊಬ್ಬರು; ಭಾರತಾಂಬೆಯ ಹಸಿವನ್ನು ಹೋಗಲಾಡಿಸುವ ಸಲುವಾಗಿ ಆಮರಣಾಂತ ಉಪವಾಸ ದೀಕ್ಷೆ

ಯನ್ನು ಕೈಕೊಂಡಿರುವ ಒಬ್ಬರ ಸಹಾಯಕ್ಕಾಗಿ ಚಂದಾ ಎತ್ತುವವರಿಬ್ಬರು; ಮಕ್ಕಳಿಗಾಗಿ ಈಗ ಕನ್ನಡ ನಾಡಿನ ನಾನಾ ಕಡೆಗಳಲ್ಲಿ ಪ್ರಕಟವಾಗಿರುವ ಪದ್ಯಗಳೆಲ್ಲವನ್ನೂ ದೇವಭಾಷೆಯಾದ ಸಂಸ್ಕೃತಕ್ಕೆ ಪರಿವರ್ತಿಸಿ, ದೇವ ಲೋಕದ ಮಕ್ಕಳಿಗೆ ಅನುಕೂಲಮಾಡಿಕೊಡಲು ಹೊರಟಿರುವ ಉತ್ಸಾಹೀ ತರುಣರೊಬ್ಬರು, ಈ ರೀತಿಯಾಗಿ 'ದೇಹಿ, ದೇಹಿ' ಎಂದು ಕೂಗುತ್ತಾ ನೂರಾರು ಜನರು 'ಉದಾರವಿಲ್ಲ'ದ ಕಡೆಗೆ ಇರುವೆ ಸಾಲಿಟ್ಟಂತೆ ಹರಿದು ಬಂದರು. ಒಟ್ಟು ೧೩೫ ರೂಪಾಯಿ ಒಂದೇ ದಿನ ವೆಚ್ಚವಾಯಿತು. ಬಂದ ದ್ದೆಲ್ಲ ಬರಲಿ, ಬಿರುದನ್ನು ಕಾಪಾಡಬೇಕು ಅಂತ ಆನಂದರಾಯರು ಬಾಗಿಲು ತೆರೆದು ಕುಳಿತಿದ್ದರು!

'ಅಯ್ಯೋ! ಯಾವ ವಿಷಘಳಿಗೆಯಲ್ಲಿ ನೀವು ಆ ಬಿರುದಿಗೆ ಬಾಯಿ ಬಿಟ್ಟಿರೋ! ತಾತ ಮುತ್ತಾತರ ಕಾಲದಿಂದಲೂ ಬಂದಿದ್ದ ಸಂಪತ್ತೆಲ್ಲಾ ಹೀಗೆ ಸೋರುತ್ತಿದ್ದರೆ, ಮಕ್ಕಳ ಕೈಗೆ ಕರಟ ತಾನೆ?' ಎಂದು ಸುಂದರಮ್ಮ ನವರು ಕೊಂಚ ಬಿರುಸಾಗಿಯೇ ಮಾತನಾಡಿದರು. ಕೇಳುವವರು ಯಾರು? ಮನೆಯಲ್ಲಿ ನಡೆಯುವ ಅವಾಂತರಗಳನ್ನು ಕಂಡ ಹುಡುಗರಿಬ್ಬರೂ,.. ಇರಿ ದದ್ದೇ ಲಾಭ ಅಂತ ಹಾಸ್ಟಲ್ ಖರ್ಚಿನ ನೆಪ ಹೇಳಿ ಒಟ್ಟು ಎಪ್ಪತ್ತು, ನೂರು ಅಂತ ತಂತಿ ಮೇಲೆ ತಂತಿ ಕಳುಹಿಸುತ್ತಿದ್ದರು. 'ಮಗ ಬಾಳೆಯ ಹಣ್ಣು ತಿಂದ; ಅಪ್ಪ ಸಿಪ್ಪೆ ಜಾರಿ ಬಿದ್ದ' ಅಂತಾರಲ್ಲಾ, ಹಾಗಾಯಿತು ಸ್ಥಿತಿ! ವಿಚಿತ್ರದುರ್ಗದಲ್ಲೇ ಆನಂದಸೇವಾಸಂಘ, ಉದಾರವರ್ಧಕ ಸಮಾಜ, ಶಿರೋ ಮಣಿಸದನ, ಮೊದಲಾದ ಸಂಸ್ಥೆಗಳು ಮೊಳೆತು ಆನಂದರಾಯರ ಸಹಾಯ ವೊಂದರಿಂದಲೇ ಚಿಗುರಿದುವು.

ಕಪೋತಿಗಳ ಕಿರಲಾಟವನ್ನು ಸಹಿಸಲಾರದೆ ಅಕ್ಕಪಕ್ಕದ ಮನೆಯವ ರೆಲ್ಲರೂ ಬಂದು, 'ರಾಯರೇ! ನಿಮ್ಮ ಬಿರುದಿನ ಬೋರ್ಡನ್ನ ಕಳಚಿ ಒಳ ಗಿಟ್ಟುಕೊಳ್ಳಬಾರದೆ?' ಎಂದರು. ಆದರೆ, ಆನಂದರಾಯರೆದುರು ಅವರ ಬಿರು ದಿನ ವಿಷಯವಾಗಿ ಕಡಿಮೆ ಮಾತನ್ನ ಯಾರು ಆಡಿದರೂ ಅವರು ಕೂಡಲೇ ಉರಿದುಬೀಳುತ್ತಿದ್ದರು. ಬರಬರುತ್ತಾ ಅವರು ಆ ದಿನದ ಮಳೆ, ಗೋಳಪ್ಪ ನವರು ತಮ್ಮನ್ನು ಬಲವಂತದಿಂದ ವೇದಿಕೆಯ ಮೇಲಕ್ಕೆ ಎಳೆದುಕೊಂಡು ಹೋಗಿ ಕೂರಿಸಿದ್ದು, ಎಲ್ಲವನ್ನೂ ಮರೆತೇ ಬಿಟ್ಟಿದ್ದರು. 'ಎ' ಎಂಬುದು 'ವಿ' ಗೆ

ಬದಲಾಗಿ ಮುದ್ರಾರಾಕ್ಷಸ ಬೀಳಿಸಿದ ಒಂದು ಅಚ್ಚಿನ ತಪ್ಪು ಎಂದು ಅವರು ಸಂಪೂರ್ಣ ನಂಬಿಬಿಟ್ಟಿದ್ದರು. ತಮಗೆ ಬಿರುದು ಕೊಡಿಸುವು ದಕ್ಕಾಗಿಯೇ ಆ ದಿನ ಸಭೆ ಸೇರಿದ್ದು; ತಮ್ಮ ಉದಾರ ಗುಣಕ್ಕೆ ಮೆಚ್ಚಿ ಅದನ್ನು ಇನ್ನೂ ಪ್ರವರ್ಧಮಾನಕ್ಕೆ ತರಲಿ ಎಂಬ ಉದ್ದೇಶದಿಂದಲೇ ಆ ದಿನ ತಮಗೆ ಬಿರುದು ಬಂದದ್ದು, ಎಂದು ಅವರು ನಿಸ್ಸಂದೇಹವಾಗಿ ಮನಗಂಡಿ ದ್ದರು. ಆದ್ದರಿಂದ, ದಿವಾಳಿಯಾದರೂ ಚಿಂತೆ ಇಲ್ಲ; ನಾಲ್ಕು ಜನ ವಿಶ್ವಾಸ ವಿಟ್ಟು ಕೊಟ್ಟ ಬಿರುದಿಗೆ ಅಪಮಾನ ಮಾಡುವುದಿಲ್ಲ ಅಂತ ಅವರು ನಿರ್ಧ ರಿಸಿಬಿಟ್ಟಿದ್ದರು. ಅಕ್ಕಪಕ್ಕದವರು ಅಕ್ಕಪಕ್ಕಗಳಿಗೆ ಹೊರಟುಹೋಗ ಬೇಕಾಯಿತು.

ಮಿತಿ ಇಲ್ಲದ ಔದಾರ್ಯದಿಂದ ಆನಂದರಾಯರ ಸಾಲ ಸಾವಿರಕ್ಕೆ ಬಂತು. ‘ ಚಿಂತೆ ಇಲ್ಲ; ಸಾವಿರ ತನಕ ಸಾಲ, ಆಮೇಲೆ ಲೋಲ ’, ಎಂದರು. ಒಂದು ತೋಟವನ್ನು ಕ್ರಯಕ್ಕೆ ಕೊಟ್ಟು ಎರಡು ತಿಂಗಳು ತಟಾಯಿಸಿದರು. ಮನೆಗೆ ತರಿಸುವ ಹಾಲು ಮೊಸರು ಅರ್ಧಕ್ಕಿಳಿಯಿತು. ಮಧ್ಯಾಹ್ನದ ಉಪಾ ಹಾರಕ್ಕೆ ಕಲ್ಲು ಬಿತ್ತು. ‘ ಸಿರಿಗನ್ನಡಂ ’ ಪೇಪರನ್ನೂ ಕೂಡ ನಿಲ್ಲಿಸಬೇಕಾಗಿ ಬಂತು. ಗ್ರಹಚಾರಕ್ಕೆ ಸರಿಯಾಗಿ, ೧೮ ವರ್ಷಗಳಿಂದ ಹಡೆಯದೆ ಇದ್ದ ಸುಂದರಮ್ಮನವರು ಅವಳಿಜವಳಿ ಹೆತ್ತರು. . . . ಒಡವೆಗಳು ಒಂದೊಂದಾಗಿ ಬಿಕರಿಯಾದವು. ಕಡೆಗೆ ಒಂದು ದಿನ ಸ್ವಗೃಹವನ್ನು ಒಬ್ಬ ಸಾಹುಕಾರನಿಗೆ ಭೋಗ್ಯಕ್ಕೆ ಬರೆದುಕೊಟ್ಟು, ತಾವು ಬಾಡಿಗೆ ಮನೆಗೆ ಹೋದರು. ಆ ದಿನ ಸುಂದರಮ್ಮನವರು ಕಣ್ಣೀರುಬಿಟ್ಟಂತೆ ಹಿಂದೆಂದೂ ಆಕೆ ಅತ್ತಿರಲಿಲ್ಲ. ಮೂರು ತಿಂಗಳಲ್ಲೇ ಮನೆಯನ್ನು ಕ್ರಯಕ್ಕೆ ಕೊಡಬೇಕಾಗಿ ಬಂತು. ಬಂದ ಹಣದಲ್ಲಿ ೫೦ ರೂಪಾಯಿಗಳನ್ನು ರಾಮಮಂದಿರದ ಕಟ್ಟಡ ಫಂಡಿಗೆ ಸಲ್ಲಿಸಿ ದರು. . . . . . ಮೂರು ತಿಂಗಳ ಬಾಡಿಗೆ ಮಾಲೀಕರಿಗೆ ಸಲ್ಲಬೇಕಾಗಿದ್ದರಿಂದ ಅವರು ಮನೆ ಬಿಡಬೇಕೆಂದು ಲಾಯರ್ ಮೂಲಕ ನೋಟೀಸು ಕೊಟ್ಟರು ! ರಾಯರು ಮನೆ ಬದಲಾಯಿಸಿದರು. ಸಾಮಾನುಗಳನ್ನೆಲ್ಲಾ ಎತ್ತಿ ಗಾಡಿಗೆ ತುಂಬುತ್ತಿದ್ದಾಗ, ಪೋಸ್ಟ್‌ಮನ್ ಬಂದು, ವಾರ್ಡನ್ ಸಾಹೇಬರ ಕಾಗದ ವನ್ನು ತೆಗೆದು ಆನಂದರಾಯರ ಕೈಯಲ್ಲಿರಿಸಿದ.

—

## ನಾಲ್ಕನೆಯ ಅಧ್ಯಾಯ

# ಆನಂದರಾಯರ ಆಲೋಚನೆ



ತೋರವಹ ಬೆಲ್ಲದಲಿ ಬೇವೆಡೆಗೊಂಡ ತೆರನಂತೆ....ಸೋಮೇಶ್ವರ

" ನಡೆದುದು ಸಾಕೈ " " ಸರಿ, ಸಾಕು " ......ತೀ. ನಂ. ಶ್ರೀ.

ಹುಡುಗರೆ ಎನಿತುಂಬಾರಿಯುಂ
ಮಡವಿದೊಡಂ ಕುಂದಬೇಡಿರ್ಕೈ ನಿಮ್ಮೆದೆಯೊಳ್ .... ಬಿ. ವೆಂ.



ಆನಂದರಾಯರು ರೆಯಿಲಿನಿಂದಿಳಿದು ನೆಟ್ಟಗೆ ಹಾಸ್ಟಲಿಗೆ ನಡೆದು-ಕೊಂಡೇ ಹೊರಟರು. ದಾರಿ ಉದ್ದಕ್ಕೂ, ' ಟಾಂಗಾ ತರಲೇ, ಸ್ವಾಮಿ ' ' ಸಾಮಾನು ಹೊತ್ತುಕೊಂಡು ಬರುತ್ತೇನೆ,ಬುದ್ಧೀ ' ' ಮೂರಾಣೆ ಕೊಡಿ, ಸಾಕು, ಸ್ವಾಮಿ ! ' ' ನಾನು ತೆಗಿದುಕೊಳ್ಳುತ್ತೇನೆ, ನಿಮಗೆ ಯಾಕೆ ತೊಂದರೆ ! ' ಅಂತ ಅವರನ್ನು ಗಾಡಿಯವರೂ ಕೂಲಿಯವರೂ ಕಾಡುತ್ತಿದ್ದರು. ಪ್ರಯಾಣದ ವೆಚ್ಚಕ್ಕೆ ಕೈಯಲ್ಲಿದ್ದ ಹಣ ಸಾಕು ಸಾಲದು ಎಂಬಷ್ಟು ಮಾತ್ರ ಇದ್ದುದರಿಂದ ರಾಯರು ತಲೆ ಅಲ್ಲಾಡಿಸುತ್ತಾ ಮುಂದೆ ಬಂದರು. ಅವರೆಲ್ಲರಿಗೂ ಆಶ್ಚರ್ಯ! ಆಗರ್ಭಶ್ರೀಮಂತರಂತೆ ಕಾಣುವ ಇಳಿವಯಸ್ಸಿನ ಮಹನೀಯರೊಬ್ಬರು ಹೆಜ್ಜೆಯ ಮೇಲೆ ಹೆಜ್ಜೆಯ ಹಾಕುತ ಸುಡು ಬಿಸಿಲಲ್ಲಿ ಕೀಲೆಣ್ಣೆ ರಸ್ತೆಯ ಮೇಲೆ ನಡೆಯುವುದನ್ನು ಕಂಡರೆ ಯಾರಿಗೆ ತಾನೆ ಮನ ಮರುಗುವುದಿಲ್ಲ? ಗಾಡಿಯವರೂ ಕೂಡ ಆದಷ್ಟು ಬಾಡಿಗೆಯ-ನ್ನಿಳಿಸಿ ಅವರನ್ನು ಕೂರಿಸಿಕೊಂಡು ಹೋಗಲೇಬೇಕೆಂದು ಪ್ರಯತ್ನಪಟ್ಟರು.

'ಏನೇ ಬರಲಿ, ಇಪತ್ತು ನಡೆದೇಬಿಡುವುದು' ಎಂದು ರಾಯರೂ ಮನಸ್ಸನ್ನು ಗಟ್ಟಿಮಾಡಿದರು.

ಆಗ, ಇನ್ನೇನು ವಾರ್ಡನ್ ಸಾಹೇಬರ ಬಂಗಲಿ ಬಂತು ಅನ್ನುವಾಗ ಕ್ಷಾಮದೇವತೆಯ ವಾಹನದಂತಿದ್ದ ಒಂದು ಪ್ರಾಣಿಯನ್ನ ಗಾಡಿಗೆ ಬಿಗಿದಿದ್ದ ಒಬ್ಬ ಮುದುಕ 'ಎರಡಾಣೆ ಕೊಡಿ, ಸ್ವಾಮಿ, ಕುದುರೆಗೆ ಹುಲ್ಲು, ನನಗೆ ಗಂಜಿ ಎರಡೂ ಆಗುತ್ತದೆ; ಎಲ್ಲಿಗೆ ಬೇಕಾದರೂ ತೆಗೆದುಕೊಂಡು ಹೋಗಿ ಬಿಡುತ್ತೇನೆ, ಸ್ವಾಮಿ. ಕುದುರೆ ಹೊಟ್ಟೆಯ ಮೇಲೆ ಹೊಡೆಯಬಾರದು, ಮೂಕಪ್ರಾಣಿ; ನಿಮ್ಮಂತಹವರು ನಡೆಯುವುದು, ನಾನು ಗಾಡಿಯಲ್ಲಿ ಕುಳಿತು ಸವಾರಿಮಾಡುವುದು, ಅಂದರೆ ಯಾವ ನ್ಯಾಯ? ಬನ್ನಿ. ನೀವೂ ಕೂಡಿರಿ. ಎರಡಾಣೆ ಕೊಡಿ, ಸಾಕು' ಎಂದು ಪ್ರಾರಂಭಮಾಡಿದ. ಉದಾರಶಿರೋಮಣಿಗಳು ಕುದುರೆಯನ್ನು ನೋಡಿದರು. 'ಶತಮಾನಗಳ ಹಿಂದೆ ನಮ್ಮ ಭರತವರ್ಷದಲ್ಲಿ ಅಶ್ವಮೇಧಯಾಗ ಮಾಡಿಸಿಕೊಳ್ಳುತ್ತಿದ್ದ ಪ್ರಾಣಿಗೆ ಈಗ ಅದೇ ಪುಣ್ಯಭೂಮಿಯಲ್ಲಿ ಈ ಗತಿ ಬಂತೆ?' ಎಂದು ಮರುಗಿದರು. ವಾಹನವನ್ನೇರಿದರು.

ವಾರ್ಡನವರನ್ನು ನೋಡಿ ಮಾತನಾಡುವುದಕ್ಕಾಗಿಯೇ ವಿಚಿತ್ರ-ದುರ್ಗದಿಂದ ಬಂದ ಆನಂದರಾಯರಿಗೆ ಅವರ ಮನೆ ಬಾಗಿಲಿಗೆ ಬರುತ್ತಲೂ ಒಳಗೆ ಪ್ರವೇಶಿಸಲು ಧೈರ್ಯ ಸಾಲದೆ ಹೋಯಿತು! ಏಕೆಂದರೆ, ಸುಮಾರು ದೂರಕ್ಕೆ ಚೆನ್ನಾಗಿ ಕಾಣಿಸುವ ಹಾಗೆ ಅವರ ಮನೆ ಗೋಡೆಯ ಮೇಲೆ 'ನಾಯಿಗಳಿವೆ' ಎಂಬ ಒಂದು ಪ್ರಕಟಣೆಯು ರಾರಾಜಿಸಿತು. . . . ಆನಂದ-ರಾಯರು ರಸ್ತೆಯಲ್ಲೇ ನಿಂತರು. ಹತ್ತು ಹದಿನೈದು ನಿಮಿಷಗಳು ಹಾಗೆಯೇ ನಿಂತಿದ್ದರು. ಮತ್ತೂ ಎರಡು ಮೂರು ನಿಮಿಷಗಳಾದುವು. . ಆಗ, ಮನೆಯೊಳಗಿಂದ ಯಾರೋ ಬೊಗಳಿದ ಹಾಗಾಯಿತು! ಆನಂದ-ರಾಯರು ಕಿವಿಕೊಟ್ಟು ಲಾಲಿಸಿದರು. ಬೊಗಳಿದ್ದು ನಾಯಿಯಲ್ಲವೆಂದು ಅವರಿಗೆ ತೋರಿತು. ಆದರೂ, . . . . . . . . ಹೆದರಿಕೆ. 'ಇದೇನಾಶ್ಚರ್ಯ! ನಾಯಿಗಳು ಅಂತ ಬಹುವಚನವನ್ನುಪಯೋಗಿಸಿದ್ದರೂ, ಒಂದು ನಾಯಿ ಕೂಡ ಮನೆ ಹೊರಗಡೆ ಕಾಣಿಸುತ್ತಿಲ್ಲವಲ್ಲಾ! ಏಕೆ? ಅದೂ ಅಲ್ಲದೆ, ವಾರ್ಡನ್‌ರವರು 'ನಾಯಿಗಳಿವೆ' ಎಂಬ ವಸ್ತುಸ್ಥಿತಿಯನ್ನು ಮಾತ್ರ

ಸೂಚಿಸಿರುವರೇ ಹೊರತು ಅವು ಕಚ್ಚುತ್ತವೆ ಎಂದು ಯಾರನ್ನೂ ಎಚ್ಚರಿಸಿಲ್ಲ....ಹಾಗಾದರೆ ಭಯವೇನು ?....ಒಳಗೆ ಹೋಗೋಣವೆ ? ಬೇಡ, ಬೇಡ....ಅವಳು ಬೇರೆ, ಊರು ಬಿಟ್ಟಾಗ, ಹುಷಾರಾಗಿ ಹೋಗಿ ಬನ್ನಿ, ಗ್ರಹಚಾರ ಕಡಿಮೆಯಾಗಿರುವ ಕಾಲ, ಅಂತ ನುಡಿದಿದ್ದಾಳೆ......ಅಲ್ಲದೆ, ಇನ್ನೊಂದು ವಿಷಯ......ಬೊಗಳುವ ಸದ್ದಾದರೂ ಕೇಳಿಸಿದರೆ, ಗಾದೆ ಪ್ರಕಾರ ಈ ಮನೆ ನಾಯಿಗಳು ಕಚ್ಚುವುದಿಲ್ಲ ಅಂತ ನಿಶ್ಚಯಿಸಿಬಿಡಬಹು-ದಾಗಿತ್ತು......ಆದರೆ ಒಂದಕ್ಕಿಂತ ಹೆಚ್ಚು ಸಂಖ್ಯೆಯ ನಾಯಿಗಳು ಈ ಮನೆಯಲ್ಲಿದ್ದರೂ ಕೂಡ ಭೊಳ್ ಎಂಬ ಒಂದು ಸದ್ದೂ ಹೊರಬೀಳದೆ ಇರುವುದು ಅನುಮಾನಾಸ್ಪದ......ಏನೋ ಚಾಣಕ್ಯತಂತ್ರವಿರಬೇಕು. ಅಥವಾ, ವಾರ್ಡನರು ಸಾಕಾದಷ್ಟು ಆಹಾರ ಕೊಡದೆ ಇರುವುದರಿಂದ ಎಲ್ಲವೂ ನಿಶ್ಚೇತನವಾಗಿ ಅಲ್ಲಲ್ಲಿ ಹೊರಳಾಡುತ್ತಿವೆಯೋ ? ಹಾಗಾದರೆ ಇನ್ನೂ ಅಪಾಯವೇ, ಬಂದವರ ಮೂಳೆಗಳನ್ನು ಮುರಿದು ತಿನ್ನುತ್ತವೆ ! ಅದಕ್ಕಾಗಿಯೇ ಹೊಂಚು ಕಾಯುತ್ತಿವೆಯೋ, ಏನೋ ?....ಬೇಡ.... ಹಾಸ್ಟಲಿಗೆ ಹೋಗಿ ಹುಡುಗರ ಜೊತೆಯಲ್ಲೇ ಇಲ್ಲಿಗೆ ಬರೋಣ. ಅವರಿಗೆ ಈ ನಾಯಿಗಳ ಪರಿಚಯ ಚೆನ್ನಾಗಿರಬಹುದು.' ಹೀಗೆ ನಿಶ್ಚಯಿಸಿ, ಆನಂದರಾಯರು 'ಶ್ವಭ್ಯಃ ಶ್ವಪತಿಭ್ಯಶ್ಚ ನಮೋ ನಮಃ'ಎಂದು ಜಪಿಸುತ್ತಾ, ಶಪಿಸುತ್ತಾ, ಹಾಸ್ಟಲಿನ ಕಡೆಗೆ ತಿರುಗಿದರು.

**ಜೀವನ ಹೈ ಸಂಗ್ರಾಮ್, ಬಂದೆ**
**ಜೀವನ ಹೈ ಸಂಗ್ರಾಮ್.......**

ಎಂದು ಸಿಳ್ಳು ಹಾಕುತ್ತಾ, ಶೀನ, ಪಾಪು, ತನ್ನ ಪೆಟ್ಟಿಗೆಯಿಂದ ಬೆಳ್ಳಿ ಕಪ್ಪುಗಳನ್ನೆಲ್ಲಾ ಒಂದೊಂದಾಗಿ ತೆಗೆದು ಸಿಲ್‌ವರೊ ಪಾಲೀಶಿನಿಂದ ಒರೆಸಿ, ತಿಕ್ಕಿ, ಹೊಳಪುಕೊಟ್ಟು, ಮೇಜಿನ ಮೇಲಿಟ್ಟು ಆನಂದಪಡುತ್ತಿದ್ದ. ಹುನು-ಮಂತನ ಕಾಟ ತಪ್ಪಿದುದರಿಂದ ಅವನು ಆಟ, ಊಟ, ಓಟಗಳಲ್ಲೇ ಸದಾ ಕಾಲಕಳೆಯುತ್ತಿದ್ದ. ಕಾಗೆಯನ್ನೋಡಿಸಿದ ಕೋಗಿಲೆಯಂತೆ ಅವನು ರೆಕ್ಕೆ ಹರಡಿಕೊಂಡು ಬೇಕುಬೇಕಾದ ಕಡೆಗಳಲ್ಲೆಲ್ಲಾ ಹಾಡುತ್ತಾ ಹಾರಾಡಿದ.... ಐದು ಕಪ್ಪುಗಳು ! ಎಲ್ಲವೂ ಆ ವರ್ಷದ ಸಂಪಾದನೆ. ಓಬೀರಾಯನ ಸ್ಮಾರಕೋತ್ಸವದ ಕಾವ್ಯವಾಚನ ಸ್ಪರ್ಧೆಗೆ ಬಂದ ೩ನೆಯ ಬಹುಮಾನ;

ಭೀಮನ ಪಾತ್ರ ನಟಿಸಿದ್ದಕ್ಕೆ ಆಶ್ವಾಸನವಾಗಿ ಬಂದದ್ದು ಒಂದು; ಯೂನಿಯನ್ ಕಲಾಪ್ರದರ್ಶನದಲ್ಲಿ ಹನುಮಂತನ ಒಂದು ವ್ಯಂಗಚಿತ್ರವನ್ನು ಬರೆದು ಪ್ರದರ್ಶಿಸಿದ್ದಕ್ಕೆ; ಹಾಸ್ಟಲ್ ಡೇ ದಿನ ಎಲ್ಲರಿಗಿಂತ ಹೆಚ್ಚಾಗಿ ಮಂಡಿಗೆ ತಿಂದದ್ದಕ್ಕೆ; ಭಾರ ಎತ್ತುವ ಸ್ಪರ್ಧೆಯಲ್ಲಿ ಬಂದ ಮೊದಲನೆಯ ಬಹುಮಾನ; ಒಟ್ಟು ಐದು !

ಜೀವನ ಹೈ ಸಂಗ್ರಾಮ್.........

'ಶೀನಾ!'

ಬಂದೆ

ಜೀವನ ಹೈ ಸಂಗ್ರಾಮ್.........

'ಲೋ ಶೀನಾ!'

'??....ಇನ್ನೂ ಒಂದೇ ಒಂದು ವರ್ಷ ಈ ಕಾಲೇಜಿಗೂ ನನಗೂ ಋಣಾನುಬಂಧ. ಆಮೇಲೆ ಎಂ. ಎ. ಅಂತ ಅನ್ನಿಸಿಕೊಂಡು ಗಾಳಿಯೋ ಬಿಸಿಲೋ ಊರು ಊರು ತಿರುಗಬೇಕಾದ್ದೇ ಹೊಟ್ಟೆಪಾಡಿಗೋಸ್ಕರ.... ಇನ್ನೊಂದು ವರ್ಷದಲ್ಲಿ ಹೇಗಾದರೂ ಕಷ್ಟಬಿದ್ದು ಏಳು ಕಪ್ಪುಗಳನ್ನು ಕೂಡ ಸಂಪಾದಿಸಿಬಿಟ್ಟರೆ, ಒಂದು ಡಜನ್ ಭರ್ತಿಯಾಗುತ್ತದೆ....ನಾನು ಎಲ್ಲಿ ಯಾವ ಕೆಲಸಕ್ಕೆ ಸೇರಿಕೊಂಡರೂ ಜೊತೆಗೊಂದು ವ್ಯಾಯಾಮ ಶಾಲೆ ಸ್ಥಾಪಿಸದೆ ಬಿಡುವುದಿಲ್ಲ....'ದರಿದ್ರನಾರಾಯಣ ವ್ಯಾಯಾಮ ಶಾಲೆ' ಅಂತ ಹೆಸರು ಅದಕ್ಕೆ ! ಅದರ ಮುಂಭಾಗದ ಕೋಣೆಯಲ್ಲೇ ಸೊಗಸಾದ ಗಾಜಿನ ಬೀರುವಿನೊಳಗೆ ಹನ್ನೆರಡು ಬೆಳ್ಳಿ ಕಪ್ಪುಗಳನ್ನೂ ಸಾಲಾಗಿಟ್ಟರೆ..'

'ಲೋ ಶೀನಾ! ಹನೂ....'

'??......!!....ಅಯ್ಯಯ್ಯೋ! ವಾರ್ಡನ್‌ರವರು ಊರಿಗೆ ಕಾಗದ ಬರೆದದ್ದನ್ನೇ ಮರೆತುಬಿಟ್ಟಿದ್ದೆನಲ್ಲಾ!....

ಶೀನ ಬಾಗಿಲು ತೆರೆದ. ಆನಂದರಾಯರು ಮಂಚದ ಮೇಲೆ ಕುಳಿತು-ಕೊಂಡರು. ಕೊಂಚ ಸಿಟ್ಟಿನಿಂದಲೇ ಅವರು 'ಹನುಮಂತ ಎಲ್ಲಿ?' ಎಂದು ವಿಚಾರಿಸಿದರು. ನಡೆದ ಕಾರ್ಯಕಲಾಪಗಳನ್ನೆಲ್ಲಾ ಶೀನ ವಿಸ್ತಾರವಾಗಿ ತನ್ನ ಪಕ್ಷ ಸರಿದೋರುವಂತೆ ವಿವರಿಸಿದ ಆದರೂ ಒಟ್ಟಿನಲ್ಲಿ ಶೀನ ಹನು-ಮಂತನಿಗೆ ಹೆಚ್ಚು ಅನ್ಯಾಯಮಾಡಲಿಲ್ಲ. ಏಕೆಂದರೆ ಹನುಮಂತನ ದೀನ-

ನಾನುತನವನ್ನು ಕಂಡರೆ ಶೀನನಿಗೆ ದಾಸಿನಾನುತನ ಬರುತ್ತಲೇ ಇರಲಿಲ್ಲ. ಕೋಪಕ್ಕಿಂತ ಅವನಿಗೆ ಕನಿಕರವೇ ಹೆಚ್ಚು. ತಾನೂ ಸುಖಪಡುವುದಿಲ್ಲ. ಇತರರನ್ನೂ ಸುಖದಲ್ಲಿರಿಸುವುದಿಲ್ಲವಲ್ಲಾ ಇವನು ಅಂತ ಅವನು ಸದಾ ಮರುಗುತ್ತಿದ್ದ. ಶೀನ ಹೇಳಿದ ಕಥೆಯನ್ನು ಕೇಳುತ್ತಿದ್ದಾಗ ಆನಂದರಾಯ ರಿಗೆ ತುಂಬ ಮನೋವೇದನೆಯಾಗಿರಬೇಕು. ಅವರ ಚಿತ್ತಭಿತ್ತಿಯ ಮೇಲೆ ಚಿತ್ರದ ಹಿಂದೆ ಚಿತ್ರ ಮಿನುಗಿ ಮಾಯವಾದುವು: ' ಹುಟ್ಟಿದಾಗ ಹನುಮಂತ ಎಂಥ ಮುದ್ದಾದ ಕೂಸು ! ಅಶ್ವತ್ಥ ಪ್ರದಕ್ಷಿಣೆ, ಧನುಷ್ಕೋಟಿ ಯಾತ್ರೆ, ನಾಗರ ಪ್ರತಿಷ್ಠೆ. ರಾಮನಾಮ ಸಪ್ತಾಹ ಮುಂತಾದವುಗಳ ಫಲವಾಗಿ ದೇವರು ಅನುಗ್ರಹಿಸಿದ ಕೂಸು; ಹನುಮಜ್ಜಯಂತಿ ದಿನ ಹುಟ್ಟಿದ್ದ; ವಿಚಿತ್ರದುರ್ಗದಲ್ಲಿ ನಡೆದ ಶಿಶುಪ್ರದರ್ಶನದಲ್ಲಿ ಅವನನ್ನು ಡಾಕ್ಟರುಗಳು ಎಷ್ಟು ಹೊಗಳಿದರು ! ಆಳುಗಳ ರಟ್ಟೆಯ ಮೇಲೆಯೇ ಬೆಳೆದ. ಅವನಿಗಾಗಿ ಕೊಂಡುಕೊಂಡ ಮಖಮಲ್ ಟೋಪಿಗಳೆಷ್ಟು ! ಕೇವಲ ಎಂಟನೆಯ ವರ್ಷ ದಲ್ಲಿ ಮಕ್ಕಳ ಕಾನ್‌ಫರನ್ಸಿಗೆ ಪುಟ್ಟ ಹನುಮಂತನೇ ಅಧ್ಯಕ್ಷನಾಗಿರ-ಲಿಲ್ಲವೆ ? ಆಹಾ ! ಆ ಮೆರವಣಿಗೆಯನ್ನು ನೆನೆಸಿಕೊಂಡರೆ ಈಗಲೂ ರೋಮಾಂಚವಾಗುತ್ತದೆ. ಎಂಟು ಗ್ಯಾಸ್ ಲೈಟುಗಳು !. . . .ಎಂಟೇ ? ಹನ್ನೆರಡೋ ? ಹನ್ನೆರಡೇ ಇರಬೇಕು; ಜ್ಞಾಪಕವಿಲ್ಲ ಕೋಚುಗಾಡಿ. ಕುದುರೆ ಕೊರಳಿಗೂ ಹೂ-ಮಾಲೆ. ಬ್ಯಾಂಡು. ಆ ಕನ್ನಡ ಪಂಡಿತರು ಬರೆದುಕೊಟ್ಟ ಹನ್ನೆರಡು ಪುಟದ ಭಾಷಣವನ್ನು ಹನುಮಂತ ಒಂದು ಮಾತೂ ಬಿಡದೆ ಉರುಹೊಡೆದು ಹೇಗೆ ಒಪ್ಪಿಸಿದ ! ಆ ದಿನ ಬಂದಿದ್ದ ಬುದ್ಧಿ-ವಂತರೆಲ್ಲರೂ ಆ ಭಾಷಣ ಹನುಮಂತನದೇ ಎಂದು ತಿಳಿದು ಅವನನ್ನು ಕೊಂಡಾಡಿದ್ದೆಷ್ಟು ! ದಡ್ಡರು ಕೆಲವರು ಅಸೂಯೆಯಿಂದ ಇಷ್ಟು ಚಿಕ್ಕ ಹುಡುಗ ಇಷ್ಟು ದೊಡ್ಡ ಭಾಷಣ ಮಾಡುತ್ತಾನೆಯೇ ಎಂದು ದೂಷಿಸಿದರು, ಇರಲಿ... ಅವನಿಗೆ ದೃಷ್ಟಿ ತೆಗೆಯುವುದಕ್ಕೆ ಬೇರೆ ನೂರೂಕಾಲು ರೂಪಾಯಿ ವೆಚ್ಚ ! '

' ಈಗ. . . .ಹನುಮಂತನನ್ನ ಕಣ್ಣೆತ್ತಿ ನೋಡುವುದಕ್ಕೂ ಕೂಡ ಒಬ್ಬರಿಲ್ಲ! ಯಾರಿಗೂ ಬೇಡವಾಗಿದ್ದಾನೆ, ಪಾಪ. ಮದುವೆ ಮಾಡಿಕೊ ಅಂತ ಕೂಡ ಅವನಿಗೆ ಒಬ್ಬರೂ ಹೇಳುತ್ತಿಲ್ಲ. . . .ಪರೀಕ್ಷೆಗಳು ಅಂತ ಏಕೆ ಇಟ್ಟಿದಾರೋ ಈ ಪುಣ್ಯಾತ್ಮರು ? ಬೆಳೆಯುವ ಹುಡುಗರ ಸಂತೋಷಜೀವನದಲ್ಲಿ ಹುಳಿ

ಹಿಂಡುವುದಕ್ಕೆ ಅಂತ ಕಾಣುತ್ತದೆ......ಮೂರು ಸಲ ಕೂತು ಸೋತ ಅಂದರೆ, ಪಾಸಾದ ಹಾಗೆಯೇ, ಎಂದಾದರೂ ಒಂದು ಕಾನೂನು ಬರಬಾರದೇ.'......ಆಮೇಲೆ?' ಎಂದರು ರಾಯರು.

'ಆಮೇಲೆ ಏನೂ ಇಲ್ಲ......ವಾರ್ಡನ್‌ಸಾಹೇಬರು ಬಂದರು. ಎಲ್ಲವನ್ನು ಅವರು ಕಣ್ಣಾರ ಕಂಡು ಕಿವಿಯಾರ ಕೇಳಿದರು. ತಕ್ಷಣವೇ ಅವನನ್ನು ರಾಮಮೋಹನ್ ಹಾಸ್ಟಲಿಗೆ ಕಳುಹಿಸಿಬಿಟ್ಟರು. ಇಲ್ಲಿಂದ ಮುಕ್ಕಾಲು ಮೈಲಿ ದೂರ....ನಾನು ಮಾತ್ರ ಇಲ್ಲೇ ಇದೇನೆ' ಎಂದು ಹೇಳಿ ಶೀನ ಮುಗಿಸಿದ.

ಹಣದ ಅಭಾವ; ಮನೆ ಮಾರಿದ ನಾಚಿಕೆ; ಮನೆ ಬದಲಾಯಿಸಿದ ಸಂಕಟ; ಅವಳಿ-ಜವಳಿಯ ಅವತಾರ; ಹುಡುಗರ ಮಾರಾಮಾರಿ; ಎಲ್ಲವೂ ಒಟ್ಟಾಗಿ ಅವರ ಹೃದಯವನ್ನು ಇರಿದುವು.

'ರಾಮಮೋಹನ್ ಹಾಸ್ಟಲಲ್ಲಿ ತಿಂಗಳಿಗೆ ಒಬ್ಬನಿಗೆ ಎಷ್ಟು ರೂಪಾಯಿ ಆಗುತ್ತದೆ ಖರ್ಚು?'

'ಹತ್ತು, ಹತ್ತೊಂಬತ್ತು-ವರೆ.'

'ಇಲ್ಲಿ?'

'ಇಪ್ಪತ್ತಕ್ಕೇನೂ ಮೋಸವಿಲ್ಲ....ಒಬ್ಬನ ಖರ್ಚು..

'ಹಾಗಾದರೆ, ಶೀನಾ, ನೀನೂ ಈಗಲೇ ಈ ಹಾಸ್ಟಲ್ ಬಿಟ್ಟು ಅವನ ಜೊತೆಗೆ ಹೋಗಿ ಅಲ್ಲೇ ಇರು. ಈ ವರ್ಷ ಕೂಡ ಸೋತರೆ ಮುಂದಕ್ಕೆ ಅವನಿಂದ ಕಟ್ಟಿಸುವ ಯೋಚನೆಯೇ ಇಲ್ಲ ನನಗೆ; ಅವನು ಓದಿ ಓದಿ ಉದ್ಧಾರವಾದದ್ದೆಲ್ಲ ಸಾಕು. ನಿನಗಂತೂ ಇನ್ನು ಒಂದು ವರ್ಷ ಓದದೆ ವಿಧಿಯಿಲ್ಲ. ನಿಮ್ಮಗಳ ಓದಿನ ರೀತಿಯೇ ನನಗೆ ಏಕೋ ಅರ್ಥವಾಗುವುದಿಲ್ಲ....ಅಲ್ಲಿ ನಾವು ಅನ್ನಕ್ಕೆ ಗತಿಯಿಲ್ಲದೆ ಹೊಟ್ಟೆಗೆ ಒದ್ದೆ-ಬಟ್ಟೆ ಕಟ್ಟಿಕೊಂಡು ಸಾಯುವುದು; ಇಲ್ಲಿ ನೀವಿಬ್ಬರೂ ನಲವತ್ತು, ಐವತ್ತು ಖರ್ಚು ಮಾಡಿಕೊಂಡು ಕೊಬ್ಬು ತಡೆಯಲಾರದೆ ಒಬ್ಬರ ಮೇಲೆ ಒಬ್ಬರು ಬಿದ್ದು ಗುದ್ದಾಡಿ ನಮ್ಮನ್ನು ತಲೆ ಎತ್ತದ ಹಾಗೆ ಮಾಡುವುದು?......ನಿಮ್ಮ ಅಭ್ಯಾಸ ಕತ್ತಿನಲ್ಲಿ ಇನ್ನು ಒಂದೇ ಒಂದು ಸರ ಬಾಕಿ....'

'ಹಾಗಾದರೆ ನಾನು ಈಗಲೇ ಬಿಟ್ಟುಬಿಡುತ್ತೇನೆ, ಅಪ್ಪಾ! ಬಿ. ಎ. ಅಂತ ಎರಡು ಅಕ್ಷರವಾದರೂ ಬಂದಿದೆಯಲ್ಲಾ ನನಗೆ? ಯಾವುದಾದರೂ ಒಂದು ಚಾಕರಿಗೆ ಸೇರಿಕೊಂಡು ಗೃಹಕೃತ್ಯಕ್ಕೆ ನನ್ನ ಕೈಲಾದಷ್ಟು ಸಹಾಯ ಮಾಡುತ್ತೇನೆ. ಮನೆಯಲ್ಲಿ ಇಷ್ಟು ಕಷ್ಟ ಅಂತ ನನಗೆ ಗೊತ್ತಿರಲಿಲ್ಲ.... ಗೊತ್ತಾದ ಮೇಲೆ ನೆಮ್ಮದಿಯಾಗಿ ಓದುವುದೂ ಅಸಾಧ್ಯ....'

'ಹಾಗೆ ಹೇಳು, ಶೀನಾ! ನಿನ್ನಿಂದ ಈ ಮಾತು ಬರುತ್ತದೆ ಅಂತ ನಿಮ್ಮಮ್ಮನೇ ಹೇಳಿದ್ದಳು. ನೋಡು, ದುರ್ಗದ ಕೋ-ಆಪರೇಟಿವ್ ಸೊಸೈಟಿ ಸೆಕ್ರೆಟರಿ ಗೋಳಪ್ಪನವರಿದ್ದಾರಲ್ಲಾ ಅವರು ಮೊನ್ನೆ ಮನೆಗೆ ಬಂದಿದ್ದರು. 'ಏನು ಸ್ವಾಮಿ ಇಷ್ಟು ದೂರ ಬಂದದ್ದು?' ಅಂದೆ. ಈಚೆಗೆ ಅವರು ನಮ್ಮ ಮನೆ ಕಡೆ ಸುಳಿದೇ ಇರಲಿಲ್ಲ. 'ನಿಮ್ಮ ಕಷ್ಟವನ್ನು ಕಣ್ಣಾರ ನೋಡಿಕೊಂಡು ಸುಮ್ಮನಿರಲಾರದೆ ಬಂದೆ' ಅಂದರು. 'ನಿಮ್ಮ ಹುಡುಗ ಒಬ್ಬನಿಗೆ ಒಂದು ಕೆಲಸ ಮಾಡಿಸಿಕೊಡುತ್ತೇನೆ. ಇಪ್ಪತ್ತೋ ಇಪ್ಪತ್ತೈದೋ ಅವನೂ ತಿನ್ನಲಿ, ಯಾರಿಗೇನು ನಷ್ಟ, ಸೊಸೈಟಿ ಹಣ....' ಅಂತ ಹೇಳಿ ದರು. ಅದನ್ನೇ ನೆನೆಸಿಕೊಂಡು ಬಂದೆ ನಾನು. ನೀನೂ ಕೂಡ ಅದೇ ಮಾತನ್ನ ಎತ್ತಿದೆ....

'ಬಂದುಬಿಡುತ್ತೇನೆ, ಅಪ್ಪಾ. ಅದರದೇನೂ ಇಲ್ಲ....ಆ ಕೆಲಸದ ಜೊತೆಗೆ....ನೀವು ಒಪ್ಪುತ್ತೀರೋ ಇಲ್ಲವೋ....ದುರ್ಗದಲ್ಲೇ ಒಂದು ಬಂಗ್ಲಿ ಬಾಡಿಗೆಗೆ ತೆಗೆದು ಒಂದು ವ್ಯಾಯಾಮ ಶಾಲೆ ಪ್ರಾರಂಭಿಸುತ್ತೇನೆ. ಹತ್ತೋ ಇಪ್ಪತ್ತೋ, ತಿಂಗಳಿಗೆ ಸಂಪಾದನೆಯಾಗುತ್ತೆ....ಅದು ಸರಿ, ಈಗಲೇ ಹೊರಡಬೇಕಾದರೆ, ಹಾಸ್ಟಲ್ ಬಾಕಿ ೩೦ ರೂಪಾಯಿ ಕೊಡ-ಬೇಕಾಗುತ್ತದೆ, ಅದಕ್ಕೇನು ಮಾಡುವುದು?'

'ಬೆಳ್ಳಿ ಅಂಗಡಿಗೆ ಹೋಗಿ ಬರೋಣ, ಸಾಯಂಕಾಲ. ಒಂದೊಂದು ಕಪ್ಪಿಗೆ ಆರು ರೂಪಾಯಿ ಸಿಗುವುದಿಲ್ಲವೆ?'......'ಯಾಕೆ? ನಿನಗಿಷ್ಟ-ವಿಲ್ಲವೋ?'....'ಏನು? ಮಾತಾಡುವದಿಲ್ಲವೇನು?'....'ಅಲ್ಲ ಶೀನಾ! ಬೆಳ್ಳಿ ಕಪ್ಪಿಗೇನು? ಬೇಕಾದರೆ ನಿನ್ನ ಮದುವೆಯಲ್ಲಿ ಐದಲ್ಲ, ಐವತ್ತು ಕೊಡಿಸುತ್ತೇನೆ ನಿನ್ನ ಮಾವನ ಕೈಯಲ್ಲಿ....ಅದರ ವಿಷಯ ನೀನೇನೂ ಯೋಚನೆ ಮಾಡಬೇಡ. ನನ್ನ ಕಷ್ಟ ಅಷ್ಟಿದೆ ಅಂತ ತಿಳಿಯುವುದಿಲ್ಲವಲ್ಲಾ

ಅಂತೀನಿ. ನಿನಗೆ ಇಷ್ಟವಿದ್ದರೆ ಸಾಕು. ಆಮೇಲೆ ನೀನು ನಮ್ಮಪ್ಪ ನನ್ನ ವಿದ್ಯೆಗೆ ಕಲ್ಲುಹಾಕಿದ; ನನ್ನ ಎಂ. ಎ. ಗೆ ಮಣ್ಣು ಹಾಕಿದ; ನನ್ನ ಅನ್ನಕ್ಕೆ ಅಡ್ಡಿ ಬಂದ ಅಂತ ಗೋಳಾಡಬಾರದು. ನೀವಿಬ್ಬರೂ ನಿಮ್ಮ ಆಸೆ ಪೂರ್ತಿಯಾಗುವ ವರೆಗೂ ಓದಿ ಪಾಸು ಮಾಡಿ ಚಾಕರಿ ಹುಡುಕಿ ಸಂಬಳಗಳನ್ನು ತರುವ ತನಕ ನಾವಿಬ್ಬರೂ ಬದುಕಿರಬೇಡವೆ, ಅಂತ ನಾನು ಕೇಳುವುದು! ನಿನ್ನ ತಾಯಿ ಹೇಳಿದ್ದೂ ಇಷ್ಟೆ! ಶೀನ ಬುದ್ಧಿವಂತ, ಯೋಗ್ಯ, ಬಿ. ಎ. ಆಗಿದೆ ಅವನಿಗೆ, ಅವನನ್ನ ಕರೆದುಕೊಂಡು ಬನ್ನಿ, ಅಂತ ಅಂದಳು. ಚೆನ್ನಾಗಿ ಯೋಚನೆ ಮಾಡು.

'ನಾನು ಬರುತ್ತೇನೆ, ಸೊಸೈಟಿ ಚಾಕರಿಗೆ ಸೇರಿಕೊಳ್ಳುತ್ತೇನೆ.... ಆದರೆ....'

'ಆದರೆ, ಗೀದರೆ, ಏನೂ ಇಲ್ಲ....ಇಲ್ಲಿ ಹಳೆಯ ಬಾಕಿ ಕೊಟ್ಟು ತೀರಿಸಿ ಬಿಟ್ಟು, ರಾತ್ರಿ ರೆಯಿಲಿಗೆ ಹೊರಟುಬಿಡೋಣ, ಅಷ್ಟೆ!'

ಶೀನ ಮಾತನಾಡಲೇ ಇಲ್ಲ....ನೆಲದ ಮೇಲೆ ಬಿದ್ದ ಎರಡು ಬಿಸಿ ಹನಿಗಳನ್ನು ಕಾಲಿನ ಹೆಬ್ಬೆಟ್ಟಿನಿಂದ ಒರಸುತ್ತಿದ್ದ. ರಾಯರಿಗೂ ಗಂಟಲಲ್ಲಿ ಏನೋ ಸಿಕ್ಕಿಕೊಂಡಿತು.

'ಇರಲಿ, ಶೀನಾ! ಸದ್ಯಕ್ಕೆ ಹನುಮಂತನನ್ನು ನೋಡಿಕೊಂಡು ಬಂದುಬಿಡೋಣ' ಎಂದು ಹೇಳುತ್ತಾ ಅವರು ಎದ್ದರು. 'ಇರಲಿ', 'ಸದ್ಯಕ್ಕೆ', ಎಂಬ ಎರಡು ಸಮಾಧಾನದ ಮಾತುಗಳನ್ನೂ ಆನಂದರಾಯರು ಉಪಯೋಗಿಸಿದ್ದು ಅವರು ಉದಾರಶಿರೋಮಣಿಗಳಾದ್ದರಿಂದ! ಎಷ್ಟೋ ಸಹಸ್ರ ರೂಪಾಯಿ ಗಂಟನ್ನ ಯಾರು ಯಾರೋ ಕಿತ್ತು ತಿಂದರು; ಹೆತ್ತ ಮಕ್ಕಳಿಗೆ ಹತ್ತು ರೂಪಾಯಿ ಕೊಡುವುದಕ್ಕೆ ಚೈತನ್ಯ ಸಾಲದೆ ಹೋಯಿತಲ್ಲಾ, ಎಂದು ಅವರು ನೊಂದುಕೊಂಡರು. 'ಇರಲಿ'—ಹೇಗಾದರೂ ಮಾಡಿ ತಿಂಗಳಿಗೆ ಹದಿನೈದು ಏಕಾದಶಿ ಅಂತ ಪಂಚಾಂಗವನ್ನು ತಿದ್ದಿಕೊಂಡಾದರೂ ಶೀನನ ಇಷ್ಟದಂತೆ ಅವನು ಎಂ. ಎ. ಮುಗಿಸಲಿ ಅಂತ ಗಟ್ಟಿ ಮನಸ್ಸು ಮಾಡಿ ಅವರು 'ಸದ್ಯಕ್ಕೆ' ಎಂಬ ಮಾತನ್ನುಪಯೋಗಿಸಿದರು. ಉದ್ದಕ್ಕೂ ಅದನ್ನೇ ಯೋಚನೆ ಮಾಡುತ್ತಾ ನಡೆದರು.

ದಾರಿಯಲ್ಲೇ ವಾರ್ಡನ್ ಸಾಹೇಬರ ಮನೆಗೂ ಹೋದರು. ಅವರ ಮನೆಯಲ್ಲಿ ನಾಯಿಗಳೇ ಇರಲಿಲ್ಲವಂತೆ, ಶೀನ ಹೇಳಿದ. ಅವರ ಹಿಂದೆ ಆ ಬಂಗ್ಲಿಯಲ್ಲಿ ವಾಸವಾಗಿದ್ದವರು ತಾವು ಹಾಕಿದ್ದ ಪ್ರಕಟಣೆಯನ್ನು ಜೊತೆಯಲ್ಲೇ ತೆಗೆಸಿಕೊಂಡು ಹೋಗದೆ ಇದ್ದುದರಿಂದ ಅಷ್ಟೊಂದು ಅನಾಹುತವಾಯಿತೆಂದು ಹೇಳಿ ವಾರ್ಡನ್‌ರವರು ನಕ್ಕರು! ಆನಂದರಾಯರನ್ನು ಅವರು ಪ್ರೀತ್ಯಾದರಗಳಿಂದ ಬರಮಾಡಿಕೊಂಡು, ತುಂಬಾ ವಿಶ್ವಾಸದಿಂದ ಮಾತನಾಡಿಸಿದರು. ತಮ್ಮ ಹಾಸ್ಟಲಿನಲ್ಲಿ ಬಡಹುಡುಗರಿಗೆ ಸಹಾಯ ಮಾಡಲು ಒಂದು ನಿಧಿಯನ್ನು ಸ್ಥಾಪಿಸಬೇಕೆಂದಿರುವರೆಂದೂ ಅದಕ್ಕೆ ಉದಾರಶಿರೋಮಣಿಗಳು ಮುಕ್ತಹಸ್ತದಿಂದ ನೆರವಾಗಬೇಕೆಂದೂ ಕೇಳಿಕೊಂಡರು! ಆನಂದರಾಯರು ಅವರಲ್ಲಿಗೆ ಬಂದ ಉದ್ದೇಶವನ್ನು ಕೇಳಿದಾಗ ವಾರ್ಡನ್‌ರವರಿಗೆ ತುಂಬಾ ಆಶಾಭಂಗವಾಯಿತು. ಆದರೂ, ಹುಡುಗರ ಮುಂದಿನ ವಿದ್ಯಾಭ್ಯಾಸದ ವಿಷಯವಾಗಿ ಇಬ್ಬರೂ ಗೋಪ್ಯವಾಗಿ ಬಹಳ ಹೊತ್ತು ಚರ್ಚೆ ಮಾಡಿದರು. ಅವರಿಬ್ಬರ ಶಕ್ತಿಸಾಮರ್ಥ್ಯಗಳನ್ನೂ ಮನೋಭೀಷ್ಟಗಳನ್ನೂ ದ್ವೇಷಾಸೂಯೆಗಳನ್ನೂ ಚೆನ್ನಾಗಿ ಬಲ್ಲವರಾದ್ದರಿಂದ ವಾರ್ಡನ್‌ರವರು ತಮ್ಮ ಅಭಿಪ್ರಾಯವನ್ನು ಖಚಿತವಾಗಿ ಹೇಳಿದರು. ರಾಯರೂ ಕೂಡ ಅವರು ಹೇಳಿದುದನ್ನೇ ಸರಿ ಎಂದು ಒಪ್ಪಬೇಕಾಗಿ ಬಂತು.

ಶೀನನನ್ನು ರಾಮಮೋಹನ್ ಹಾಸ್ಟಲದಲ್ಲಿಡುವುದು, ಎಂಬುದೇ ತೀರ್ಮಾನದ ಮುಖ್ಯಾಂಶ....ಸರಿ! ಬೆಳ್ಳಿ ಕಪ್ಪುಗಳಿಗೆ ಒಟ್ಟು ಮೂವತ್ತೆರಡು ರೂಪಾಯಿ ಬಂತು....ರಾತ್ರಿ ರೆಯಿಲಿಗೆ ಅಪ್ಪ ಮಗ ಇಬ್ಬರೂ ವಿಚಿತ್ರದುರ್ಗಕ್ಕೆ ಹೊರಟರು.

ಮೃತ್ಯು ಸ್ಟೇಷನಿಗೆ ಬರಲೇ ಇಲ್ಲ. ತನ್ನ ಕೋಣೆಯಲ್ಲೇ ಕುಳಿತು, ಕತ್ತೆದಿಬ್ಬವನ್ನೂ ನಶ್ಯವನ್ನೂ ನೆನೆದು ಕೈ ಕೈ ಹಿಸುಕಿಕೊಳ್ಳುತ್ತಿದ್ದ.

—

ಐದನೆಯ ಅಧ್ಯಾಯ

## ಗುಂಡನ ಗುಪ್ತೋಪದೇಶ



ಏನು ಕವಿಯಿತೋ ಮಂಕು ಮಕ್ಕಳಿಗೆ,
ಯಾರೆರಚಿದರೋ ಬೂದಿ, ಕಾಣೆ.....................**ಶ್ರೀ.**

ಬಹುಳೋಪಾಯದೊಳಾರ್ಜಿಸುತ್ತ ಧನಮಂ ...**ಸೋಮೇಶ್ವರ.**



ಉದಾರಶಿರೋಮಣಿಗಳನ್ನು ಹಳ್ಳಕ್ಕೆ ನೂಕಿದ ಗೋಳಪ್ಪನವರೆದುರು ಹನುಮಂತ ಹೋಗಿ ನಿಂತಾಗ ಅವರಿಗೆ ಕೊಂಚ ಅಸಮಾಧಾನವಾಯಿತು. 'ಒಳ್ಳೆಯ ಗ್ರಹಚಾರಕ್ಕೆ ಸಿಕ್ಕಿಕೊಂಡೆನಲ್ಲಾ' ಎಂಬ ಪಶ್ಚಾತ್ತಾಪದ ಕುರುಹು ಅವರ ಮುಖದಲ್ಲಿ ಮಿಂಚಿತು, ಮಾಯವಾಗಲಿಲ್ಲ. 'ಇನ್ನೇನೂ ಇಲ್ಲ, ಹನುಮಂತರಾವು! ನಿನ್ನ ತಮ್ಮನೇ ಬಂದಿದ್ದರೆ ಚೆನ್ನಾಗಿತ್ತು' ಎಂದರು. ಯಾವ ಕಡೆ ಹೋದರೂ ಈ ಹಾಳು ಶೀನನಿಂದ ನನಗೆ ಉಳಿಗಾಲ ವಿಲ್ಲ ಎಂದು ಹನುಮಂತ ನಿಟ್ಟುಸಿರು ಬಿಟ್ಟ. 'ಇರಲಿ! ಚಿಂತೆ ಇಲ್ಲ. ಅವ ನಾಗಿದ್ದರೆ ಬಿ. ಎ. ಆಗಿದೆ. ಇಪ್ಪತ್ತೈದು ರೂಪಾಯಿಗಿಂತ ಕಡಿಮೆ ಸಂಬಳ ಹೇಗೆ ಕೊಡುವುದು ಅಂತ ಇದ್ದೆ. ಈಗ ಸೊಸೈಟಿಗೆ ಮತ್ತಷ್ಟು ಅನು ಕೂಲವೇ ಆಯಿತು. ಐದು ರೂಪಾಯಿ ಉಳಿಯಿತು' ಎಂದು ಹೇಳುತ್ತಾ ಹನುಮಂತನನ್ನು ಕೆಲಸಕ್ಕೆ ನಿಯಮಿಸಿದರು. ಅವನನ್ನು 'ಇಂದಾ-ಗೆ' ಗುಮಾಸ್ತೆಯ ಪೀಠದಲ್ಲಿ ಕುಳ್ಳಿರಿಸಿದರು!....ಹನ್ನೆರಡು ವರ್ಷಗಳಿಂದಲೂ ಇಂದಾ-ಗೆ ಮಾಡುತ್ತಿದ್ದ ಒಬ್ಬರು ಬಡಪಾಯಿಯನ್ನು ಅಲ್ಲಿಂದ ಒಂದು

ರೂಪಾಯಿ ಹೆಚ್ಚು ಸಂಬಳದೊಂದಿಗೆ ಮತ್ತೊಂದು ಪೀಠಕ್ಕೆ ವರ್ಗಾಯಿಸಿದರು. ಆತನಿಗೆ ಪಾಪ ವೈಕುಂಠ ಇಲ್ಲೇ ದೊರೆತಷ್ಟು ಆನಂದವಾಯಿತು.

ಆ ದಿನ ಸಂಜೆ ತಾಯಿ ಮಗ ಇಬ್ಬರೂ ಬಹಳ ಹೊತ್ತು ಯಾವ ಯಾವುದೋ ವಿಷಯಗಳನ್ನೆತ್ತಿ ಮಾತನಾಡುತ್ತಿದ್ದರು. 'ಇನ್ನೇನೂ ಇಲ್ಲ, ಅಮ್ಮಾ! ನಾನು ಅಂತಹ ಸೋಮಾರಿ ಅಲ್ಲ. ಕಣ್ಣುನೋವು ಬರುವ ತನಕ ಒಂದೇ ಪುಸ್ತಕವನ್ನ ಓದುತ್ತೇನೆ; ಮೂಲವ್ಯಾಧಿ ಬರುವ ತನಕ ಒಂದೇ ಕಡೆ ಕುಳಿತಿರುತ್ತೇನೆ. ಜ್ಞಾಪಕಶಕ್ತಿಯೂ ತಕ್ಕಮಟ್ಟಿಗಿದೆ. ಆದರೆ, ನೋಡಮ್ಮ, ಅವರು ಹೇಳುತ್ತಾರೆ, ಎಲ್ಲಾನೂ ಆ ಪರಂಗಿಯವರ ಭಾಷೆಯಲ್ಲೇ ಬರೆಯಬೇಕಂತೆ. ಆದೇ ಅಂತೆ ಈಗಿನ ದೇವಭಾಷೆ, ನಮ್ಮ ಕನ್ನಡ ಕೂಡದಂತೆ, ಅದರ ಸುಳಿವು ಸೊಂಕು ಒಂದೂ ಇರಕೂಡದಂತೆ ಇಂಗ್ಲೀಷು ಬರೆಯುವಾಗಲೂ ಮಾತನಾಡುವಾಗಲೂ! ಅಂದರೇನು ಗೊತ್ತೇ, ಅಮ್ಮಾ? ನಮ್ಮ ನಾಲಿಗೆ ಕಿತ್ತು ಬೇರೆ ನಾಲಿಗೆ ಅಂಟಿಸಿಕೊಳ್ಳಬೇಕಂತೆ......ಹೇಗೆ ಸಾಧ್ಯ?'

'ಅಯ್ಯೋ! ಅಯ್ಯೋ! ಇಷ್ಟು ಚಿತ್ರಹಿಂಸೆಯೇ? ನಮಗೇನು ಗೊತ್ತಾಗುತ್ತದೆ, ಮಗೂ! ಪಾಸು ಮಾಡಲಿಲ್ಲವಲ್ಲಾ, ಸೋತು ಹೋದ ನಲ್ಲಾ, ಅಂತ ಒಂದೇ ಸಮನೆ ಕಿರಿಲುತ್ತಾ ಇರುತ್ತೇವೆ. ಒಳ್ಳೆಯ ಮರಿಯಾನೆಗಳ ಹಾಗೆ ನಿಮ್ಮನ್ನು ಸಾಕಿ ಆ ಸಿಂಹಗಳ ಕೈಗೆ ಕೊಟ್ಟು ಸೀಳಿಸುವುದು ಆಗಿದೆ ನಮ್ಮ ಹಣೇಬರಹ!'

'ಅಮ್ಮಾ! ಯಾವುದೋ ಒಂದು ತರಹದ ಇಂಗ್ಲೀಷು ಸಾಲದಂತೆ ಅವರಿಗೆ; ಲಂಡನ್‌ನಲ್ಲಿದಾರಲ್ಲಾ, ಆ ಜನರ ಚಕ್ರವರ್ತಿಗಳು, ಅವರು ಮಾತನಾಡುವ ಹಾಗೆ, ಚಾಚೂ ತಪ್ಪದೆ, ಮಾತನಾಡಬೇಕಂತೆ, ಬರಿಯಬೇಕಂತೆ. ಕಿಂಗ್ಸ್ ಇಂಗ್ಲೀಷು, ಅಂತಾರೆ ಅವರಾಡುವ ರೀತಿಗೆ......ನಮ್ಮಂತಹ ಕರಿಯ ಜನರ ಬಾಯಲ್ಲಿ ಆ ಮಾತು ಹೊರಳುವುದೇ ಇಲ್ಲ....'

'ಅಯ್ಯೋ! ಹನೂ! ನಮ್ಮ ಪೂರ್ವಿಕರೆಲ್ಲರೂ ಅಪ್ಪಟಶ್ರೋತ್ರಿಯರು....ನನ್ನ ಅಜ್ಜಿ ಹೇಳುತ್ತಿದ್ದದ್ದು ಜ್ಞಾಪಕವಿದೆ; ಅವರ ತಾತಂದಿರು ಏ ಬೀ ಸೀ ಡಿ ಅಂತ ಕಿವಿಗೆ ಬಿದ್ದರೆ, ಎರಡು ಉದ್ಧರಣೆ ಗಂಗೋದಕವನ್ನ ಸುರಿದುಕೊಳ್ಳುತ್ತಿದ್ದರಂತೆ!'

'ಪಿರಂಗಿಯವರು ಅಂದರೆ ಆ ಹಾಳು ಏ ಬೀ ಸೀ ಡಿ ಯೊಳಗೆ ಹುಟ್ಟಿ ಬೆಳೆದವರು, ಅವರಿಗೆ ಅದು ನೀರು ಕುಡಿದ ಹಾಗೆ; ನಮಗೂ ಅಷ್ಟೆ, ನಮ್ಮ ಕನ್ನಡ ಅಂದರೆ ಸುಲಿದ ಬಾಳೆ ಹಣ್ಣು!'

'ಏನೋ ಅಪ್ಪ! ನೀನು ಚಿಕ್ಕವನಾಗಿದ್ದಾಗ ನಿಮ್ಮ ತಂದೆ ನಿನಗೆ ಮಖಮಲ್ ಟೋಪಿ ಹಾಕಿ ಜೊತೆಯಲ್ಲೇ ಕರೆದುಕೊಂಡು ಹೋಗಿ, ದೊಡ್ಡ ದೊಡ್ಡ ಆಫೀಸರುಗಳ ಮುಂದೆ ನಿಲ್ಲಿಸಿ, ಏ-ಬೀ-ಸೀ-ಡಿ ಅಂತ ಇಪ್ಪತ್ತಾರು ಅಕ್ಷರಗಳನ್ನೂ ಠಾಕ್ ಠೀಕ್ ಅಂತ ಹೇಳಿಸುತ್ತಿದ್ದರು. ಅವರೆಲ್ಲರೂ, 'ಪರವಾ ಇಲ್ಲ ನಿಮ್ಮ ಹುಡುಗ, ಓದಿಸಿ, ಓದಿಸಿ, ಇಂಗ್ಲೀಷು ಓದಿಸಿ, ಅವನು ಎಷ್ಟು ವರ್ಷ ಓದಬೇಕು ಅನ್ನುತ್ತಾನೋ ಅಷ್ಟು ವರ್ಷ ಓದಿಸಿ! ಅಂತ ಹೇಳುವರು. ಅವರೇನು ದೃಷ್ಟಿ ಹಾಕಿದರೋ, ನಿನಗೆ ಅದು ತಲೆಗೆ ಹತ್ತುತ್ತಲೇ ಇಲ್ಲ. ಈಚೆಗೆ....'

ಆಗ, ಅಲ್ಲಿಗೆ ಆನಂದರಾಯರೂ ಬಂದರು. ಅವರ ಮುಖದ ಮಂದಹಾಸವನ್ನು ನೋಡಿದರೆ ಯಾವುದೋ ಒಂದು ಸಂತೋಷದ ಸುದ್ದಿಯನ್ನು ತರುತ್ತಿರುವರು ಎಂದು ಊಹಿಸಬಹುದಾಗಿತ್ತು. 'ಹನು! ನಿನ್ನ ಸೊಸೈಟಿ ಪ್ರೆಸಿಡೆಂಟರು—ಲಕ್ಷ್ಮಣರಾಯರು—ಬೆಳಗ್ಗೆ ಸಿಕ್ಕಿದ್ದರು. ಅವರ ಮಗ ಈ ವರ್ಷವೂ ಮಿಡ್ಲಿ ಸ್ಕೂಲ್ ಪರೀಕ್ಷೆಗೆ ಕಟ್ಟಿದಾನಂತೆ. ಇನ್ನೇನೂ ಅನುಮಾನವಿಲ್ಲ. ಇಂಗ್ಲೀಷಿನಲ್ಲಿ ಮಾತ್ರ ಹುಡುಗ ಕೊಂಚ ಕಡಿಮೆ. ನಿಮ್ಮ ಮಗ ದಿನವೂ ಒಂದು ಕೊಂಚ ಕೊಂಚವಾಗಿ ಹೇಳಿಕೊಡುತ್ತಾ ಇರಲಿ, ಪಾಸಾಗೀಸಾದರೆ ಸೊಸೈಟಿಯಲ್ಲೇ ಎರಡೋ ಮೂರೋ ಹೆಚ್ಚಿಸಿ ಕೊಡುತ್ತೇನೆ, ಯಾರ ಅಪ್ಪನ ಮನೆ ಗಂಟು ?' ಅಂದರು.. ನಮ್ಮ ಕಷ್ಟವನ್ನಂತೂ ನೀನೂ ನೋಡುತ್ತಲೇ ಇದೀಯೆ. ಎರಡು ರೂಪಾಯಿ ಬಂದರೆ, ಎರಡು ದೇಶ ಗೆದ್ದ ಹಾಗೆ!' ಅಂದರು.

ತಿಳಿದೂ ತಿಳಿದೂ ಇಂಗ್ಲೀಷು ಹೇಳಿಕೊಡಲು ಹನುಮಂತ ಹೇಗೆ ಒಪ್ಪಿಯಾನು ?....ದೇವರು ಮನಸ್ಸಾಕ್ಷಿ ಅನ್ನುವುದನ್ನ ಏಕೆ ಇಟ್ಟನೋ ಈ ಗೂಡಿನೊಳಕ್ಕೆ ?..ಒಲ್ಲೆ, ಅಂದ....ಆನಂದರಾಯರು ಅದೇ ಮಾತನ್ನ ಮತ್ತೊಂದಾವರ್ತಿ ಎತ್ತಲೇ ಇಲ್ಲ. 'ಸುಮ್ಮನೆ ಅವನನ್ನ ಪೀಡಿಸಬೇಡಿ,

ಅಂದರೆ' ಅಂತ ಸುಂದರಮ್ಮನವರು ಮಗನ ಪರವಾಗಿ ವಕಾಲತ್ ವಹಿಸಿ ಬಿಟ್ಟಿದ್ದರು.

ಮತ್ತೊಂದು ದಿನ ಮಧ್ಯಾಹ್ನ ಊಟವಾದ ಮೇಲೆ ಹನುಮಂತ ರಾಮಲಕ್ಷ್ಮಣರನ್ನಾಡಿಸುತ್ತಾ ಕುಳಿತಿದ್ದಾಗ ಸುಂದರಮ್ಮನವರು ಬಂದು, 'ಹನು! ವೇಯಾಮಶಾಲೆ ಅಂದರೇನು?' ಎಂದು ವಿಚಾರಿಸಿದರು. ಈ ಪ್ರಶ್ನೆ ಹೇಗೆ ಹುಟ್ಟಿತು ಎಂಬುದು ಹನುಮಂತನಿಗೆ ತಿಳಿಯದು. ಯಾವುದೋ ಜ್ಞಾನದಲ್ಲಿದ್ದ ಹನುಮಂತ, 'ಹೇಳುತ್ತೇನಮ್ಮಾ....ವೇಯಾಮ ಅಂತಲ್ಲ ಅದು....ವ್ಯಾಯಾಮ ಅಂತಿರಬೇಕು' ಎಂದು ಪೀಠಿಕೆ ಹಾಕಿ ಶ್ರೀಮಂತ ರಾದ ಸೋಮಾರಿಗಳಿಗೆ ವ್ಯಾಯಾಮ ಎಷ್ಟು ಅವಶ್ಯಕವೆಂದೂ, ಅದಕ್ಕಾಗಿ ಪಾಶ್ಚಾತ್ಯ ವ್ಯಾಪಾರಕಾರರು ತಯಾರಿಸಿರುವ ವಿಧವಿಧವಾದ ಉಪಕರಣ ಗಳನ್ನೂ, ಅದರಲ್ಲಿ ನಡೆಯುವ ಪಂದ್ಯ ಜೂಜು ಪೈಪೋಟಿಗಳನ್ನೂ, ಭಾರ ತೀಯ ವಿಧಾನಗಳ ಪುನರುದ್ಧಾರಣ ಕ್ರಮವನ್ನೂ ಔಂಧ್ ಮಹಾರಾಜರು ಸೂರ್ಯದೇವರನ್ನು ನಮಸ್ಕಾರ ಮಾಡಿ ಆರೋಗ್ಯವನ್ನು ಸಂಪಾದಿಸಿದ್ದನ್ನೂ ಕುರಿತು ಸರಳವಾದ ಕನ್ನಡದಲ್ಲಿ ಸುಮಾರು ಇಪ್ಪತ್ತು ನಿಮಿಷಗಳ ತನಕ ಉಪನ್ಯಾಸ ಮಾಡಿದ....ಭಾಷಣ ಮುಗಿದ ಮೇಲೆ ನೋಡುತ್ತಾನೆ!... ಸುಂದರಮ್ಮನವರು ಅಲ್ಲೇ ನಿಂತಿದಾರೆ! ಸ್ತ್ರೀಯರಿಗೆ ಸ್ವಾಭಾವಿಕವಾಗಿ ಸಹನೆ ಹೆಚ್ಚು; ಪುರುಷರು ಕೊಡುವ ಕಿರುಕುಳವನ್ನು ಶತಮಾನಗಳಿಂದಲೂ ಅನುಭವಿಸಿ ಅನುಭವಿಸಿ ಅವರು ಹೀಗಾಗಿರಬೇಕೆಂದು ಹನುಮಂತನಿಗೆ ತೋರಿತು. ಅಲ್ಲದೆ, ಅವರು 'ವೇಯಾಮ ಅಂದರೆ ಏನೋ ಅಂತಿದ್ದೆ.... ಈಗ ಅರ್ಥವಾಯಿತು, ಹನು!' ಎಂದಾಗ ಅವನ ಆಶ್ಚರ್ಯಕ್ಕೆ ಮಿತಿಯೇ ಇರಲಿಲ್ಲ. ಇತರರಿಗೆ ತಿಳಿಯುವಷ್ಟು ತಿಳಿಯಾಗಿ ತನ್ನ ಬಾಯಿಂದ ಉಪನ್ಯಾಸ ಗಳು ಹೊರಬೀಳುವುದಲ್ಲಾ, ಎಂಬುದೇ ಅವನ ಸಂತೋಷಕ್ಕೆ ಕಾರಣ! ಆ ಮೇಲೆ ಹನುಮಂತ, 'ಅಮ್ಮಾ! ಎಲ್ಲಿ ಕೇಳಿದೆ ನೀನು ಈ ಮಾತನ್ನ? ವ್ಯಾಯಾಮ ಶಾಲೆ ಅಂತ ಯಾರು ಹೇಳಿದರು ಇಲ್ಲಿ ಈಚೆಗೆ?' ಎಂದು ಕೆದಕಿದ. ಸುಮ್ಮನೆ ಇರಬಹುದಾಗಿತ್ತು; ಆದರೂ ಹಾಳು ಕುತೂಹಲ!.. 'ಎಲ್ಲೂ ಇಲ್ಲ; ನಿನ್ನೆ ಸಾಯಂಕಾಲ ಯಾರೋ ಒಬ್ಬರು ಆಚಾರರು ಬಂದಿ ದ್ದರು ನಿಮ್ಮ ತಂದೆ ಹತ್ತಿರಕ್ಕೆ. ಅವರ ತೀರ್ಥರೂಪರಿಗೆ ವೈಕುಂಠ ಸಮಾ

ರಾಧನೆಯಂತೆ. ಏನಾದರೂ ಸಹಾಯ ಮಾಡಬೇಕು ಅಂತ ಜೋಳಿಗೆ ಹಾಕಿಕೊಂಡು ಬಂದಿದ್ದರು. ಆಗ ನಿನ್ನ ತಂದೆ ಈಗ ನಾಲ್ಕಾಣೆಗಿಂತ ಹೆಚ್ಚಾಗಿ ಕೊಡುವುದಕ್ಕಾಗುವುದಿಲ್ಲ. ಬರುವ ವರ್ಷ ಎಂ. ಎ. ಪಾಸು ಮಾಡಿಕೊಂಡು ಕಿರಿಯ ಮಗ ಬರುತ್ತಾನೆ. ಹೇಯಾಮ ಶಾಲೆ ಇಡುತ್ತಾನೆ....ವೈಕುಂಠವನ್ನ ಮುಂದಕ್ಕೆ ಹಾಕಿದರೆ, ಬರುವ ವರ್ಷ ಏನಾದರೂ ಹೆಚ್ಚು ಕೊಟ್ಟೇನು, ಅಂದರು. ನನಗರ್ಥವಾಗಲಿಲ್ಲ....ನಿನ್ನನ್ನು ಕೇಳಿದೆ....ಚೆನ್ನಾಯಿತು. ಹದಿನಾರು ವರ್ಷ ಇಂಗ್ಲೀಷು ಓದಿ ಕರಿ ಅಂಗಿ ತೊಟ್ಟು ಬಿ. ಎ., ಎಂ. ಎ. ಅಂತ ಅನ್ನಿಸಿಕೊಂಡು ಬಂದ ಮೇಲೂ ಶೀನನ ಗತಿ ಸೂರ್ಯನಮಸ್ಕಾರ ಮಾಡಿಸಿ ದಕ್ಷಿಣೆ ತೆಗೆದುಕೊಳ್ಳುವುದು,..ಇಷ್ಟೇನೆ?....'

ಆ ದಿನ ಹನುಮಂತನಿಗೆ ಅನ್ನವೇ ಸೇರಲಿಲ್ಲ. ಎಲ್ಲಾದರೂ ಒಂದು ಚಾಕರಿ ಸಿಗದೆ ಹೋದರೂ ಕೂಡ ಶೀನ ಮಾತ್ರ ಹೇಗೋ ಸ್ವತಂತ್ರವಾಗಿ ತನ್ನ ಹಿಟ್ಟು ಬಟ್ಟೆಗಳನ್ನು ಗಳಿಸುತ್ತಾನೆ ಎಂದು ಗೊತ್ತಾದ ಮೇಲೆ, ತಾನೂ ಅಂತಹ ಒಂದು ಉಪಕಸಬನ್ನು ಕಲಿಯಲೇಬೇಕೆಂಬ ಹಠವು ಅವನಲ್ಲಿ ಬಲವಾಯಿತು. ಪ್ರತಿಯೊಬ್ಬ ಕಸಬುದಾರನಿಗೂ ಒಂದು ಉಪಕಸಬು ಇದ್ದೇ ಇರಬೇಕೆಂದು ಮಹಾತ್ಮಜಿಯವರೂ ಕೂಡ ಎಲ್ಲೋ ಹೇಳಿರುವುದನ್ನ ಯಾರೋ ಹೇಳಿದ್ದು ಜ್ಞಾಪಕ ಅವನಿಗೆ! 'ಮೃತ್ಯು ಹತ್ತಿರವಿದ್ದರೆ ಅವನೊಂದಿಗೆ ಕಲೆತು ಯಾವುದಾದರೊಂದನ್ನು ಅವಲಂಬಿಸಬಹುದಾಗಿತ್ತಲ್ಲಾ, ಅವನೂ ಇಲ್ಲ ಎಂದು ಹನುಮಂತನಿಗೆ ವ್ಯಸನವಾಯಿತು....ಕತ್ತೆದಿಬ್ಬದ ಚರ್ಚೆಯನ್ನು ಮುಂದುವರಿಸಬಹುದಾಗಿತ್ತಲ್ಲಾ ಎಂದು ಕೊರಗಿದನು.

೧೯೩೩ ಜನವರಿ ತಿಂಗಳ ಕೊನೆಯ ವಾರದಲ್ಲಿ ಚಿತ್ರದುರ್ಗಕ್ಕೆ ಒಂದು ಹೊಸ ಹೃದಯ ಬಂತು; ಒಂದು ನವೀನ ಕಳೆ ಮೂಡಿತು......ಜನವರಿ ಮೊದಲನೆಯ ತಾರೀಖಿನಿಂದಲೇ, ಬರುತ್ತದೆ, ಬರುತ್ತದೆ, ಎಂದು ಜಾಹಿರಾತುಗಳು ಬೀದಿ ಗೋಡೆಗಳ ಮೇಲಿಂದ ಜನರಿಗೆ ಕೂಗಿ ಹೇಳುತ್ತಿದ್ದುವು. ಆದರೂ ಕೆಲವರು. ಈಗಲೇ ಬರುವುದಿಲ್ಲವಂತೆ, ಬರುವುದೇ ಅನುಮಾನವಂತೆ, ಆಗಲೇ ದಿವಾಳಿ ಎದ್ದು ಹೋಯಿತಂತೆ, ಎಂಜಿನ್ನು ಕೆಟ್ಟುಹೋಗಿದೆಯಂತೆ, ಸ್ಕ್ರೀನು ಹರಿದುಹೋಯಿತಂತೆ, ಎಂದು ಜನರ ಮನಸ್ಸಿನಲ್ಲಿ ಹೆದರಿಕೆ ಹುಟ್ಟಿಸಿದರು. ಕಡೆಗೆ,–ಬಂತು, 'ಕರ್ಣಾಕಠೋರ ಟೂರಿಂಗ್ ಟೋಕೀಸ್.'

ಹನುಮಂತನಿಗೂ ಅವನಂತೆ ಪಟ್ಟಣದ ರುಚಿ ನೋಡಿದ್ದ ಇತರ ಯುವಕರಿಗೂ ತಡೆಯಲಾರದ ಸಡಗರ! ಕಂಪನಿಯವರ ಗುಡಾರದ ಸುತ್ತಲೂ ಅವರು ಮೂರು ಹೊತ್ತೂ ಸುಳಿದಾಡಿದರು. ಅವರ ಹಸ್ತಪತ್ರಿಕೆಗಳು 'ವಿಚಿತ್ರ' ಮುದ್ರಣಾಲಯದಿಂದಲೇ ಪಡೆದು ತೆರೆಯ ಮೇಲೆ ಬರಲಿರುವ ನಕ್ಷತ್ರಗಳ ಆಕಾಶಪುರಾಣವನ್ನು ಒಬ್ಬರಿಗೊಬ್ಬರು ಹೇಳಿ ಆನಂದಿಸುವರು. ಪ್ರತಿ ಒಂದು ಪಠವನ್ನೂ ನೋಡಬೇಕೆಂದು ಅವರೆಲ್ಲರೂ ಭೀಷ್ಮ ಪ್ರತಿಜ್ಞೆ ಮಾಡಿದರು.

ಆದರೆ, ಪ್ರತಿ ತಿಂಗಳಲ್ಲೂ ಹನುಮಂತನ ಸಂಬಳವನ್ನು ಶ್ರೀಮಾನ್ ಗೋಳಪ್ಪನವರು ನೇರವಾಗಿ ಉದಾರಶಿರೋಮಣಿಗಳ ಹಸ್ತದಲ್ಲೇ ಇಡುತ್ತಿದ್ದರು! ನಸ್ಯದ ಕಾಸಿಗೂ ಕೂಡ ಅವನು ತಂದೆ ಎದುರು ಮೂಗು ಕೆರೆಯಬೇಕಾಗಿತ್ತು. ಕೆಲವು ವೇಳೆ ಮಗನ ಸಪ್ಪೆಮೋರೆಯನ್ನೂ ಜೋಲು ಬಿದ್ದ ಮೂಗನ್ನೂ ಕಂಡು ಕನಿಕರಪಟ್ಟು ಆನಂದರಾಯರು, 'ಇಕೋ! ಮೂರು ಕಾಸಿಗೆ ಪುಡಿ ತೆಗಿದುಕೊ' ಎಂದು ತಾವಾಗಿಯೇ ಕೊಟ್ಟುಬಿಡುವರು. ಟೂರಿಂಗ್ ಟಾಕೀಸ್ ಬಂದ ಮೇಲೆ, ನಾಲ್ಕು ಪಠಗಳ ತನಕ ಆನಂದರಾಯರೂ ಉದಾರರಾಗಿಯೇ ಇದ್ದರು. 'ಏನೋ, ಚಿಕ್ಕ ಹುಡುಗ, ಚಪಲ ತೀರಿಸಿಕೊಳ್ಳಲಿ' ಅಂತ ದೊಡ್ಡ ಮನಸ್ಸು ಮಾಡಿದರು....ಆದರೆ, ಒಂದು ದಿನ ಅವರಿಗೂ ಕೋಪ ಬಂತು. 'ಆಗುವುದಿಲ್ಲ. ವಾರಕ್ಕೆರಡು ಸಲ ಶನಿಮನೆಗೆ ಹೋಗಬೇಕಾದರೆ ನಮ್ಮ ಹೊಟ್ಟೆಗೆ, ಮಕ್ಕಳ ಹೊಟ್ಟೆಗೆ ಉಪವಾಸವೇ ಗತಿ!' ಎಂದು ಹೇಳಿ, 'ಅಯ್ಯೋ! ಹೀಗೆ ಹೇಳಬೇಕಾಗಿ ಬಂತಲ್ಲಾ, ಸೀಮಂತಪುತ್ರನ ಮನಸ್ಸು ನೋಯಿಸಿದೆನಲ್ಲಾ!' ಎಂದು ವಿಷಾದಿಸುತ್ತಾ ತಮ್ಮ ಕೋಣೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡರು.

ಕೆಲವು ದಿನಗಳಿಂದ ತನ್ನ ಸಹೋದ್ಯೋಗಿಯೂ, ಮೃತ್ಯುವಿನ ತಮ್ಮನೂ ಆದ ಗುಂಡನ ಸಂಗಡ ಸ್ವಾತಂತ್ರ್ಯ, ಜವಾಬ್ದಾರಿ ಸರ್ಕಾರ, ಸ್ವದೇಶಿ, ಸಮತಾವಾದ ಮುಂತಾದವುಗಳನ್ನು ಚರ್ಚಿಸುತ್ತಾ ಇದ್ದಕ್ಕಿದ್ದ ಹಾಗೆ ವೀರತರುಣನಾಗಿದ್ದ ಹನುಮಂತನಿಗೆ ಆಗ ಕೊಂಚ ಕಾವು ಹತ್ತಿತು ....ಬಿಳಿಯವರು ಬಣ್ಣದವರನ್ನು ತುಳಿದು ನಿಂತಿರುವುದು ಹಾಗಿರಲಿ;

ಗಂಡಸರು ಹೆಣ್ಣುಮಕ್ಕಳನ್ನು ಹಳಿದು ಅವರ ಆತ್ಮಗಳಿಗೆ ಅಪಮಾನ ಮಾಡುವುದು ಹಾಗಿರಲಿ; ಬಂಡವಾಳಗಾರರು ಕೂಲಿಗಾರರನ್ನು ಪೀಡಿಸುವುದು ಹಾಗಿರಲಿ; ಹಿರಿಯರು ಕಿರಿಯರಿಗೆ ಕೊಡುವ ಹಿಂಸೆ ಕೊನೆಗಾಣುವ ತನಕ ಪ್ರಪಂಚದಲ್ಲಿ ಶಾಂತಿ ನೆಲಸದು, ಸುಖ ಸಿಗದು, ಎಂದು ಮುಂತಾಗಿ ವಿಚಾರ ಮಾಡುತ್ತಾ, ತನ್ನ ತತ್ಕಾಲದ ಕಷ್ಟವನ್ನು, ಇಡೀ ಮಾನವ ಕುಲದ ದುಃಖಪ್ರವಾಹದಲ್ಲಿ ತೇಲಿಸಿದನು. ಥಟಕ್ಕನೆದ್ದು, ಮನೆಯ ಹಿಂಭಾಗದಿಂದ ಒಂದು ಮಾರು ಹಗ್ಗ, ಎರಡು ದೊಡ್ಡ ಮೊಳೆಗಳು, ಇಪ್ಪತ್ತಂಗುಲ ಉದ್ದ, ಆರಂಗುಲ ಅಗಲದ ಒಂದು ಹಲಗೆಯ ತುಂಡು, ಇವುಗಳನ್ನು ತಂದು, ತನ್ನ ಮುಂದಿಟ್ಟುಕೊಂಡು ಕುಳಿತ....ಕುಳಿತಿದ್ದವನು ಇದ್ದಕ್ಕಿದ್ದ ಹಾಗೆಯೇ ಎದ್ದ..ಅತ್ತಿತ್ತ ತಿರುಗಿ ತನ್ನ ಕೋಣೆ, ಅದರ ಪಕ್ಕದ ಕೋಣೆ, ಉಗ್ರಾಣ, ಬಚ್ಚಲುಮನೆ, ಎಲ್ಲವನ್ನೂ ಬಳಸಿ ತಡಕಾಡಿ, ಒಂದು ಸೀಸಿ ಇಂಕಿ, ಕೊಂಚ ಸುಣ್ಣದ ನೀರು, ಒಂದು ಸಣ್ಣ ಕುಂಚ್ಚು, ಇಷ್ಟನ್ನೂ ಸಂಪಾದಿಸಿ, ಮೊದಲನೆಯ ಸ್ಥಾನದಲ್ಲೇ ಥೊಪ್ಪನೆ ಕುಕ್ಕರಿಸಿ, ಕಣ್ಣೀರನ್ನು ಒರಸುತ್ತಾ, 'ಅಪ್ಪ ಕಾಸು ಕೊಡದೆ ಹೋದರೆ ಹಾಳಾಗಿ ಹೋಯಿತು' ಎಂದು ಶಪಿಸುತ್ತಾ, ಹಲಗೆಯ ತುಂಡಿನ ಮೇಲೆ

**ಇಲ್ಲಿ ಚೇಳು....................**

ಎಂದು ಮುಂತಾಗಿ ಬರೆಯತೊಡಗಿದ!

ಬರೆಯುವುದಕ್ಕಾಗಿ ಬಾಗಿದ್ದ ಅವನ ಬೆನ್ನಿನ ಮೇಲೆ ಯಾರೋ ಎರಡು ಕೆಂಡಗಳನ್ನು ಇರಿಸಿದ ಹಾಗಾಯಿತು ಹನುಮಂತನಿಗೆ! ತಿರುಗಿ ನೋಡಿದರೆ, ಗುಂಡ! ಗುಂಡನ ಚೂಪಾದ ಕಣ್ಣುಗಳು ಹಿಂದಿನಿಂದ ತಮ್ಮ ತೀಕ್ಷ್ಣವಾದ ದೃಷ್ಟಿಯನ್ನು ತನ್ನ ಬೆನ್ನಮೇಲೆ ಪ್ರಯೋಗಿಸುತ್ತಿದ್ದುವು, ಎಂದು ಆಗ ಅವನಿಗೆ ತಿಳಿಯಿತು.

'ಅಲ್ಲ ಕಣೋ, ನಿನ್ನ ತಮ್ಮ ಲಕ್ಷ್ಮಣನಿಗೆ ಚೇಳು ಕುಟುಗಿದಾಗ ಬೆಳ್ಳುಳ್ಳಿ ಉಪ್ಪು ಬೆರೆಸಿ ತಿಕ್ಕಿ ನೋವುಸೆಳೆತ ಕಡಿಮೆ ಮಾಡಿದ್ದನ್ನೇ ದೊಡ್ಡ ವೈದ್ಯ ಅಂತ ತಿಳಿದುಕೊಂಡು ಊರಿಗೆಲ್ಲಾ......'

'ಹುಂ. ಊರಿನಲ್ಲಿ ಯಾರಿಗೆ ಚೇಳು ಕಚ್ಚಿದರೂ ನಾನು ಚಿಕಿತ್ಸೆ

ಮಾಡುತ್ತೇನೆ ಅಂತ ಬರೆದು ಪ್ರಕಟಿಸುತ್ತೇನೆ......ಬಂದಷ್ಟು ಬರಲಿ! ಸಮಯ ಅಂದರೆ ಕೈಯಲ್ಲಿ ಒಂದು ಕಾಸೂ ಇಲ್ಲ......'

'ಓಹೋ, ಬರೀ ಪರೋಪಕಾರ ಮಾತ್ರ ಅಲ್ಲ, ಹಾಗಾದರೆ! ಈ ಊರಲ್ಲಿ ಚೇಳು ಹೆಚ್ಚು, ಬೆಳ್ಳುಳ್ಳಿ ಬೆಲೆ ಕಡಿಮೆಯಾಗಿ....'

'ಏಕೆ? ನಿನ್ನೆ ಸೊಸೈಟಿಗೆ ಬಂದಿದ್ದ ಒಬ್ಬ ಗೌಡ ಹೆಚ್ಚೆಟ್ಟೊತ್ತುವು ದಕ್ಕಾಗುವುದಿಲ್ಲ; ಚೇಳು ಕಚ್ಚಿದೆ ಅಂತ ಹೇಳಲಿಲ್ಲವೆ. ಹೋದವಾರ ಲಕ್ಷ್ಮಣನಿಗಾಯಿತು. ಈ ಊರಲ್ಲಿ ಚೇಳಿಗೇನು ಕಡಿಮೆ ಇಲ್ಲ....'

'ಆದರೆ, ಒಂದು ವಿಷಯ, ಹನು! ಸುಮ್ಮನೆ ಬಾಯಿ ಮುಚ್ಚಿ ಕೊಂಡು ಬೆಳ್ಳುಳ್ಳಿ ಉಪ್ಪು ತಿಕ್ಕಿದರೆ ಸಾಲದು; ಬಾಯಲ್ಲಿ ಮಂತ್ರ ಹೇಳು-ತ್ತಿರಬೇಕು. ಆಗ ಗೌರವ ಜಾಸ್ತಿ; ಬಂದವರಿಗೆ ಬೇಗ ವಾಸಿಯಾಗುತ್ತದೆ; ನಿನ್ನ ಹೆಸರು ಊರಿಗೆಲ್ಲಾ ಬಲು ಬೇಗ ಹಬ್ಬುತ್ತದೆ. ಸುತ್ತಮುತ್ತಲಿನ ಹಳ್ಳಿಯವರೆಲ್ಲರೂ ಬರುತ್ತಾರೆ ನಿನ್ನ ಹತ್ತಿರಕ್ಕೆ....ನಿನ್ನ ಫೀಜೆಷ್ಟು?'

'ಎಂಟಾಣೆ!'

'ನೆಗೆದು ಬಿದ್ದು ಹೋಯ್ತು. ಏನು ದರೋಡೆ ಮಾಡುವುದಕ್ಕೆ ಬಂದಿದ್ದೀಯಾ ಇಲ್ಲಿ! ನಮ್ಮದು ಬಡದೇಶ; ನೋವು ತಿಂದು ನುರಿತ ದೇಶ; ನಿನಗೇನು ಸಿನಿಮಾ ದುಡ್ಡು ಎಳಬೇಕು, ಅಷ್ಟೆ ತಾನೆ? ಒಂದಾಣೆ ಅಂತ ಬರೆದುಬಿಡು, ಸಾಕು! ನಾಲ್ಕು ಜನ ಬಂದರೆ ನಮ್ಮಿಬ್ಬರಿಗೂ ಆಗುತ್ತದೆ! ಅದನ್ನೂ ಕೂಡ ನೀನು ಕೈನೀಡಿ ತೆಗಿದುಕೊಳ್ಳಬಾರದು. ಪಕ್ಕದಲ್ಲೇ ಡಬ್ಬ ಇಟ್ಟಿರು. ಬೇಳಮ್ಮನ ಪೂಜೆ ಖರ್ಚಿಗಾಗಿ ಒಂದಾಣೆ ಕೊಟ್ಟೇ ಕೊಡಬೇಕು ಅಂತ ಹೇಳಿಬಿಡು....'

'ದಕ್ಷಿಣೆ ಸಮಾಚಾರವನ್ನ ಇಲ್ಲಿ ಬರೆಯುತ್ತಿಲ್ಲ ನಾನು......... **ಇಲ್ಲಿ ಚೇಳು ಕಡಿದವರಿಗೆ ಔಷಧಿ ಕೊಡಲ್ಪಡುತ್ತದೆ....ಅಷ್ಟೆ!'**

'ಹನುಮಂತಾ! ಏನಿದು? **ಈ ಮನೆಯಲ್ಲಿ** ಚೇಳು ಕಡಿ ದವರಿಗೆ ಮಾತ್ರ ಔಷಧಿ ಕೊಡುತ್ತೀಯೋ? ಅಲ್ಲದೆ, **ಕಡಿದವರಿಗೆ** ಎಂಬುದೂ ಸರಿಯಲ್ಲ. **ಕಡಿ**, ಕಚ್ಚು ಎಂಬುದು ಹಲ್ಲಿನ ಮೂಲಕ ವಿಷ ತುಂಬುವ ಪ್ರಾಣಿಗಳಿಗೆ ಮಾತ್ರ ಸಲ್ಲುತ್ತದೆ. ಚೇಳು ತನ್ನ ಹಲ್ಲಿಂದ ಜನರನ್ನು ಕಚ್ಚುವುದಿಲ್ಲ, ಬಾಲದಿಂದ ಕುಟುಕುತ್ತದೆ; ಆದ್ದರಿಂದ ಚೇಳು ಕುಟುಕಿದವ

ರಿಗೆ ಎನ್ನಬೇಕು. ಅದೂ ಅಲ್ಲದೆ, **ಔಷಧಿ ಕೊಡಲ್ಪಡುತ್ತದೆ** ಅಂದರೆ ಸಾಕೆ? ವಾಸಿಮಾಡುತ್ತೇವೆ ಎಂಬ ಭರವಸೆ ಕೊಡಬೇಡವೆ? **ಅಲ್ಪಡುತ್ತದೆ** ಎಂಬ ಪ್ರಯೋಗವೂ ಕೂಡ ಕನ್ನಡದ ಜಾಯಮಾನಕ್ಕೆ ಸರಿಹೋಗುವುದಿಲ್ಲ.. ಆಮೇಲೆ ಮಂತ್ರದ ಮಾತು ಒಂದೇ ಒರಬೇಕು....ಇಲ್ಲದಿದ್ದರೆ ಒಂದು ಪ್ರಾಣಿಯೂ ಮೂಸಿನೋಡುವುದಿಲ್ಲ....ಛಿ..ಛಿ..ನನಗೇನೊ ನಾಚಿಕೆ ಆಗುತ್ತದೆ. ಬಿ. ಎ. ಗೆ ಇಷ್ಟು ವರ್ಷ ಕುಳಿತರೂ ನಿನ್ನ ಕನ್ನಡದ ಯೋಗ್ಯತೆ ಇಷ್ಟೇನೆ?'

ತನ್ನ ವಿದ್ಯಾವ್ಯಾಸಂಗದ ದುರಂತವನ್ನು ನೆನೆದಾಗ ಹನುಮಂತನಿಗೆ ಕೊರಳು ಬಿಗಿಯಿತು. ಮುಂದಕ್ಕೆ ಮಾತನಾಡಲು ಬಾಯಿ ಬರಲಿಲ್ಲ.... ಬಂದ ಸಂಕಟವನ್ನು ನುಂಗಿಕೊಂಡು, ಮನಸ್ಸಿಗೆ ಉತ್ಸಾಹವನ್ನು ಮತ್ತೆ ತೆಗೆದುಕೊಂಡು, 'ಹಾಗಾದರೆ, ಗುಂಡ ಇಲ್ಲಿ ಎಂಬುದನ್ನು ಹೊಡೆದುಹಾಕಿ ಬಿಡುತ್ತೇನೆ' ಎಂದು ಹೇಳುತ್ತಾ ಕುಚ್ಚನ್ನು ಇಂಕಿಯಲ್ಲಿ ಅದ್ದಿ, ಅಡ್ಡವಾಗಿ ಮೂರು ನಾಲ್ಕು ಗೆರೆಗಳನ್ನೆಳೆದ. 'ಅಲ್ಪಡುತ್ತದೆ' ಎಂಬುದೂ ಮಾಯ ವಾಯಿತು. ಕುಟುಕುವುದೇ ಚೇಳಿನ ಹಿಂಸಾವಿಧಾನವೆಂಬುದು ಹನುಮಂತ ನಿಗೆ ಈಗ ವೇದ್ಯವಾಯಿತು. ಬೋರ್ಡಲ್ಲೂ ಹಾಗೆಯೇ ಬರೆದ. ಮಂತ್ರದ ಮಾತೂ ಬಂತು. ಕಡೆಗೆ, ಕನ್ನಡ ಸರಿಹೋಯಿತು; ಬೋರ್ಡು ಅಂದ-ಗೆಟ್ಟಿತು.

**[[redacted] ಚೇಳು [redacted] ಕುಟುಕಿದವರಿಗೆ ಮಂತ್ರ ಚಿಕಿತ್ಸೆ [redacted]]**

'ಅದು ಸರಿ! ಇದನ್ನು ತಗುಲಿಸಿದ ತಕ್ಷಣವೇ ಜನಗಳು ಬರಲು ಪ್ರಾರಂಭಿಸಿದರೆ, ಏನು ಮಾಡುತ್ತೀಯಾ? ಮಂತ್ರ ಮಾತ್ರ ಬೇಗ ಉರು ಹಚ್ಚು!'

'ಉರುಹಚ್ಚುವುದೇನು ಕಷ್ಟವಿಲ್ಲ......ಆದರೆ, ಯಾವ ಮಂತ್ರ ಅನ್ನುವುದೇ ಗೊತ್ತಿಲ್ಲವಲ್ಲಾ ಗುಂಡಾ!'

'ನಾನೇ ಬೇಕಾದರೆ ಒಂದು ಹೇಳಿಕೊಟ್ಟಿರುತ್ತೇನೆ. ಆಮೇಲೆ ನೀನು ನಿಧಾನವಾಗಿ ಬೇರೊಂದನ್ನು ಆರಿಸಿಕೊಳ್ಳಬಹುದು. ಇದೂ ಚೇಳಿನ ವಿಷ-ಯವೇ. ಇದನ್ನು ಹೇಳಿಕೊಂಡು ಬೆಳ್ಳುಳ್ಳಿ ಉಪ್ಪು ತಿಕ್ಕುತಿದ್ದರೆ, ಚೇಳು ಗಳೆಲ್ಲವೂ ಬಾಲ ಮಡಿಸಿಕೊಂಡು ತಾವಾಗಿಯೇ ಬೆಂಕಿಗೆ ಬೀಳುತ್ತವೆ.

**ವೃಶ್ಚಿಕೋ ವೃಶ್ಚಿಕಶ್ಚೈವ ವೃಶ್ಚಿಕೋ ನಿಶ್ಚಿತಾರ್ಥತಃ ।**
**ವೃಶ್ಚಿಕಾಂ ವೃಶ್ಚಿಕಾಸ್ತಸ್ಯ ವೃಶ್ಚ ವೃಶ್ಚ ನಮೋನಮಃ ॥**

ಸಾಲದೇನು? ಬಂದ ಜನ ಡಬ್ಬದೊಳಕ್ಕೆ ಆಣೆಯನ್ನು ಹಾಕುವ ವರೆಗೂ ಇದನ್ನೇ ಹೇಳಿ ಗದರಿಸುತ್ತಾ ಇರು......ನನಗೆ ದಕ್ಷಿಣೆ ಅಂತ ನೀನಿನ್ನೇನೂ ಕೊಡಬೇಡ......ಸಿನಿಮಾಗೆ ನನ್ನನ್ನೂ ಕರೆದುಕೊಂಡು ಹೋಗಿಬಿಡು, ಅಷ್ಟೆ ಸಾಕು.'

'ತಾಳು ತಾಳು, ಬರೆದುಕೊಳ್ಳುತ್ತೇನೆ......ಬಂದೇಸವನೆ ಬದರಿ-ಬಿಟ್ಟೆಯಲ್ಲಾ!'

ಹನುಮಂತ ಮಂತ್ರವನ್ನು ಬರೆದುಕೊಂಡ. ಬೋರ್ಡನ್ನೆತ್ತಿ, ಹಗ್ಗ ಕಟ್ಟಿ, ಮುಂಬಾಗಿಲ ಬಲಗಡೆ ಮೊಳೆ ಹೊಡೆದು, ತೂಗುಹಾಕಿದ. 'ಹಾಕಿದ' ಏನು? 'ಹಾಕಿದರು'—ಇಬ್ಬರೂ ಸೇರಿ....ಇನ್ನೇನು; ವಿಚಿತ್ರದುರ್ಗದ ನಿವಾಸಿಗಳಿಗೆ ಚೇಳಿನ ಭಯ ಮಾಯವಾಯಿತು!

....ಆಗ, ಅದೇ ಬೀದಿಯಲ್ಲೇ ಹೋಗುತ್ತಿದ್ದ ನರಸಿಂಗರಾಯರು, ಸೊಸೈಟಿ ಗುಮಾಸ್ತೆ, 'ಓಹೋ! ಹನುಮಂತರಾಯರೇ! ಏನಿದು ಹೊಸ ಬೋರ್ಡು? ಹೆಸರಿಗೆ ಬಿ. ಎ. ಅಂತ ಸೇರಿಸಿ ತೂಗುಹಾಕುತ್ತಿದೀರೋ?' ಎಂದರು—ಕೀಟಲೆಗೆ! ಯಾವ ಬಾಣ ಎಲ್ಲಿಗೆ ತಗಲುತ್ತದೆ ಎಂಬುದು ಅವರಿಗೆ ಗೊತ್ತು......ಆಮೇಲೆ, ಮನೆ ಎದುರು ಬಂದು ನಿಂತು, 'ಏನಿದು, ಚೇಳಿನ ಔಷಧಿಯೇ? ಮಂತ್ರ ಬೇರೆ! ಅರೇರೆ! ಕೇಳಬೇಕೆ? ಉದಾರ-ಶಿರೋಮಣಿಗಳ ಮಗ ಸಮಾಜಸೇವೆ ಮಾಡುವುದು ಸಹಜವೇ ತಾನೆ? ನಮ್ಮ ಗಲ್ಲಿಯಲ್ಲೂ ಯಾರಿಗಾದರೂ ಚೇಳಿನ ಅನುಗ್ರಹವಾದರೆ, ಇಲ್ಲಿಗೇ ಕಳುಹಿಸುತ್ತೇನೆ..ಆದಿರಲಿ! ಯಾವ ಘಳಿಗೆಯಲ್ಲಿ ಯಾರು ಬರುತ್ತಾರೋ ಅಂತ ನೀವು ಈ ಬೋರ್ಡಿನ ಕೆಳಗೆ ಕಾದು ಕುಳಿತಿರಬೇಕಾಗಿಲ್ಲ..ಬನ್ನಿ!.. ಟೌನ್ ಹಾಲಿಗೆ ಹೋಗೋಣ!' ಅಂತ ಒತ್ತಾಯಪಡಿಸಿ, ಅವರು ಗುಂಡನನ್ನೂ ಹನುಮಂತನನ್ನೂ ಎಳೆದುಕೊಂಡು ಹೋದರು.

—

ಆರನೆಯ ಅಧ್ಯಾಯ

## ವಿಚಿತ್ರದುರ್ಗದ ವಿಶೇಷ ದಿನ



ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು... **ಹೊನ್ನಮ್ಮ**

ಕುಳಿತರೆ ಸಿಂತರೆ ಹುಳಕನೆ ಬಗೆವೆ
ತುಸ ತಪ್ಪಾದರೂ ಕಲಹವ ತೆಗೆವೆ.. **ತೀ. ನಂ. ಶ್ರೀ.**

ಊರನ್ನೆ ಅರಿಯುದವ ತೋರುವನೆ ದಾರಿಯನು ?... **ಬಿ. ಶ್ರೀಕಂಠಯ್ಯ**



ಆದಿನ ಸಂಜೆ ವಿಚಿತ್ರದುರ್ಗದ ಮಹಿಳಾಸದನದ ರಜತಮಹೋತ್ಸವ !

. . . . . . . . . . . . . . . .

ವಿಚಿತ್ರದುರ್ಗ ಅಷ್ಟೇನೂ ದೊಡ್ಡ ಪಟ್ಟಣವಲ್ಲ; ಏಕೆ, ಅದನ್ನು ಪಟ್ಟಣ ಅಂತ ಹೇಳುವುದೇ ತಪ್ಪು ಎಂದು ವಾದಿಸುವವರೂ ಉಂಟು. ಹೋದ ಖಾನೇಷುಮಾರಿ ಪ್ರಕಾರ ಅಲ್ಲಿದ್ದದ್ದು ಆರು ಸಾವಿರದ ಐವತ್ತು ಜನಸಂಖ್ಯೆ; ಈಚೆಗೆ ಹತ್ತು ವರ್ಷಗಳಲ್ಲಿ ಹುಟ್ಟಿದ್ದು ಸೇರಿಸಿ, ಬಿಟ್ಟದ್ದು ಕಳೆದರೆ, ಬರುವ ಖಾನೇಷುಮಾರಿಗೆ ಏಳು ಸಾವಿರಕ್ಕೇನೂ ಮೋಸವಿಲ್ಲ. . . .

ಪುರಭವನ, ಮಹಿಳಾಸದನ, ಇವೆರಡೂ ಅಲ್ಲಿ ಇಲ್ಲದೆ ಇದ್ದ ಪಕ್ಷದಲ್ಲಿ ವಿಚಿತ್ರದುರ್ಗ ಒಂದು ದೊಡ್ಡ ಕೊಂಪೆ, ಅಷ್ಟೆ. ಭೂಪಟಗಳಲ್ಲಿ ಅದರ ಹೆಸರು ಅಚ್ಚಾಗುತ್ತಿರಲಿಲ್ಲ. ರೆಯಿಲ್‌ವೆ ಟೈಂ ಟೇಬಿಲ್ಲಿನಿಂದ ಮಾತ್ರ ನಾವು ಅದರ ಅಸ್ತಿತ್ವವನ್ನು ಪತ್ತೆಮಾಡಬೇಕಾಗಿ ಬರುವುದು. ಅವುಗಳಿಂದಲೇ

ಅದು ಇತರ ಪಟ್ಟಣಗಳೊಂದಿಗೆ ತಾನೂ ತಲೆ ಎತ್ತಿ ನಿಂತಿದೆ. ಪುರಭವನವು ವಿಚಿತ್ರದುರ್ಗಕ್ಕೆ ಕಿರೀಟವಾದರೆ, ಮಹಿಳಾಸದನವು ಮೂಗುಬೊಟ್ಟು, ಎನ್ನಬಹುದು....ಪುರಭವನದ ರಜತಮಹೋತ್ಸವವನ್ನೂ ಕೂಡ ಈಗ್ಗೆ ಎರಡು ತಿಂಗಳ ಹಿಂದೆ ನೆರವೇರಿಸಬೇಕಾಗಿತ್ತು. ಆದರೆ, ಬರಿಯ ಇಟ್ಟಿಗೆ, ಗಾರೆ! ಹೇಳುವವರೇ ಇರಲಿಲ್ಲ. ಮೀಟಿಂಗ್, ಸಂಗೀತಗೋಷ್ಠಿ, ಹರಿಕಥೆ, ವಿವಿಧ ವಿನೋದ ಹಾವಳಿ, ಇವುಗಳನ್ನು ನಡೆಸುವವರು ಕುಣಿ ಕುಣಿಯುತ್ತಾ ಬರುತ್ತಾರೆ, ಕಣ್ಣು ಕಣ್ಣು ಬಿಡುತ್ತಾ ಹೋಗುತ್ತಾರೆ; ಅವರಿಗೇನು ಬೇಕಾಗಿದೆ? ಆದರೆ, ಮಹಿಳಾಸದನಕ್ಕೆ ಇಂತಹ ತೊಂದರೆ ಯಾವುದೂ ಇರಲಿಲ್ಲ. ಅಲ್ಲಿ ಎಲ್ಲರೂ ಹೇಳುವವರೇ! ಆದರೆ, ಬೇರೊಂದು ತರಹದ ಕಷ್ಟ! ಕೇಳುವವರು ಕಡಿಮೆ.

ಈ ಎರಡು ಸಂಸ್ಥೆಗಳನ್ನೂ ಹಿಂದೆ ವಿಚಿತ್ರದುರ್ಗದಲ್ಲಿ ಅಮಲ್ದಾರ್ ಅಧಿಕಾರವನ್ನು ವಹಿಸಿದ್ದ ಎಗ್ಗಮ್ಮನವರೇ ಸ್ಥಾಪಿಸಿದ್ದು. ಅಂದರೆ, ಕೂಡಲೆ ವಾಚಕ ಮಹಾಶಯರು, ನಮ್ಮ ಸೀಮೆಯ ಪ್ರಾಚೀನ ಸಂಸ್ಕೃತಿ ಎಷ್ಟು ನವೀನವಾಗಿತ್ತು, ಇಂದಿನ ಹೆಚ್ಚು ಹೊಸ ಸರ್ಕಾರಗಳಿಂದಲೂ ಕೂಡ ಕಾರ್ಯರೂಪಕ್ಕೆ ತರಲಸಾಧ್ಯವಾಗಿರುವ ಸ್ತ್ರೀ-ಪುರುಷ ಸಮತ್ವವನ್ನು ನಿನ್ನೆ ಮೊನ್ನೆ ನಮ್ಮ ತಾತಂದಿರು ಸಾಧಿಸಿದ್ದರು, ಎಂದು ಹಿಗ್ಗಿ, ನಮ್ಮ ಹೆಬ್ಬೀಳಿಗಾಗಿ ಅಳಬೇಕಾಗಿಲ್ಲ. ಏಕೆಂದರೆ, ಎಗ್ಗಮ್ಮನವರು ಅಮಲ್ದಾರರಾಗಿರಲಿಲ್ಲ. ತಲೆಗೆ ಸಿಂಬಿ ಸುತ್ತಿಕೊಂಡು ಆಫೀಸರುಗಳು ದೂರ ನಿಂತು ಅವರಿಗೆ ಡೊಂಕು ಸಲಾಮುಗಳನ್ನು ಅರ್ಪಿಸುತ್ತಿದ್ದದ್ದು, ಸರ್ಕಾರಿ ಕಾಗದ ಪತ್ರಗಳಲ್ಲಿ ಅಮಲ್ದಾರ್ ಅಂತ ರುಜು ಹಾಕುತ್ತಿದ್ದದ್ದು—ಎಲ್ಲವೂ ಚೆಲುವಯ್ಯಂಗಾರರೇ! ಆದರೇನು? ದುಷ್ಟ ಶಿಕ್ಷಣ ಶಿಷ್ಟ ಪರಿಪಾಲನ ಮಾಡುತ್ತಾ, ಇಡೀ ತಾಲೂಕಿನ ಯೋಗಕ್ಷೇಮವನ್ನು ಜಾಗರೂಕತೆಯಿಂದ ಕಾಪಾಡುತ್ತಾ ಚೆಲುವಯ್ಯಂಗಾರರನ್ನೂ ರೈತಜನರನ್ನೂ ಆಳುತ್ತಿದ್ದದ್ದು ಎಗ್ಗಮ್ಮನವರು! ಆಕೆಯ ಕಾರ್ಯದಕ್ಷತೆ, ಧೈರ್ಯ, ಬಡವರ ಆರೈಕೆಯಲ್ಲಿ ಆ ತಾಯಿಗಿದ್ದ ಕರುಣೆ, ರೈತರ ಮಕ್ಕಳನ್ನು ಎತ್ತಿ ಮುದ್ದಾಡಿದ ರೀತಿ ಇವುಗಳನ್ನು ಇನ್ನೂ ಜನ ಕೊಂಡಾಡುತ್ತಿರುವರು. ಕ್ಯಾಂಪಿನಲ್ಲಂತೂ ನೂರಾರು ಗೌಡರಿಗೆ ಆಕೆ ಸ್ವಹಸ್ತದಿಂದಲೇ ಅಡಿಗೆಮಾಡಿ ಬಡಿಸುವರಂತೆ! ಆ ಹುಳಿಯೋಗರದ

ರುಚಿಯನ್ನು ಈಗಲೂ ಕೆಲವರು ಮುದುಕ ಮುದಿಕಿಯರು ನೆನೆದುಕೊಂಡು ಬಾಯಿಚಪ್ಪರಿಸುವರಂತೆ....

ಏಚಿತ್ರದುರ್ಗದ ಪುರಭವನವನ್ನು ಕಟ್ಟುವುದಕ್ಕಾಗಿ 'ಅಮೀಲ್ದಾರ್ ಎಗ್ಗಮ್ಮನವರು' ಪಟ್ಟ ಸಾಹಸವನ್ನು ಎಷ್ಟು ಹೊಗಳಿದರೂ ಸಾಲದು. ಹತ್ತಾರು ಸಾಹುಕಾರರ ಮೂಗು ಹಿಂಡಿ ಆಕೆ ಸುಮಾರು ಆರು ಸಾವಿರ ರೂಪಾಯಿ ಚಂದಾ ಬೀಳಿಸಿದರು. ಕಂಟ್ರಾಕ್ಟರ್ ಮುನಿಸಾಮಿ ಮುದಲಿ-ಯಾರ್‍ರವರನ್ನು ಹಿಡಿದು ಅವರ ಕೈಯಿಂದ ಕಟ್ಟಡವನ್ನು ಎಬ್ಬಿಸಿದರು. ಕಡೆಗೆ,ಆತ ಕೇಳಿದ ಏಳು ಸಹಸ್ರಕ್ಕೆ ಬದಲಾಗಿ ಆರನ್ನೇ ಕೊಟ್ಟು, 'ಪೋರುಂ; ಪೋರುಂ. ಎನ್ನಾ ರೊಂಬ ರೊಂಬ ಪೇಶರಾಯ್....' ಅಂತ ಅರವದಲ್ಲಿ ರೇಗಿದರು. ಯಾವ ಯಾವ ಸನ್ನಿವೇಶದಲ್ಲಿ ಯಾವ ಯಾವ ಮಾತು ಆಡಬೇಕೆಂದು ಆ ತಾಯಿಗೆ ಗೊತ್ತಿತ್ತು. ಮುನಿಸಾಮಿ ಮುದಲಿಯಾರ್ರು ಸೆಟ್ಟಗೆ ಮನೆಗೆ ಹೋದರು!

ಆದರೆ, ಟೌನ್‌ಹಾಲ್ ಕಟ್ಟಿ ಮುಗಿಸುವುದಕ್ಕಿಂತ ದೊಡ್ಡ ಸಾಹಸವೆಂದರೆ, ಮಹಿಳಾಸದನದ ಸ್ಥಾಪನೆ. 'ಮಹಿಳೆಯರು ಮಹಸೀಯರಿಗಿಂತ ಸಹಜವಾಗಿಯೇ ಸಮಾಜಜೀವಿಗಳು. ವಾಪಿ, ಕೂಪ, ತಟಾಕ,ಸೋಪಾನ, ಚಪ್ಪರ, ಗುಡಿ, ಗೋಪುರ, ಕಟ್ಟೆ ಮುಂತಾದ ಸಾರ್ವಜನಿಕ ಸ್ಥಳಗಳಲ್ಲಿ ಅನಾಯಾಸವಾಗಿ ಸಭೆ ಸೇರಿ ಇತರ ಮಹಿಳೆಯರ ವೇಷ-ಭೂಷಣಗಳನ್ನೂ ತಮ್ಮ ಮಹನೀಯರ ಅವಿವೇಕತನವನ್ನೂ ಬಯಲಿಗೆಳೆದು ಬೈಯುವುದು ಅವರ ಹುಟ್ಟುಗುಣ. ಹೀಗಿರುವಾಗ, ಅವರ ಸಭೆಗಳಿಗೆ ಒಂದು ಕಟ್ಟಡ ಬೇರೆ ಕಟ್ಟಿಸಿಕೊಡಬೇಕೆ? ಊರಿನ ಹೆಂಗಸರೆಲ್ಲರೂ ಒಟ್ಟು ಸೇರಿ ಪಿತೂರಿ ನಡೆಸಿದರೆ ಅವರು ಗಂಡಸರಿಗೆ ಅರಿಶಿನ ಹಚ್ಚಿ, ಅವರನ್ನೇ ಒಲೆ ಮುಂದೆ ಕೂರಿಸಿಬಿಡುತ್ತಾರೆ' ಎಂದು ಮುಂತಾಗಿ ಹೆದರಿ, ಸದನವನ್ನು ಮುರಿಯಲು ಪ್ರಯತ್ನಿಸಿದ ಪುರುಷರನ್ನು ಗದರಿಸಿ, ಇಪ್ಪತ್ತೈದು ವರ್ಷಗಳ ಹಿಂದೆಯೇ ಒಂದು ಮಹಿಳಾಕೂಟವನ್ನು ಕೂಡಿಸುವುದು ಅಮೀಲ್ದಾರ್ ಎಗ್ಗಮ್ಮನವ-ರೊಬ್ಬರಿಂದಲೇ ಸಾಧ್ಯ!

ಅವರು ನೆಲೆಗೊಳಿಸಿದ ಸದನವು ನೂರಾರು ತಂಟೆ ತಕರಾರುಗಳನ್ನು ತಟಾಯಿಸಿದ್ದೂ ಕೂಡ ಎಗ್ಗಮ್ಮನವರ ಹಸ್ತಗುಣದಿಂದಲೇ. ಯಾರೋ

ಒಬ್ಬಾಕೆಯನ್ನು ವೇದಿಕೆಯ ಮೇಲಕ್ಕೆ ಕರೆದೊಯ್ಯಲಿಲ್ಲ ಎಂಬುದಕ್ಕಾಗಿ ೧೯೩೨ರಲ್ಲಿ ಮಹಿಳೆಯರಲ್ಲಿ ಪಾರ್ಟಿ ಬಿದ್ದು, ಸದನದ ಎದುರು ಮನೆಯಲ್ಲೇ ಮತ್ತೊಂದು ಸಂಸ್ಥೆ ಎದ್ದಿತು. ಆದರೆ, ಎಗ್ಗನ್ಮನವರ ಆಶೀರ್ವಾದದಿಂದ ಅದು ಐದು ತಿಂಗಳು ತನಕ ನರಳಿ ತೊಟ್ಟಿಲಲ್ಲೇ ತೀರಿಕೊಂಡಿತು. ೧೯೩೦ ರಲ್ಲೂ ೧೯೩೫ ರಲ್ಲೂ ಪೈಪೋಟಿ ಉಂಟಾಗಿ ಚಂದಾಹಣ ವಸೂಲಿಗೆ ತುಂಬಾ ತೊಂದರೆ ಆಯಿತು. ಆದರೆ, ಈಗಲೂ ಅಮಿಲ್ದಾರ್ ಎಗ್ಗನ್ಮನವರ ಭಾವ-ಚಿತ್ರ ಮಹಿಳಾಸದನದ ಗೋಡೆಯ ಮೇಲೆ ಒರಗಿ, ಅಂತಹ ಉದ್ಯಮಗಳನ್ನು ಕೈಕೊಳ್ಳುವ ಇತರ ಮಹಿಳೆಯರನ್ನು ನೋಡಿ ನಗುತ್ತಿದೆ. ಸದನದ ಬೆಳ್ಳಿ ಹಬ್ಬವು ಹತ್ತಿರ ಬಂದಾಗ, ಆ ಚಿತ್ರದಲ್ಲೂ ಒಂದು ರೀತಿಯ ಮುರುಗು ಕಾಣಿಸುತ್ತಿತ್ತು.

ವರ್ಷಕ್ಕೊಂದು ವಾರ್ಷಿಕೋತ್ಸವ, ಮೆಂಬರುಗಳ ಪೈಕಿ ಯಾರಿಗಾದರೂ ಕುಮಾರಸಂಭವವಾದರೆ ಅಭಿನಂದನಾ ಕೂಟ, ಯಾರಾದರೂ ತವರುಮನೆಗೆ ಬಂದರೆ ಸ್ವಾಗತ ಸಭೆ, ಅತ್ತೆಮನೆಗೆ ಹೋದರೆ ಸಂತಾಪ ಸಭೆ, ಇವೇ ಸದನದ ಮುಖ್ಯವಾದ ಕಾರ್ಯಕಲಾಪಗಳು. ಆದರೂ, ಸದನದ ಅಧ್ಯಕ್ಷೆ ಮತ್ತು ಕಾರ್ಯದರ್ಶಿನಿ ಇವರ ಚುನಾವಣೆ ಎಂಬುದು ವಿಚಿತ್ರದುರ್ಗದ ಸ್ತ್ರೀಯರ ದ್ವೇಷಾಸೂಯೆಗಳೆಲ್ಲವನ್ನೂ ವರ್ಷಕ್ಕೊಂದು ಸಾರಿ ಕೆರಳಿಸುತ್ತಿತ್ತು. ಈಗಲೂ ರಜತಮಹೋತ್ಸವದ ದಿನದಲ್ಲೂ, ಅದಕ್ಕೆ ಇಬ್ಬರು ಕಾರ್ಯದರ್ಶಿಗಳು, ಇಬ್ಬರು ಅಧ್ಯಕ್ಷೆಯರು! ಮೂರು ತಿಂಗಳ ಹಿಂದೆ ನಡೆದ ಸದನದ ವಾರ್ಷಿಕ ಸಭೆಯಲ್ಲಿ ಚುನಾಯಿತರಾದ ಕಾರ್ಯದರ್ಶಿನಿಯೂ ಅಧ್ಯಕ್ಷೆಯೂ ತಮ್ಮ ಕೆಲಸಗಳನ್ನು ವಹಿಸಿಕೊಳ್ಳಲು ಬಂದಾಗ ಅದು ವರೆಗೂ ಇದ್ದ ಮಹಿಳೆಯರಿಬ್ಬರೂ ತಮ್ಮ ಜಾಗಗಳನ್ನು ಬಿಟ್ಟು ಕದಲಲೇ ಇಲ್ಲ! 'ಈ ಒಂದು ವರ್ಷ ಕೂಡ ನಾವೇ ಇರಬೇಕು, ಬೆಳ್ಳಿ ಹಬ್ಬದ ವರ್ಷ, ನಾಲ್ಕು ಜನ ಬರುತ್ತಾರೆ, ಎಣ್ಣೆ ಬಂದಾಗ ಕಣ್ಣುಮುಚ್ಚಿಕೊಂಡರು ಎಂದು ಹೇಳುವ ಹಾಗೆ ಈ ವರ್ಷ ಯಾರಾದರೂ ಎದ್ದು ಹೋದಾರೆ?' ಅಂತ ಮೊಂಡುಬಿದ್ದರು. ಅವರಿಬ್ಬರದೂ ಸೇರಿ ಚಂದಾ ಹಣ ಸುಮಾರು ೧೫ ರೂಪಾಯಿ ಬಾಕಿ ನಿಂತಿತ್ತು. ಜಗಳ ಮಾಡಿ ಬಲವಂತದಿಂದ ನೂಕಿದರೆ ೫೦ ರೂಪಾಯಿ ಕೈಗೆ ಬರುವ ಹಾಗೆಯೇ ಇರಲಿಲ್ಲ. ಮೆತ್ತಗೆ

ಪುಸಲಾಯಿಸಿ ಸ್ವಲ್ಪಸ್ವಲ್ಪವಾಗಿ ವಸೂಲು ಮಾಡಬೇಕಾಗಿತ್ತು. ಆದ್ದರಿಂದ, ನುರಿತು ನರೆತ ಕೆಲವರು ವೃದ್ಧೆಯರು ಮಧ್ಯಸ್ಥ ಮಾತನಾಡಿ, 'ಇವರಿಬ್ಬರೂ ಇರಲಿ; ಅವರಿಬ್ಬರೂ ಕೆಲಸ ಮಾಡಲಿ; ಯಾರಿಗೇನು ನಷ್ಟ?' ಎಂದು ಹೇಳಿ, ಜಗಳವನ್ನು ಮುಂದುವರಿಸಿದರು.

ಅಂತಃ ಛಿದ್ರಗಳು ಏನೇ ಇರಲಿ, ಮಹಿಳಾ ಸದನದ ರಜತಮಹೋತ್ಸವ ವೆಂದರೆ ಕೇಳಬೇಕೆ ಮಹಾಜನಗಳ ಕಿಕ್ಕಿರಿತ! ಸಾಲದುದಕ್ಕೆ ಕಾರ್ಯದರ್ಶಿ ಯರು ಕಾರ್ಯಕ್ರಮವನ್ನು ತುಂಬಾ ವಿಚಕ್ಷಣೆಯಿಂದ ರಚಿಸಿದ್ದರು. ಸಂಗೀತದ ಬೇಸರಿಕೆಯನ್ನು ಪರಿಹರಿಸಲು ನಾಟ್ಯ; ನಾಟ್ಯದ ಅಸಹ್ಯತೆ ಯನ್ನು ನೀಗಿಸಲು ಉಪನ್ಯಾಸ; ಉಪನ್ಯಾಸದ ಕೊರೆತವನ್ನು ಸಂತೈಸಲು ನಾಟಕ; ನಾಟಕದ ನೋವನ್ನು ಮರೆಯಲು ಅಧ್ಯಕ್ಷೆಯ ಮುಕ್ತಾಯ ಭಾಷಣ, ಅವರ ಭಾಷಣದಿಂದಾಗುವ ತಲೆನೋವನ್ನು ತೀರಿಸಲು ಮತ್ತೊಬ್ಬ ಅಧ್ಯಕ್ಷೆಯ ಎರಡನೆಯ ಮುಕ್ತಾಯ ಭಾಷಣ! ಇದಲ್ಲದೆ ಇಬ್ಬರು ಅಧ್ಯಕ್ಷೆ ಯರಿಗೂ ಆಕಸ್ಮಾತ್ತಾಗಿ ನಡುವೆ ವಾಗ್ವಾದ ಉಂಟಾಗಿ ಮುಷ್ಟಿಯುದ್ಧಕ್ಕೆ ತಿರುಗಬಹುದೆಂಬ ನಿರೀಕ್ಷಣೆಯೂ ಮಹಾಜನಗಳಿಗಿತ್ತು. . . . .ಆದ್ದರಿಂದ ನರಸಿಂಗರಾಯರು ಗುಂಡನನ್ನೂ ಹನುಮಂತನನ್ನೂ ೬೦ ನಿಮಿಷಗಳೂ ಮುಂಚಿತವಾಗಿಯೇ ಪುರಭವನಕ್ಕೆ ಕರೆದುಕೊಂಡು ಬಂದರಾದರೂ, ಅವರ ಪಾಲಿಗೆ ಬಂದ ಪರಮಾನ್ನವೆಂದರೆ ಹನ್ನೆರಡನೆಯ ಸಾಲಿನ ಎಡಭಾಗದ ಕೊನೆಯ ಮೂರು ಮುರುಕಲು ಸೀಠಗಳು! ತಮಗಿಂತಲೂ ಹೆಚ್ಚು ಮುಂಜಾಗ್ರತೆಯಿರುವ ಜನರು ಅಷ್ಟೊಂದು ಇರುವರೆಂಬುದು ಅದು ವರೆಗೂ ನರಸಿಂಗರಾಯರಿಗೆ ತಿಳಿದಿರಲಿಲ್ಲ. . . . . .ಕುಳಿತ ಮೇಲೆ ಅವರು ಸುತ್ತಲೂ ನೋಡುತ್ತಾ ಆಗಲೇ ಬಂದಿದ್ದವರು ಯಾರು ಯಾರು ಎಂದು ಪರೀಕ್ಷಿಸಿದರು! ತಾವು ಪೆನ್‌ಷನ್ ಪಡೆದು ಕಡೆಯ ಸಲ ಆಫೀಸ್ ಮೆಟ್ಟಲುಗಳನ್ನಿಳಿದು ಬಂದ ಸುದಿನದ ಬೆಳ್ಳಿ ಹಬ್ಬವನ್ನು ತಮ್ಮ ಗುಮಾಸ್ತೆಯವರು ಕೊಂಡಾಡಿ ಮುಗಿಸಿರುವ ಹಣ್ಣುಹಣ್ಣು ಮುದುಕರಿಬ್ಬರು; ಅವರ ಧರ್ಮಪತ್ನಿಯರು; ತಮ್ಮ ಮಗನ ಷಷ್ಟ್ಯಬ್ದಪೂರ್ತಿಯನ್ನು ಕೊಂಡಾಡಿ ಆನಂದಿಸಿರುವ ಮುದು ಕರು ಹತ್ತು ಹನ್ನೆರಡು ಜನ; ಅವರ ಸತಿಯರು; ದೊಡ್ಡ ದೊಡ್ಡ ಮನುಷ್ಯರು ಕೆಲವರು; ಅವರ ಕುಟುಂಬದವರು; ದೊಡ್ಡ ಮನುಷ್ಯರು ಹಲವರು; ಅವರ

ಸಂಸಾರ; ಮನುಷ್ಯರು ಬಹುಮಂದಿ; ಅವರ ಹೆಂಡತಿಯರು; ಅಧಿಕಾರಿಗಳು, ಅನಧಿಕಾರಿಗಳು; ಮಹಿಳೆಯರು, ಮಕ್ಕಳೀಯರು!

ಗುಂಡನೂ ಹನುಮಂತನೂ ಕೆಲ ನಿಮಿಷಗಳ ತನಕ ಅಪರೆದುರಿಗಿದ್ದ ಒಬ್ಬರ ಜೋಳುಬುರುಡೆಯನ್ನು ಅವಲೋಕಿಸುತ್ತಾ ಕೆಮ್ಮಿಸಿದ್ದರು.... ಆಗ, ಹನುಮಂತನ ಯೋಚನೆ ಎಲ್ಲವೂ ಚೇಳಿನ ಕಡೆಗೆ ಹರಿಯಿತು. 'ಈ ಟೌನ್‌ಹಾಲ್‌ನಲ್ಲಿ ಸುಮಾರು ಮುನ್ನೂರು ಜನರಿದಾರೆ; ಕಡೆಯ ಪಕ್ಷ ಮೂವತ್ತು ದಿನಗಳಲ್ಲೊಂದು ದಿನವಾದರೂ ಭಗವಂತನ ಕೃಪೆಯಿಂದ ಇವರೆಲ್ಲರನ್ನೂ ಚೇಳು ಕುಟುಕಿದರೆ, ತಲಾ ಒಂದಾಣೆಯಂತೆ ದಕ್ಷಿಣೆ ರೂಪಾಯಿ ೧೮-೧೨-೦ ಸಿಗುತ್ತದೆ. ಅವರ ಪೈಕಿ ೩೦ ಜನ ತಪ್ಪಿಸಿಕೊಳ್ಳಲಿ, ಚಿಂತೆ ಇಲ್ಲ; ಇನ್ನೂ ೩೦ ಜನ ನನ್ನಲ್ಲಿಗೆ ಬರದಿದ್ದರೂ ಚಿಂತೆ ಇಲ್ಲ. ನನಗೆ ರೂ. ೧೫ ಪ್ರತಿ ತಿಂಗಳಲ್ಲೂ ಬಂದೇ ಬರುತ್ತದೆ. ಹೀಗೆ ಕ್ರಮವಾಗಿ ಹದಿನೈದು ರೂಪಾಯಿ ಪರವಾನ ಬರುವುದಾದರೆ ನಾನು ದಿನಕ್ಕೆರಡು ಜನ ಬಡವರಿಗೆ ಉಚಿತವಾಗಿಯೇ ಮಂತ್ರಚಿಕಿತ್ಸೆ ಮಾಡುತ್ತೇನೆ. ಏಕೆ ಕೂಡದು? ಜಂಗಮ ಜನಾರ್ದನರಲ್ಲವೆ ಅವರು? ಆದರೆ. ಆಗ ಒಂದು ದೊಡ್ಡ ತೊಂದರೆ ಬರುತ್ತದೆ,—ನಾನು ತಬ್ಬಲಿ, ನಾನು ತಮ್ಮಡಿ, ಎಂದು ಪ್ರತಿಯೊಬ್ಬರೂ ಕಾಸಿಗೆ ಮೋಸ ಮಾಡಲು ಯತ್ನಿಸುವರು. ಕೂಡದು, ಕೂಡದು. ಅದಕ್ಕಾಗಿಯೇ ಒಂದು ಸಮಿತಿಯನ್ನು ಸ್ಥಾಪಿಸಬೇಕಾಗುತ್ತದೆ....'

ಆಗ, ಗುಂಡ ಹನುಮಂತನ ಅಂಗಿಯನ್ನೆಳೆದು 'ಅಲ್ಲಿ ನೋಡು.... ಅಲ್ಲಿ..ಆ ಮೂಲೆಯಲ್ಲಿ....ಗೋಡೆಯ ಮಗ್ಗುಲಲ್ಲಿ....ಹ್ರೀಂ ಬೀಡಿ ಕ್ಯಾಲೆಂಡರಿನ ಕೆಳಗೆ..ಆಕಳಿಸುತ್ತಾ ಇದಾರಲ್ಲೋ..ಬಾಯ ಬಿಲದೆದುರು ಚಿಟಿಕೆಹೊಡೆಯುತ್ತಾರಲ್ಲೋ..ಅವರೇ ಕರೀ ಕೆರೆಯಲ್ಲಿ ನಡೆದ **ಕರ್ಣಾಟಕ-ಕರ್ನಾಟಕ** ಜಗಳದಲ್ಲಿ ಮೂರ್ಧನ್ಯವಾದಿಗಳ ಮುಖಂಡರು..ಈಗ ಅವರು 'ಣಾರಾಯಣಾ' ಅಂತಲೇ ಹೇಳಿರಬೇಕು..ಅನುಮಾನವಿದ್ದರೆ ಅವರ ಪಕ್ಕದಲ್ಲಿರುವವರನ್ನ ಆಮೇಲೆ ವಿಚಾರಿಸೋಣ' ಎಂದ. ಹನುಮಂತನಿಗೆ ಇಂತಹ ಪರಿಚಯದ ಮಾತುಗಳು ಆಗ ಬೇಕಿರಲಿಲ್ಲ. 'ನೋಡಲ್ಲಿ, ಅವರ ಮನೆಯಲ್ಲಿ ವಿಪರೀತ ಚೇಳು' ಅಂತ ಯಾರಾದರೂ ಹೇಳಿದ್ದರೆ ಗುಂಡನ ಕಿವಿ ನೆಟ್ಟಗಾಗುತ್ತಿತ್ತು. ಆದರೂ ಕೂಡ, 'ರಾವ್‌ಸಾಹೇಬ್ ರಾಮಸೇತು

ಅವರನ್ನು ನೋಡಿಲ್ಲವೇನೋ ನೀನು?' ಅಂತ ಗುಂಡ ಕೇಳಿದಾಗ, ಅವನು ಅತ್ತ ಕಡೆ ತಿರುಗಲೇಬೇಕಾಯಿತು. 'ನೋಡಲ್ಲಿ..ಎರಡನೆಯ ಸಾಲು ಪಕ್ಕದವರನ್ನ...ನಶ್ಯ ಕೇಳುತ್ತಾ ಇದಾರಲ್ಲಾ..ಇಲ್ಲ ಅನ್ನಿಸಿಕೊಂಡರಲ್ಲಾ..ಆ ಕಡೆ ಕುಳಿತಿದ್ದವರು ಈಗ ಕೂಡುತ್ತಿದಾರಲ್ಲಾ....ಈ ಕಡೆ ನೋಡೋ, ಅಲ್ಲಲ್ಲ..ಈಗ ಪರಿಸುತ್ತಾ ಇದಾರಲ್ಲಾ..ಅವರೇ..ಈಗ ಒರಸಿಕೊಳ್ಳುತ್ತಿದಾರಲ್ಲಾ..ಅವರೇ ರಾವ್‌ಸಾಹೇಬರು..'

ಬೆಳ್ಳುಳ್ಳಿ ಉಪ್ಪು ಜೊತೆಗೆ ಕೊಂಚ ನಶ್ಯವನ್ನೂ ಸೇರಿಸಿ ತಿಕ್ಕಿದರೆ ಬೇಗ ವಾಸಿಯಾಗುತ್ತದೋ ಏನೋ ಎಂದು ಹನುಮಂತನಿಗೆ ಆಗ ಒಂದು ಯುಕ್ತಿ ಹೊಳೆಯಿತು..ಅವನಿಗೆ ಗುಂಡನ ಸಹವಾಸ ಸರಿಬೀಳಲಿಲ್ಲ. ಒಬ್ಬನೇ ಕುಳಿತು ಏಕಾಂತದಲ್ಲಿ ವಿಚಾರ ಮಾಡಬೇಕೆಂದು ಅವನಿಗೆ ಆಸೆ. ಎಲ್ಲಾದರೂ ಒಂದು ಖಾಲಿ ಕುರ್ಚಿ ಸಿಗುತ್ತದೋ ಎಂದು ಹುಡುಕಲು ಅವನು ಎರಡು ಕಣ್ಣುಗಳನ್ನೂ ಅಟ್ಟಿದ. ಅವು ಸಭಾಮಂದಿರವನ್ನೆಲ್ಲಾ ಎರಡು ಸಾರಿ ಬಳಸಿ ಪೆಚ್ಚುಮೋರೆ ಹಾಕಿಕೊಂಡು ಹಿಂದಕ್ಕೆ ಬಂದುವು....ಅಷ್ಟುಹೊತ್ತಿಗೆ ಸರಿಯಾಗಿ ಅವರ ಮುಂದಿನ ಸಾಲಿನ ಬೋಳು ಬುರುಡೆಯ ಮುಂಭಾಗದಲ್ಲಿ ಒಂದು ಆಕಳಿಕೆ ನಡೆಯಿತು. ಅವರು, 'ನಾರಾಯಣಾ' ಅಂತ ಹೇಳುತ್ತಾ ಚಿಟಿಕೆ ಹೊಡೆದುಕೊಂಡರು! ಹನುಮಂತ ಗುಂಡನನ್ನು ಕಿವಿ ಹಿಡಿದೆಳೆದು, 'ಲೋ, ಕರೀ ಕೆರೆ ಜಗಳದಲ್ಲಿ ಇವರೇಯೋ ದಂತ್ಯವಾದಿಗಳ ಮುಖಂಡರು?' ಎಂದ. ಆಗ ಗುಂಡ, 'ನನಗೆ ಖಂಡಿತವಾಗಿ ತಿಳಿಯದು. ಆಮೇಲೆ ವಿಚಾರಿಸೋಣ..ಇರಲಿ, ಹನುಮಂತ, ನೀನು ಸಾದಾ ಪೇಟಾ ಪಾಳಯಗಾರರನ್ನು ಕಂಡಿದೀಯಾ ಎಂದಾದರೂ?' ಎಂದ. ಹನುಮಂತನಿಗೆ ರೇಗಿತು. 'ಯಾರವರು? ಇವರೇನು?' ಎಂದು ಅವನು ನರಸಿಂಗರಾಯರನ್ನೇ ಗುರುತಿಸಿದ! 'ಅಧಿಕಪ್ರಸಂಗ ತೆಗಿಯಬೇಡ..ಅಲ್ಲಿ ನೋಡು! ಆಹ್ವಾನಪತ್ರಿಕೆಯನ್ನು ಮಡಿಸಿ ಹಿಡಿದು ಅದರಿಂದ ಮೂಗಿನ ತುದಿಯನ್ನು ಕೆರೆದುಕೊಳ್ಳುತ್ತಿದಾರಲ್ಲಾ, ಅವರೇ ಪಾಳಯಗಾರರು.'

'ಹಾ?'

'ಹುಂ.'

'ನಿಜವಾಗಿಯೂ?'

'ಇಷ್ಟು ಸಣ್ಣ ವಿಷಯಕ್ಕೆಲ್ಲಾ ನಾನು ಸುಳ್ಳು ಹೇಳುತ್ತೇನೆಯೋ?'

'ದೇವರಾಣೆ?'

'ದೇವರಾಣೆ ಏಕೆ? ನಾನು ಹೇಳಿದ್ದು ಸುಳ್ಳಾದರೆ ನಿನಗೆ ಅರ್ಧ ಕಾಫಿ ಕೊಡಿಸುತ್ತೇನೆ..ಅದಕ್ಕಿಂತ ಇನ್ನೇನು?'

ಹನುಮಂತನಿಗೂ ಕೊಂಚ ಹುಮ್ಮಸ್ಸು ಬಂತು. ಗುಂಡನಷ್ಟೇ ತನಗೂ ಮಹಾಪುರುಷಸಂಶ್ರಯ ದೊರೆತಿದೆ ಅಂತ ತೋರ್ಪಡಿಸುವುದಕ್ಕಾಗಿ ಅವನು, ಸುಮ್ಮನೆ, ಕುಚೇಷ್ಟೆಗಾಗಿ, 'ಮೇಜರ್ ಭೀಮರಾಯರನ್ನು ಯಾವತ್ತಾದರೂ ನೋಡಿದೀಯಾ ನೀನು?' ಎಂದು ಕೇಳುತ್ತಾ, ಮೂಗಿಗೆ ಪುಡಿ ತುಂಬಿದ.

'ಇಲ್ಲ; ನೀನು?'

'ನಾನೂ ನೋಡಿಲ್ಲ; ಆದರೂ ತೋರಿಸಬಲ್ಲೆ. ಅದು ನಿಜವಾಗಿಯೂ ಬುದ್ಧಿವಂತಿಕೆಯಿಂದ....ನೋಡು. ಆ ಕಂಬದ ಕೆಳಗೆ....'ನಪುಂಸಕಹಾರಿ ಕ್ಯಾಲೆಂಡರ್' ಕೆಳಗಡೆ....ಕಪ್ಪು ಕನ್ನಡಕ....ಗೆದ್ದಲು ತಿಂದ ಮೀಸೆ....ಅವರೇ ಇರಬೇಕು..ಯಾರನ್ನು ಬೇಕಾದರೂ ವಿಚಾರಿಸು!'

'ಏಕೆ, ಮೊದಲನೆಯ ಸಾಲು, ನಡುಮಧ್ಯೆ ಕುಳಿತು ಕೆಮ್ಮುತ್ತಿದಾರಲ್ಲಾ, ಕೆಂಪು ರುಮಾಲು ಅವರಿರಬಾರದೇನು?'

'ಎಲ್ಲಾದರೂ ಉಂಟೆ?'

'ಯಾಕಾಗಬಾರದು?'

'ನಿನ್ನ ಮೆದುಳಿಗೆ ಕೊಂಚ ಗೊಬ್ಬರ ಹಾಕಿ ನೋಡು.'

'ನಿನ್ನ ಮೆದುಳೇ ಗೊಬ್ಬರ!'

'ರೇಗಬೇಡ, ಗುಂಡ. ಯೋಚನೆ ಮಾಡೋ! ಭೀಮರಾಯರು ಅಂದಮೇಲೆ ಆಸಾಮಿ ಸುತ್ತಳತೆ, ತೂಕ, ಉದ್ದ, ಅಗಲ, ಎಲ್ಲವನ್ನೂ ಊಹಿಸುವುದಕ್ಕಾಗುವುದಿಲ್ಲವೆ? ಮೇಜರ್ ಅಂದರೆ ಮೀಸೆ ಇರಲೇಬೇಕು.. ಮುದುಕರಾದ ಮೇಲೆ ರಿಟೈರಾಗಿಯೇ ಇರುತ್ತದೆ..ರಿಟೈರಾದರೆ ಮೀಸೆಗೆ ಗೆದ್ದಲೇ ಗತಿ......ಅವರೇ ಭೀಮರಾಯರು......ನೀನು ಯಾರನ್ನು ಬೇಕಾದರೂ ವಿಚಾರಿಸಿಕೋ.'

ಆಗ ಅವರ ಹಿಂದಿನ ಸಾಲಿನಲ್ಲಿ ಕುಳಿತಿದ್ದವರೊಬ್ಬರು ಕೊಡೆಯನ್ನು ನೆಲಕ್ಕೆ ಕೆಡವಿದರು. ಅದನ್ನು ಅವರ ಕೈಗೆ ಎತ್ತಿಕೊಡುತ್ತಾ, ಗುಂಡ, 'ಸ್ವಾಮಿ! ಮೇಜರ್ ಭೀಮರಾಯರು ಯಾರು, ತೋರಿಸಿ!' ಅಂದ. ಅವರು 'ನಾನೇ! ಆಂಜನೇಯನ ವರಪ್ರಸಾದದಿಂದ ನಾನೇ!' ಅಂದರು. ಹನುಮಂತನ ಬೆನ್ನಮೇಲೆ ಕೈಯಿಟ್ಟು, 'ಸ್ವಾಮಿ! ನಿಮ್ಮ ಮಾತೆಲ್ಲಾ ಕೇಳುತ್ತಿದ್ದೆ ನಾನು. ನೀವು ಮನೆಗೆ ಹೋಗುವಾಗ ನಾನು ಜೊತೆಯಲ್ಲೇ ಬರುತ್ತೇನೆ; ತಪ್ಪಿಸಿಕೊಳ್ಳಬೇಡಿ' ಎಂದು ಎಚ್ಚರಿಸಿದರು!

ಹನುಮಂತನಿಗೆ ಪಾಪ, ಹೊಟ್ಟೆಯೊಳಗೆ ಏನೇನೋ ಸಂಕಟ! ಮೈ ಬೆವರಿತು, ದಾಹ ಹೆಚ್ಚಿತು; ಬಾಯೊಣಗಿತು. ತಲೆನೋವು ವಿಪರೀತ. ಪಾತಾಳಕ್ಕೆ ದಾರಿ ಯಾವುದು ಅಂತ ಹುಡುಕಬೇಕೆನಿಸಿತು. ವೇದಿಕೆಯ ಮೇಲೆ ನಡೆದ ಕಲಾಪಗಳ ಕಡೆ ಅವನ ದೃಷ್ಟಿ ಸುಳಿಯಲೇ ಇಲ್ಲ. ಪ್ರೇಕ್ಷಕರ ಚಪ್ಪಾಳೆ ಸದ್ದು ಅಸಾಧಾರಣವಾಗಿ ಹೆಚ್ಚಾದಾಗ ಮಾತ್ರ ಅವನು ಕೊಂಚ ತಲೆ ಎತ್ತಿ ನೋಡುತ್ತಿದ್ದ; ಆದರೆ, ಅಷ್ಟರೊಳಗೆ ಅಲ್ಲಿ ನಡೆದ ಸ್ವಾರಸ್ಯವಾದ ಅಂಶವು ಮುಗಿದುಹೋಗುತ್ತಿತ್ತು! 'ಅನ್ಯಾಯ! ಇಷ್ಟು ಅಸಭ್ಯವಾಗಿ ನಾನು ಎಂದೂ ವರ್ತಿಸಿದ್ದಿಲ್ಲ. ಕೋ-ಆಪರೇಟಿವ್ ಸೊಸೈಟಿ ಗುಮಾಸ್ತೆ ಒಬ್ಬರು ಊರಿನ ಪ್ರಮುಖರನ್ನು ಹೀಗೆ ಎತ್ತಿ ಆಡಿದ ಅಂದರೆ ಜನ ಏನಂದಾರು? ಲಕ್ಷ್ಮೀನಾರಾಯಣರು ಸುಮ್ಮನೆ ಬಿಡುವರೆ? ಗೋಳಪ್ಪನವರ ಗತಿ ಏನು? ಸೋದರಮಾವನ ಮಗ ಅಂತ ಗುಂಡನೊಂದಿಗೆ ಸಲಿಗೆಯಾಗಿದ್ದು, ಅವನನ್ನು ಲೇವಡಿ ಎಬ್ಬಿಸಲು ಯತ್ನಿಸಿದ್ದೇ ತಪ್ಪಾಯಿತು.' ಎಂದುಕೊಂಡ. ಅಷ್ಟರೊಳಗೆ 'ಜನಗಣ ಮನ' ಎಂಬ ಪ್ರಭಾತ ಗೀತೆಯೊಂದಿಗೆ ಮಹೋತ್ಸವದ ಕಾರ್ಯಕ್ರಮವು ಮುಗಿಯಿತು. ಮುಂಗಡವಾಗಿ ಹಣ ಕೊಟ್ಟಲ್ಲದೆ ಗ್ಯಾಸ್ ಲೈಟುಗಳನ್ನು ಕಳುಹಿಸುವುದಿಲ್ಲವೆಂದು ಅಬ್ದುಲ್ಲಾ ಷರೀಫರು ಹೇಳಿಬಿಟ್ಟದ್ದರಿಂದ ಸೂರ್ಯನ ಬೆಳಕಿರುವಾಗಲೇ ನಾಟ್ಯ ನಾಟಕಾದಿಗಳೆಲ್ಲವನ್ನೂ ಒಟ್ಟಿಗೆ ಒಂದೇ ಸಲ ಬಿರುಬಿರನೆ ಮುಗಿಸಿ, ಕತ್ತಲೆಯಲ್ಲೇ ಭಾಷಣಗಳನ್ನು ನಡೆಸಿ, ಸುಮಾರು ಎಂಟು, ಎಂಟು ಇಪ್ಪತ್ತರ ಹೊತ್ತಿಗೆ 'ಎಗ್ಗಮ್ಮಾಕೀ ಜೈ' ಕಾರಗಳೊಡನೆ ಸಭೆ ಕೊನೆಗಂಡಿತು.

ಮೇಜರ್ ಭೀಮರಾಯರು ಹನುಮಂತನನ್ನೂ ಕರೆದುಕೊಂಡು

ಪುರಭವನದಿಂದ ತೇರಿನ ರಸ್ತೆ ಮೂಲಕವಾಗಿ ಹೊರಟರು! ಹನುಮಂತನ ಎದೆ ಡಬಡಬ್‌ಡಬ್ ಎಂದು ಡೋಲು ಬಾರಿಸುತ್ತಿತ್ತು....ಭೀಮರಾಯರದು ಬೆಳ್ಳನೆಯ ತೆಳ್ಳನೆಯ ದೇಹ....ಮೀಸೆಯಿಲ್ಲದ ಮುಖ....ಅವನು ಊಹಿಸಿದಂತೆ ಅಲ್ಲವೇ ಅಲ್ಲ....

ರಾತ್ರಿ ೯-೩೦. ಆದರೂ ಮೇಜರ್ ಭೀಮರಾಯರೂ ಹನುಮಂತನೂ ಈಶ್ವರನ ಗುಡಿ ಮುಂದೆ ನಿಂತು ಇನ್ನೂ ಮಾತನಾಡುತ್ತಿದ್ದರು! ಜಗಳ ಮಾಡುತ್ತಿರಲಿಲ್ಲ!....ಹನುಮಂತ ಹೆದರಿದ ಹಾಗೆ ರಾಯರು ಅವನನ್ನು ಆಶೀರ್ವದಿಸಲೇ ಇಲ್ಲ. ಭೀಮರಾಯರು, ಪಾಪ, ಆಂಜನೇಯನ ಉಪಾಸಕರಂತೆ. ಆದ್ದರಿಂದ, ಹನುಮಂತ ಎಂಬ ನಾಮಧೇಯವನ್ನು ಕೇಳಿದಾಗಲೇ ಅವರಿಗೆ ಒಂದು ವಿಧವಾದ ಮನೋವಿಕಾರವುಂಟಾಗಿ ಅವನ ಮೇಲೆ ಸಂಪೂರ್ಣ ಪ್ರೀತಿ ವಿಶ್ವಾಸಗಳು ತಲೆದೋರಿದುವು....ಅವರು ತಮ್ಮೂರಿಂದ ವಿಚಿತ್ರದುರ್ಗಕ್ಕೆ ಬಂದು ಇನ್ನೂ ನಾಲ್ಕು ತಿಂಗಳು ಕಳೆದಿಲ್ಲ. ಆದ್ದರಿಂದಲೇ ಕೋ-ಆಪರೇಟಿವ್ ಸೊಸೈಟಿಗೆ ಅದು ವರೆಗೂ ಬಾರದೆ ಇದ್ದದ್ದು. ಅವರ ಕುಟುಂಬಕ್ಕೆ ವೈಯಲ್ಲಿ ಸ್ವಸ್ಥವಿಲ್ಲವಾಗಿ ದುರ್ಗದ ಕೋಟೆ ಬಾಗಿಲು ಆಂಜನೇಯನ ಮುಂದೆ ನಲವತ್ತೊಂದು ದಿನದ ಪ್ರಾರ್ಥನೆಯನ್ನು ಸಲ್ಲಿಸಲು ರಾಯರೂ ಹೆಂಡತಿಯೂ ಮಗಳೂ ಇಲ್ಲಿಗೆ ಬಂದರಂತೆ. ಇಲ್ಲಿಯ ಹವಾ ಗುಣಕ್ಕೆ ಮನಮೆಚ್ಚಿ ಸಣ್ಣದೊಂದು ಮನೆಯನ್ನು ಕೊಂಡು, ವಿಚಿತ್ರದುರ್ಗದಲ್ಲೇ ಬೇರು ಬಿಡಲು ಪ್ರಯತ್ನಿಸುತ್ತಿರುವರಂತೆ. ಅವರಿಗಿದ್ದ ಇಬ್ಬರು ಗಂಡುಮಕ್ಕಳೂ ಶ್ರೀರಂಗದಲ್ಲಿ ಕಾವೇರಿಸ್ನಾನ ಮಾಡುತ್ತಿದ್ದಾಗ, ೧೯೩೧ರಲ್ಲಿ ನೀರುಪಾಲಾಗಿ ತೇಲಿ ಹೋದರಂತೆ! ಪಾಪ, ಅಂದಿನಿಂದ, ಸಂಸಾರವೇ ಬೇಡವಾಗಿ, ಹೀಗೆ ಶ್ರೀರಾಮಸ್ಮರಣೆಯಲ್ಲೇ ಕಳೆಯುತ್ತಾ, ಆಂಜನೇಯನ ಪೂಜೆ ಮಾಡುತ್ತಾ ಹೇಗೋ ಆಯುಷ್ಕಾಲವನ್ನು ನೂಕುತ್ತಿರುವರಂತೆ. ಹೀಗೆ ತಮ್ಮ ಪರಿಚಯವನ್ನು ಭೀಮರಾಯರು ತಾವೇ ಹನುಮಂತನಿಗೆ ಒದಗಿಸಿದರು.

'ಟೌನ್‌ಹಾಲ್‌ನಲ್ಲಿ ನೀವು ನೀವು ಮಾತನಾಡುತ್ತಿದ್ದಾಗ ನನ್ನ ಕಿವಿ ತೆರೆದಿತ್ತು. ನಿಮ್ಮ ವಿಚಾರಸರಣಿಯನ್ನು ನೋಡಿ ಸಾಕ್ಷಾತ್ ಷೆರ್ಲಕ್ ಹೋಂಸ್‌ರವರೇ ಎದುರಿಗೆ ಕುಳಿತಿದಾರೋ ಎಂಬ ಅನುಮಾನ ಬಂತು

ನನಗೆ....ಈಗಿನ ಕಾಲದ ತರುಣರು ಯಾರೂ ಇಷ್ಟು ಸಮಂಜಸವಾಗಿ ಇಷ್ಟು ವಿವೇಕದಿಂದ ವಿವೇಚನೆಯಿಂದ ವಾದ ಮಾಡಲಾರರು.'

'ಹಾಗೆ ಹೇಳಬೇಡಿ..ನನ್ನನ್ನ ನೀವು ಶುದ್ಧ ಪೋಕಿರಿ ಅಂತ ಬೈದು ........'

'ಛೆ, ಛೆ....ನೋಡಿದಿರಾ? ನಾನು ಹಾಗಂದನೆ? ನಿಮ್ಮ ಬುದ್ಧಿ ಶಕ್ತಿಗೆ ಮೆಚ್ಚಿ ನಿಮ್ಮ ಪರಿಚಯವನ್ನ ಚೆನ್ನಾಗಿ ಸಂಪಾದಿಸೋಣ ಅಂತ ಇಲ್ಲಿಗೆ ಕರೆದುಕೊಂಡು ಬಂದೆ, ಅಷ್ಟೆ. ಭೀಮ ಎಂಬ ಹೆಸರಿಂದಲೋ ಗಾತ್ರ ಗೋತ್ರಗಳನ್ನೂ, ಮೇಜರ್ ಎಂಬುದರಿಂದಲೇ ಮೀಸೆಯ ಲಗುಬಿಗಿಗಳನ್ನೂ ಎಷ್ಟು ಸುಲಭವಾಗಿ ಊಹಿಸಿದಿರಿ, ನೀವು..ನೀವು ಏಕೆ ಪೋಲೀಸ್ ಇಲಾಖೆಗೆ ಅರ್ಜಿ ಬರೆದುಕೊಳ್ಳಬಾರದು? ಆಂಜನೇಯನ ಕೃಪೆಯಿಂದ, ನೀವು ಮಾತ್ರ ಪೋಲೀಸ್ ಇನ್‌ಸ್ಪೆಕ್ಟರಾದರೆ, ನಿಮ್ಮ ಪತ್ತೆದಾರಿಕ್ರಮವೇ ಎಲ್ಲರನ್ನೂ ಬೆರಗುಮಾಡುತ್ತದೆ..ಅಲ್ಲಾ....ನಿಮ್ಮಂತಹ ಮೇಧಾವಿಗಳಿಗೆ ಕೊಡದೆ ಕೂಡುಹಾಕಿಕೊಂಡಿರುವ ಡಿಗ್ರಿಗಳಿಂದ ನಮ್ಮ ದೇಶಕ್ಕೆ ಏನು ಬಂದ ಹಾಗಾಯಿತು?'

ಪಾತಾಳಕ್ಕೆ ದಾರಿ ಹುಡುಕುತ್ತಿದ್ದ ಹನುಮಂತ ಈಗ ಸ್ವರ್ಗದಲ್ಲಿ ತೇಲಾಡುತ್ತಿದ್ದ. ತನ್ನ ತಾಪತ್ರಯಗಳಿಗಾಗಿ ಪರಿತಪಿಸುವ, ತನ್ನ ಬುದ್ಧಿ ಶಕ್ತಿಯನ್ನು ತಿಳಿದೂ ತನ್ನನ್ನು ಅದಕ್ಕಾಗಿಯೇ ಮೆಚ್ಚುವ ಒಬ್ಬ ವ್ಯಕ್ತಿ ಯನ್ನಾದರೂ ದಯಪಾಲಿಸಿದನಲ್ಲಾ ಭಗವಂತಾ, ಅಂತ ಕತ್ತಲಲ್ಲೇ ಕಣ್ಣೀರು ಬಿಟ್ಟ. ಈಶ್ವರನ ಗುಡಿ ಕಡೆ ತಿರುಗಿ ನಿಂತು ಕತ್ತಲಲ್ಲೇ ಒಂದು ಸಲ ಕೈ ಮುಗಿದ. ಗುಡಿ ಬಾಗಿಲು ಹಾಕಿತ್ತು. ಆದರೂ, ಸರ್ವವ್ಯಾಪಿಯಾದ ಕೈಲಾಸ ವಾಸಿ ಆ ಮುಗಿತವನ್ನು ಮುದದಿಂದ ಸ್ವೀಕರಿಸಿರಬೇಕು. 'ಉತ್ತರೋತ್ತ ರಾಭಿವೃದ್ಧಿರಸ್ತು' ಎಂದು ಹರಸಿರಬೇಕು.

ಏಕೆಂದರೆ, 'ಮನೆಯ ತನಕ ಬಂದೇ ಹೋಗಬೇಕು' ಎಂದು ಭೀಮ ರಾಯರು ಬಲವಂತಪಡಿಸಿದರು. ಮನೆಯ ಮುಂದೆ ರಸ್ತೆಯಲ್ಲೇ ನಿಲ್ಲಿಸಿ, 'ನನ್ನ ಮಗಳು ಈ ವರ್ಷದ ಮಿಡ್ಲಿಸ್ಕೂಲ್ ಪರೀಕ್ಷೆಗೆ ಕಟ್ಟಿದಾಳೆ. ಚರಿತ್ರೆ ಭೂವಿವರಣೆಯಲ್ಲೇ ಅವಳಿಗೆ ಎರಡು ವರ್ಷದಿಂದಲೂ ನಂಬರು ಕಡಿಮೆ. ಇಂಗ್ಲೀಷಿನಲ್ಲಿ ಅವಳು, ಆಂಜನೇಯನ ಕೃಪೆಯಿಂದ, ನಿಮ್ಮ ಹಾಗಲ್ಲ;

ಕಾನ್‌ವೆನ್ಟ್ ಸ್ಕೂಲಲ್ಲಿ ಎರಡು ವರ್ಷ ಓದಿದಾಳೆ..ನೀವು ಅವಳಿಗೆ ಪಾಠ ಹೇಳುವುದಕ್ಕೆ ಒಪ್ಪಬೇಕು. ಪಾಠ ಹೇಳುವುದು ಅಂದರೆ ಇನ್ನೇನು ಬೇಕಿಲ್ಲ. ಚರಿತ್ರೆಯಲ್ಲಿ ರಾಜಾ ರಾಣಿಯರ ಹೆಸರುಗಳನ್ನೂ ಇಸವಿಗಳನ್ನೂ, ಭೂವಿವರಣೆಯಲ್ಲಿ ರಾಜಧಾನಿಗಳು ಮತ್ತು ಬೆಟ್ಟದ ಸಾಲುಗಳು, ಹೊಳೆಗಳು, ಭೂಶಿಖರ, ಜಲಸಂಧಿ ಇತ್ಯಾದಿಗಳ ಹೆಸರನ್ನೂ ಅವಳೊಂದಿಗೆ ಕುಳಿತು ನೀವೂ ಗಟ್ಟಿ ಮಾಡಿದರೆ ಸಾಕು; ಮತ್ತೊಬ್ಬರು ಜೊತೆಯಲ್ಲಿದ್ದು ಗಟ್ಟಿಯಾಗಿ ಹೇಳುತ್ತಿದ್ದರೆ, ಅವಳಿಗೆ ಉರುಹಚ್ಚಲು ಹೆಚ್ಚು ಅನುಕೂಲವಂತೆ!....ಅಲ್ಲದೆ, ಇದರಲ್ಲಿ ನನ್ನ ಸ್ವಾರ್ಥವೂ ಕೊಂಚ ಇದೆ, ಅನ್ನಿ..ಇದಕ್ಕಾಗಿ ನೀವು ನಮ್ಮ ಕುಟೀರಕ್ಕೆ ಬಂದು ಹೋಗುತ್ತಾ ಇದ್ದ ಪಕ್ಷದಲ್ಲಿ ನಮ್ಮ ನಿಮ್ಮ ಸ್ನೇಹ ಇನ್ನೂ ಬಲವಾಗುತ್ತದೆ ಎಂಬ ಆಸೆಯೂ ಉಂಟು' ಎಂದು ಅವರು ಹೇಳಿದರು.

ಹನುಮಂತನ ಕಣ್ಣಲ್ಲಿ ಮತ್ತೆ ನೀರು ತುಂಬಿತು. ಶೀಸನನ್ನು ಮೀರಿಸುವ ಭಾಗ್ಯ ನನ್ನನ್ನು ಹುಡುಕಿಕೊಂಡೇ ಹರಿದು ಬರುತ್ತಿದೆಯೋ ಏನೋ ಎಂಬ ಅನುಮಾನವು ಅವನ ಎದೆಯಲ್ಲಿ ಥಟಕ್ಕನೆ ಸುಳಿಯಿತು..ಮೇಜರ್ ಭೀಮರಾಯರು ಮನೆಯೊಳಕ್ಕೆ ಹೋಗಿ, ಕೊಂಚ ಕುಂಕುಮ ತಂದರು! 'ಆಂಜನೇಯನ ಪ್ರಸಾದ' ಅಂತ ಹೇಳುತ್ತಾ ಹನುಮಂತನ ಹಣೆಗೆ ಹಚ್ಚಿದರು. ಬ್ರಹ್ಮಚಾರಿಗೆ 'ಕುಂಕುಮ ಮುದ್ರಿತಾಂಗಂ!'....ಹನುಮಂತ ತನ್ನ ಮನೆಯ ಕಡೆ ತಲೆ ಎತ್ತಿಕೊಂಡೇ ನಡೆದ. ತಿಳಿಯಾದ ಆಕಾಶ; ನಕ್ಷತ್ರಗಳು! ಇಲ್ಲಿಂದಲ್ಲಿಗೆ ಎಷ್ಟು ಮಹಾದೂರ! ಮಿನುಮಿನುಗುವೆ, ಹಾ, ಕಿರುತಾರಕೆಯೇ!....'ಶ್ಯಾಮಸುಂದರ ಮದನ ಮೋಹನ.... ಜೀ....ಜೀಈ....ಪಾಂಡುರಂಗಾ!'....'ಶ್ಯಾಮಸುಂದರ ಮದನ ಮೋಹನ......'

—

## ಏಳನೆಯ ಅಧ್ಯಾಯ

# ಕಾಕಾಸುರನ ಕುತಂತ್ರ



ಬಿಡಬೇಡಿರಿ ಹೊಡೆವುದ ನೀವ್.........**ಬಿ. ವೆಂ.**

ಭೀಮನು ಬಿದ್ದನೇ ಕೌರವ ಗೆದ್ದನೇ<br>
ಮುಂದಾಗುವುದನು ಕಾಣಲ್ಲಿ........... **ಪುಟ್ಟಪ್ಪ.**



ಹನುಮಂತ ಮನೆಗೆ ಬಂದಾಗ ಪೋಲೀಸ್ ಕಾನ್‌ಸ್ಟೇಬಲ್ ನಂ. ೩೬೧ ಬಾಗಿಲಲ್ಲಿ ನಿಂತಿದ್ದರು! 'ಯಾಕ್ರೀ ಇಷ್ಟು ತಡ? ಎಲ್ಲಿ ವಿಚಾರಿಸಿದರೂ ನೀವು ಸಿಗಲೇ ಇಲ್ಲ; ನಿಮಗಾಗಿ ಎಷ್ಟು ಹೊತ್ತು ಕಾಯುವುದು? ಈಗ ಹತ್ತು ಗಂಟೆ ಹತ್ತಿರ ಹತ್ತಿರ....ಎಲ್ಲೆಲ್ಲಿ ತಿರುಗಿದಿರಿ? ನೆಟ್ಟಗೆ ಮನೆ ಕಡೆ ಬಂದುಬಿಡಬಾರದೆ?' ಅಂತ, ಉತ್ತರ ಬರುವುದಕ್ಕೂ ಕಾಯದೆ, ೩೬೧ ಒಂದೇ ಸಮನೆ ಕೂಗಿಕೊಂಡರು.

ಯಾವುದೋ ಒಂದು ಸವಿಗನಸಿನಲ್ಲಿ ವಿಹರಿಸುತ್ತಿದ್ದ ಹನುಮಂತನ ಮನಸ್ಸನ್ನು ಆ ಪೋಲೀಸ್ ಕಾನ್‌ಸ್ಟೇಬಲ್ ಬಲವಂತದಿಂದ ಹಿಡಿದೆಳೆದು ನೆಲಕ್ಕಪ್ಪಳಿಸಿದರು. ಹನುಮಂತನಿಗೆ ಏನೂ ಅರ್ಥವಾಗಲಿಲ್ಲ. ಪೋಲೀಸಿನವರ ಗದರಿಕೆಗೆ ಅವನು ಇದುವರೆಗೂ ಸಿಕ್ಕಿರಲಿಲ್ಲ. ಈಗ ಅವರ ದರ್ಶನ ಲಾಭವಾಗುವಷ್ಟುಯಾವ ಪುಣ್ಯದ ಕೆಲಸಮಾಡಿದ್ದಎಂಬುದೂ ಅವನಿಗೆ ಪತ್ತೆ ಆಗಲಿಲ್ಲ. 'ಎಲ್ಲಿ, ಯಾರನ್ನ, ಏತಕ್ಕೆ, ಯಾವಾಗ, ಹೇಗೆ, ಏನು ಮಾಡಿದೆ?' ಎಂದು ಅವನು ತನ್ನ ನೆನಪಿನ ಬೇರುಗಳನ್ನೆಲ್ಲಾ ಒಂದೊಂದಾಗಿ ಹೊರಗೆಳೆದು

ಹುಡುಕಿದ. ಆಂಜನೇಯಾ, ನೀನೇ ಶರಣು ಎಂದು ಮನಸೋತು, ಹಣೆಯ ಮೇಲಿನ ಕುಂಕುಮವನ್ನು ಮುಟ್ಟಿದ.

ಆಗ, ಮನೆಯೊಳಗಿಂದ ಯಾರೋ ಕಿಟೋ ಎಂದು ಕಿರಿಚಿಕೊಂಡ ಹಾಗಾಯಿತು. ಮಗುವಿನ ರೋದನಧ್ವನಿ! ರಾಮಲಕ್ಷ್ಮಣರದಲ್ಲ. ಮತ್ತೆ ಯಾವ ಮಗುವಿನದು?....ಆ ಸದ್ದನ್ನು ಕೇಳುತ್ತಲೂ ಇಬ್ಬರೂ 'ಬನ್ನಿರಿ! ಮಂತ್ರ ಹೇಳಿರಿ ಬೇಗ' ಎಂದು ಕೂಗುತ್ತಾ, ಹನುಮಂತನ ರಟ್ಟೆಯನ್ನು ಹಿಡಿದುಕೊಂಡು ಒಳನುಗ್ಗಿದರು.

'ಇಷ್ಟೇನೆ! ನನ್ನ ಮಂಕುಬುದ್ಧಿಗೆ ಮಣ್ಣು ಹಾಕಬೇಕು..ಈತನ ಮಗುವಿಗೆ ಚೇಳು ಕಡಿದಿದೆ, ಅಲ್ಲ, ಕುಟುಕಿದೆ! ಹೌದು, ಪೋಲೀಸಿನವನ ಮಗುವನ್ನೂ ಕೂಡ ಚೇಳು ಕುಟುಕುತ್ತದೆ, ಕುಟುಕದೆ ಇರುವುದಿಲ್ಲ.... ನನ್ನ ಬೋರ್ಡ್ ನೋಡಿಕೊಂಡು ಈತ ಇಲ್ಲಿಗೆ ಕರೆತಂದಿದಾನೆ. ಪಾಪ.. ಚೇಳಿನ ಕೇಸು ಬೋಣಿ ಒಂದಾಗಲಾದರೂ ನಾನು ಇಲ್ಲಿರಲಿಲ್ಲವಲ್ಲಾ.. ಏಕೋ, ಬೋರ್ಡ್ ತೂಗು ಹಾಕಿದ ಘಳಿಗೆ ಚೆನ್ನಾಗಿಲ್ಲ......ಅದನ್ನು ಹಾಕುವುದೇ ಬೇಡವಾಗಿತ್ತು....ಇನ್ನೇನು? ಸಿನಿಮಾಗೆ ಸಾಕಾದಷ್ಟು ಕಾಸು ಭೀಮರಾಯರೇ ಕೊಡುತ್ತಾರೆ....ಅಂತು ಈಗ ಈ ಮಗುವಿಗೆ ಬೆಳ್ಳುಳ್ಳಿ ತಿಕ್ಕದೆ ವಿಧಿಯಿಲ್ಲ' ಎಂದುಕೊಳ್ಳುತ್ತಾ ಹನುಮಂತ ಬೇಗ ಬೇಗ ಮಡಿ ಉಟ್ಟು ಮಂತ್ರ ಸಿದ್ಧಮಾಡಿ, ಉಪ್ಪು ತೆಗೆದು ಪುಡಿಮಾಡಿ, ವಿಭೂತಿ ಹಚ್ಚಿಕೊಂಡು, ಬೆಳ್ಳುಳ್ಳಿ ಆರಿಸಿ, 'ತಾಯಿ! ಇಲ್ಲಿ ತನ್ನಿ! ಮಗು ಹಿಡಿದು ಕೊಂಡು ಇಲ್ಲಿ ಕುಳಿತುಕೊಳ್ಳಿ' ಎಂದು ಚಿಕಿತ್ಸೆಗೆ ಸಿದ್ಧನಾದ. ರಾಮ ಲಕ್ಷ್ಮಣರಿಬ್ಬರೂ ಎದುರುಗಡೆ ಬಂದು ಕುಳಿತು ತಮಾಷೆ ನೋಡುತ್ತಾ ಇದ್ದರು. 'ಬೇಗ ಬರಬಾರದಾಗಿತ್ತೇನೋ ಮನೆಗೆ? ನಾನು ಹೇಳಿದೆ ಅವ ರಿಗೆ, ಇನ್ನೆಲ್ಲಿಗಾದರೂ ಕರೆದುಕೊಂಡು ಹೋಗಿ, ಅಂತ. ಅವರು ನಿನಗೋ ಸ್ಕರವೇ ಇಷ್ಟು ಹೊತ್ತು ಕಾದರು. ಪಾಪ, ಮಗು ಲಬಲಬ ಅಂತ ಒದ್ದಾ ಡುತ್ತಿದೆ' ಅಂದರು ಸುಂದರಮ್ಮನವರು.

ಸಣ್ಣ ಕೂಸು. ಎಂಟು ತಿಂಗಳ ಹಸುಳೆ. ದೊಡ್ಡ ಗಂಟಲು. ದೊಡ್ಡ ಚೇಳಿದ್ದಿರಬೇಕು....ಪಕ್ಕದಲ್ಲಿ ನಿಂತಿದ್ದ ಇಬ್ಬರೂ, 'ರಾಯರೇ, ಮಗುವಿಗೆ ಚೇಳು ಕಡಿದಾಗ....' ಅಂತ ಯಾವುದೋ ಕಥೆ ಪ್ರಾರಂಭಿಸಿದರು. ಆದರೆ,

ಹನುಮಂತ, ' ರೀ ! ' ಕುಟುಕಿದಾಗ ', ಅನ್ನಬೇಕಂತೆ— ' ಕಡಿದಾಗ ' ಅಂತ ಹೇಳುವುದು ಸರಿಯಲ್ಲ. ' ಎಂದು ಅವರನ್ನು ತಿದ್ದಿದ. ಆಗ ಇವರು, ' ಅಂತು, ಆಗ ನನಗೂ ನನ್ನ ಪಕ್ಕದ ಮನೆಯವನಿಗೂ ಲಡಾಯಿ ಹತ್ತಿಕೊಂಡಿತ್ತು. ಯುದ್ಧವನ್ನ ಮಧ್ಯದಲ್ಲೇ ಬಿಟ್ಟು ಇಲ್ಲಿಗೆ ಓಡಿಬರಬೇಕಾಯಿತು. ಆತ ಏನಾದರೂ ಇಲ್ಲಿಗೂ ನುಗ್ಗಿಬಿಟ್ಟಾನು ! ಹುಷಾರಿ. . . . ನನ್ನ ಎದುರು ಮನೆ ಯಲ್ಲೇ ಒಬ್ಬಾಕೆ ಇದ್ದಾಳೆ, ಮಂತ್ರಹಾಕುತ್ತಾಳೆ. ಆದರೆ, ನಾನು ಅಲ್ಲಿಗೆ ಹೋಗಿದ್ದರೆ ಆ ಚಂಡಾಲ ಆ ಮನೆಗೆ ನುಗ್ಗಿಬಿಡುತ್ತಾನೆ ಎಂಬ ಭಯದಿಂದ ಇಲ್ಲಿಗೆ ಬಂದೆ. ನಿಮ್ಮ ಮನೆಯಲ್ಲಿ ಚೇಳಿನ ಚಿಕಿತ್ಸೆ ಮಾಡುತ್ತೀರಿ ಅಂತ ಇನ್ನೂ ಊರಿನವರಿಗೆ ಗೊತ್ತಿಲ್ಲ. . . . ಆದ್ದರಿಂದ ಅವನು ಇಲ್ಲಿಗೆ ಬರಲಾರ, ಬಹುಶಃ. ಆದರೆ, ನೆಮ್ಮದಿಯಾಗಿರುವುದಕ್ಕಿಲ್ಲ. . . . ಬೇಗ ಬೇಗ ಮಂತ್ರ ಹೇಳಿ ' ಎಂದರು ಹೆದರಿದವನ ಮೈಮೇಲೆ ಹಾವನ್ನು ಹಾಕಿದ ಹಾಗಾಯಿತು, ಹನುಮಂತನಿಗೆ.

ಆಗ, ಉದಾರಶಿರೋಮಣಿಗಳು, ' ಹಾಗಾದರೆ ನಾವಿಬ್ಬರೂ ಮನೆ ಮುಂದುಗಡೆ ರಸ್ತೆಯಲ್ಲೇ ನಿಂತಿರೋಣ. ಮನೆಯೊಳಕ್ಕೆ ಆ ಚಂಡಾಲ ನುಗ್ಗುವುದು ಬೇಡ. ಮಗುವಿಗೆ ಮಂತ್ರ ಸರಿಯಾಗಿ ಬೀಳಲಿ. . . . ನಿಮ್ಮ ಜಗಳದ ಕಥೆಯನ್ನ ನನಗೆ ಹೇಳಿ. . . . ಯಾರವರು ಪಕ್ಕದ ಮನೆಯವರು ? ' ಎಂದು ಕೇಳುತ್ತಾ ಅವರು ಇವರನ್ನು ಹೊರಗಿನ ವಸಾರೆಗೆ ಕರೆದುಕೊಂಡು ಹೋದರು.

ಆದದ್ದೇನು ಎಂಬುದನ್ನು ಇವರು ಕೊಂಚವೂ ಸುಳ್ಳು ಬೆರಸದೆ ಹೇಳು-ತ್ತಾರೆಯೇ ? ಸಾಧ್ಯವೆ ? ಎಂದಿಗೂ ಇಲ್ಲ. ಆದ್ದರಿಂದ ಅವರು ಉದಾರ ಶಿರೋಮಣಿಗಳ ಕಿವಿಯಲ್ಲಿ ಏನು ಬೇಕಾದರೂ ಉಸುರಲಿ. . ನಡೆದದ್ದಿಷ್ಟು:

ತೇರಿನ ರಸ್ತೆ; ಹನ್ನೆರಡನೆಯ ನಂಬರು ಮನೆ. ವಾಸ ಪೂರ್ಣಬೋಧ ರಾಯರು; ವಯಸ್ಸು ಸುಮಾರು ೮೩; ಕಸಬು ಕೊಬ್ಬಳ್ಳಿಯಿಂದ ಹೊರ ಬೀಳುತ್ತಿರುವ ' ಬಿಸಿ ಬಿಸಿ ' ಪತ್ರಿಕೆಯ ಬಾತ್ಮಿ ಮತ್ತು ಏಜಂಟುತನ. ಸಂಗಡಲೇ ಅವರ ಸಹಧರ್ಮಿಣಿ; ವಯಸ್ಸು ೩೮. ಹೆಣ್ಣುಮಕ್ಕಳಿಲ್ಲ; ಗಂಡುಮಕ್ಕಳಾಗಲಿಲ್ಲ. ಕೊರಗಿ ಬಾಡಿದ ದೇಹ. ರಾಯರು ಕಟ್ಟು-ಮುಟ್ಟಾದ ಆಸಾಮಿ. . . . . . ಆ ದಿನ ಬೆಳಗಿನದೇ ಅವರು ಹನ್ನೆರಡನೆಯ

ನಂಬರು ಮನೆಯಲ್ಲಿ ಮಾಡಿದ ಚೊಚ್ಚಲು ಅಡಿಗೆ......ದ್ವಾದಶಿ ತಿಥಿ, ಊಟ ಮುಗಿದಾಗಿನಿಂದ ಹಿಂದೆ ವಾಸವಾಗಿದ್ದ ಬೇರೆ ಮನೆಯಿಂದ ತಂದ ಪಾತ್ರೆ ಪದಾರ್ಥಗಳನ್ನು ಇಬ್ಬರೂ ಸೇರಿ ಜೋಡಿಸಿಟ್ಟು, ಸುಸ್ತಾಗಿ ಕುಳಿತಿರುವ ಸಮಯ....ಮಹಿಳಾಸದನದ ರಜತಮಹೋತ್ಸವವನ್ನ 'ಬಿಸಿಬಿಸಿ' ಗೋಸ್ಕರ ನೋಡಿಕೊಂಡುಬರುವುದಕ್ಕೂ ರಾಯರಿಗೆ ಚೈತನ್ಯವಿಲ್ಲದೆ ಇರುವ ಸಮಯ....

'ಆ ದರಿದ್ರ ಬೀದಿಗಿಂತ ಇದೆಷ್ಟೋ ವಾಸಿ, ಅಂದರೆ. ಇನ್ನುಮೇಲಾದರೂ ಅಕ್ಕಪಕ್ಕದವರ ಹಾವಳಿ ಇಲ್ಲದೆ ಹಾಯಾಗಿರೋಣ. ಅಬ್ಬಾ! ಆ ರಾಕ್ಷಸಿ ಸಹವಾಸ ತಪ್ಪಿತಲ್ಲಾ. ನೆರೆ ಅಂದರೆ ಹೊರೆ ಅಂತ ಹಿರಿಯರು ಹೇಳುವುದರಲ್ಲಿ ಏನೂ ತಪ್ಪಿಲ್ಲ, ಅಂದರೆ.........ನಮಗೇನಾಗಬೇಕು. ಬ್ರಾಹ್ಮಣರು ಹೌದೋ ಅಲ್ಲವೋ ಅಂತ ಅಷ್ಟು ತಿಳಿದುಕೊಂಡರೆ ಸಾಕು. ಅವರು ಹೆಂಡ ಕುಡಿಯಲಿ, ಸೊಸೆಗೆ ಬರೆ ಹಾಕಲಿ, ಅತ್ತೆ ಬಾವಿಗೆ ಬೀಳಲಿ, ನಮಗೇನು? ನಮ್ಮ ಕೆಲಸ ನಮಗೆ......ನೀವೂ ಕೂಡ ಇನ್ನುಮುಂದೆ ಆಚೆ ಮನೆ ಈಚೆ ಮನೆ ಹವ್ಯಾಸಕ್ಕೆ ಹೋಗಬೇಡಿ, ಅಂದರೆ. ಸ್ವಸ್ಥವಾಗಿ ಮನೆಯಲ್ಲಿ ಇರಿ.' ಅಂತ ಉಪದೇಶವಾಗುತ್ತಿರುವ ಸಮಯ.

ಹೊಸಮನೆ ಹಿತ್ತಲನ್ನು ಮತ್ತೊಂದು ಸಲ ಸುತ್ತಿ ಬರೋಣ ಎಂದು ಪೂರ್ಣಬೋಧರಾಯರು ಅತ್ತಲಾಗಿ ಪಾದ ಬೆಳೆಸಿರುವ ಸಂದರ್ಭ. ಗೋಧೂಳಿ ಮುಹೂರ್ತ ಕಳೆದು ಅವುಗಳಿಗೆ ಕೊಟ್ಟಿಗೆಗಳಲ್ಲಿ ಹುಲ್ಲುಕಡ್ಡಿ ಹಾಕುವ ಮುಹೂರ್ತ.

ಅಲ್ಲೊಂದು ಎಂಜಲು ದೊನ್ನೆ..ರಾಯರ ಮನೆ ದ್ವಾದಶಿ ಪಾರಣೆಗೆ ಸಂಬಂಧಿಸಿದ್ದಲ್ಲ..ಯಾರ ಮನೆ ಹೆಚ್ಚುಕಟ್ಟಳೆಯದೋ ಯಾರಿಗೆ ಬೆಳಕು? ಮಜ್ಜಿಗೆ ಹುಳಿಯ ಅವಶೇಷಸಹಿತವಾಗಿ ಬಿದ್ದಿದೆ. ಬೆಂಡೆಕಾಯಿಮಜ್ಜಿಗೆ ಹುಳಿ....ಕಾಕಾಸುರನ ಕುತಂತ್ರವಿರಬೇಕು. ರಾಯರು ಥಟಕ್ಕನೆ ಬಗ್ಗಿ, ಮಡಿಯ ಮಾಹಾತ್ಮ್ಯವನ್ನೇ ಮರೆತು, ತಮ್ಮ ವಾಮಹಸ್ತದಿಂದ ದೊನ್ನೆಯನ್ನೆತ್ತಿ ಗೋಡೆಯಾಚೆ ಬಿಸಾಕಿದರು......ಎಸೆದದ್ದು ಎಡಗೈಯಿಂದ; ಗಾಳಿಯ ಹೊಡೆತ ಬೇರೆ—ಎರಡೂ ಕಾರಣಗಳಿಂದ ಹಾಳು ದೊನ್ನೆ ಪಕ್ಕದ ಮನೆ ಹಿತ್ತಲಲ್ಲೇ ಬಿತ್ತು.

ತಕ್ಷಣವೇ ಎರಡು ಹಿತ್ತಲುಗಳಿಗೂ ನಡುವೆ ಇದ್ದ ಗೋಡೆಯ ಮೇಲುಭಾಗದಲ್ಲಿ ಒಂದು ವನಿತಾ ಶಿರಸ್ಸು ಕಾಣಿಸಿಕೊಂಡಿತು. ತಕ್ಕಮಟ್ಟಿಗೆ ಭಯಂಕರವಾಗಿಯೇ ಇತ್ತು. 'ದೊನ್ನೆ ಅನ್ನುವುದು ಪಾಯಸ-ಗೀಯಸ ಕುಡಿಯುವುದಕ್ಕೇ ಹೊರತು, ಪಕ್ಕದ ಮನೆಯವರ ಮೇಲೆ ಎಸೆಯು-ವುದಕ್ಕಲ್ಲ ಜ್ಞಾಪಕವಿರಲಿ!' ಎಂದಿತು, ಕರ್ಕಶ ಧ್ವನಿಯಲ್ಲಿ. ತಾನು ಎಸೆದ ದೊನ್ನೆಯಲ್ಲಿ ಯಾರೂ ಪಾಯಸ ಕುಡಿದಿರಲಿಲ್ಲವೆಂದೂ, ಅದರಲ್ಲಿ ಯಾರೋ ಒಬ್ಬರು ಬೆಂಡೆಕಾಯಿ-ಮಜ್ಜಿಗೆ ಹುಳಿ ಹಾಕಿಸಿಕೊಂಡು ಕುಡಿ-ದಿರುವರೆಂದೂ ಹೇಳಿ, ಗೀಯಸ ಅಂದರೇನು? ಅದನ್ನು ಮಾಡುವ ವಿಧಾನ ವೇನು? ಎಂಬುದನ್ನು ಆಕೆಯಿಂದ ಕೇಳಿ ತಿಳಿದುಕೊಳ್ಳುವುದಕ್ಕಾಗಿ ಪೂರ್ಣ ಬೋಧರಾಯರು ಗೋಡೆ ಹತ್ತಿರಕ್ಕೆ ಸರಿದರು······ಆಗ ಪಕ್ಕದ ಮನೆ ಆಕೆ ನಿಂತಿದ್ದ ಪೀಪಾಯಿ ಉರುಳಿತು. 'ಅಯ್ಯೋ!' ಎಂದು ವಿಕಾರವಾಗಿ ಕಿರಿಚುತ್ತಾ ಆಕೆ ಬಿದ್ದಳು!

ಪೂರ್ಣಬೋಧರಾಯರು ಏನೂ ಅರಿಯದವರ ಹಾಗೆ ತಮ್ಮ ಮನೆ ಯೊಳಕ್ಕೆ ನುಗ್ಗಿ ಸಹಧರ್ಮಿಣಿ ಕುಳಿತಿದ್ದ ತೂಗುಮಂಚದಲ್ಲಿ ತಾವೂ ಮಂಡಿಸಿ ಬೆವರೊರಸಿಕೊಂಡರು. ಆಗ ಮುಂದಿನ ಬಾಗಿಲನ್ನು ಯಾರೋ ಬಲವಾಗಿ ನೂಕಿದ ಹಾಗಾಯಿತು. 'ಗಾಳಿ ಇರಬೇಕು; ಸುಮ್ಮನೆ ಕುಳಿತು-ಕೊಳ್ಳಬಾರದೆ?' ಎಂದಳು ಅರ್ಧಾಂಗಿ. ಆದರೆ, ಬಾಗಿಲು ತೆರೆದಾಗ ತಿಳಿ ಯಿತು ಬಂದಿದ್ದವರು ನೆರೆಮನೆ ಕಾಲಭೈರವ, ಪೋಲೀಸ್ ಕಾನಸ್ಟೇಬಲ್ ಶಾಮಣ್ಣನವರು, ನಂಬರು ೩೬೧, ಎಂಬುದು. ಅವರು ಪೋಲೀಸ್ ಸ್ಟೇಷನ್ ಕಡೆ ಹೋಗುವುದಕ್ಕಾಗಿ ಉಡಿಗೆ ತೊಡಿಗೆಗಳನ್ನು ಹಾಕಿಕೊಳ್ಳುತ್ತಿದ್ದರು ಅಂತ ಕಾಣುತ್ತದೆ. ಹಿತ್ತಲಲ್ಲಿ ತನ್ನ ಸಂಸಾರ ಬಿದ್ದದ್ದೂ, ಪಕ್ಕದ ಮನೆ ರಾಯರು ಆಕೆಯನ್ನು ಗದರಿಸಲು ಗುಟುರು ಹಾಕುತ್ತಾ ಗೋಡೆಹತ್ತಿರಕ್ಕೆ ನುಗ್ಗಿದ್ದೂ, ಎಂಜಲೆಸೆದದ್ದೂ ಗೊತ್ತಾಗಿ, ಅಲಂಕಾರ ಪೂರ್ತಿಯಾಗದಿದ್ದರೂ ಅವರು ಬಿರುಗಾಳಿಯ ಹಾಗೆ ಹನ್ನೆರಡನೆಯ ನಂಬರು ಮನೆಗೆ ಪ್ರವೇಶ ಮಾಡೇಬಿಟ್ಟರು. ರುಮಾಲು ಧರಿಸಿರುವರಾದರೂ ಹೊರ ಅಂಗಿ ಇನ್ನೂ ಮೈಮೇಲೆ ಬಿದ್ದಿಲ್ಲ; ಬೆಲ್ಟಿಗೆ ಬಿಗಿ ಸಾಲದು; ಒಂದು ಕಾಲಿಗೆ ಬೂಟು ತೊಟ್ಟಿಲ್ಲ. ಇಂತಹ ವಿಲಕ್ಷಣ ಪ್ರಾಣಿಯನ್ನು ನೋಡಿ ಕೊಂಚ ಹೊತ್ತು

ನಗುವುದಕ್ಕೂ ಕೂಡ ರಾಯರಿಗೆ ಅವಕಾಶ ಕೊಡದೆ, ಶಾಮಣ್ಣನವರು ಮಾತು ತೆಗೆದರು.

'ಯಾಕಯ್ಯ, ನಮ್ಮ ಮನೆಯವರ ಮೇಲೆ ಎಂಜಲು ದೊನ್ನೆ ಎಸೆದದ್ದು?....'

'ಇಲ್ಲ....ಸ್ವಾಮಿ....ತಾವು ಯಾರೋ ಗೊತ್ತಾಗಲಿಲ್ಲ..ನೆರೆ ಮನೆಯವರು ಬ್ರಾಹ್ಮಣರು ಅಂತ ಅಷ್ಟು ಗೊತ್ತು....ಬನ್ನಿ..ಕುಳಿತುಕೊಳ್ಳಿ....ನಾನು ಆ ದೊನ್ನೆಯನ್ನ....'

'ಏನಯ್ಯಾ ಇದು? ಬೆಬ್ಬೆಬ್ಬೇ ಅಂತ ಬೊಗಳುತ್ತೀಯಾ? ನಿನಗೇನಾದರೂ ಬುದ್ಧಿಗಿದ್ಧಿ ಸೆಟ್ಟಗಿದೆಯೋ....ನಿನ್ನ ಹೆಸರೇನಯ್ಯಾ?'

'ಅಯ್ಯೋ! ನನ್ನ ಹೆಸರು ಕಟ್ಟಿಕೊಂಡು ಈಗ ಆಗಬೇಕಾದ್ದೇನು? ನಡೆದದ್ದು ನಡೆದೇ ಹೋಯಿತು....ಆಚಾರ್ಯ....ಪೂರ್ಣಬೋಧರಾಯರು, ಅಂತಾರೆ ನನ್ನನ್ನ—'

'ಅಲ್ಲಯ್ಯಾ! ಯಾಕ್ರೀ ಎಂಜಲೆಸೆದಿರಿ ಅಂತ ಅವಳು, ಪಾಪ, ಅಷ್ಟು ಒಳ್ಳೆಯ ಮಾತಿನಲ್ಲಿ ಕೇಳಿದರೆ, ಧಾಂಡಿಗ ನೀನು, ಗೋಡೆ ಹತ್ತಿರಕ್ಕೆ ಬಂದು ಅವಳನ್ನು ಬೆದರಿಸುತ್ತೀಯಾ? ನಾಚಿಕೆಯಾಗುವುದಿಲ್ಲವೇನೊ,ನರಕಾಸುರಾ! ಆಕೆ ಪಾಪ ಕೆಳಗೆ ಬಿದ್ದು ಬಲಗಾಲು ಉಳುಕಿದೆಯಲ್ಲಾ, ಈಗ ಏನು ಮಾಡೋದು? ರಾತ್ರಿ ರೆಯಿಲಿಗೆ ತವರುಮನೆಗೆ ಹೊರಡುತ್ತೇನೆ ಅಂತ ಒಪ್ಪಿಕೊಂಡಿದ್ದವಳ ಪ್ರಯಾಣವೇ ನಿಂತುಹೋಯಿತಲ್ಲಾ ನಿನ್ನಿಂದ.... ಬಾರಯ್ಯ ಇಲ್ಲಿ, ಬಕಾಸುರಾ! ಏನು! ಮನೆಯೊಳಗೆ ಅವಿತುಕೊಳ್ಳೋಣ ಅಂತ ಅತ್ತಕಡೆ ಓಡುತ್ತೀಯಾ?....ಬಾರೋ ಇಲ್ಲಿ....ನಿನ್ನ ಹುಟ್ಟಿದ ಹಬ್ಬ....'

'ಬೇಡ, ಬೇಡ! ನನ್ನನ್ನ ಕೊಕಬೇಡ. ನಿನ್ನ ರುಮಾಲು ಹಾರಿಸಿ, ನಿನ್ನ ಮೀಸೆ ಕಿತ್ತು....ಅಲ್ಲಾ, ಎಲ್ಲಿಗೋ ಎಸೆದಾಗ ಎಲ್ಲಿಗೋ ಬಿತ್ತು ಅಂದರೆ ತಲೆಯೆಲ್ಲಾ ಹರಟುತ್ತೀಯಾ;......ಗಂಡಾ! ನಿನ್ನ ವೈಕುಂಠ ಸಮಾರಾಧನೆ....'

'ಏನಂದೆ?'

'ನಿನ್ನ ಹಲ್ಲುದುರಿಸಿ....'

'ಮುಚ್ಚೋ ಚಂಡಾಲ!'

'ಚಂಡಾಲ ನಿನ್ನ ತಾತ....'

ಮಾತಿಗೆ ಮಾತು; ದೃಷ್ಟಿಗೆ ದೃಷ್ಟಿ; ಮುಷ್ಟಿಗೆ ಮುಷ್ಟಿ. ಗುಡುಗು, ಮಿಂಚು. ಬೈಗಳ ಮಳೆ.

ಫಟ್....ಫಟ್....ಕಪಾಳಗಳು ಕೆಂಪಾದುವು. ಮೂಗಿನ ಅಗಲ ಇಮ್ಮಡಿಸಿತು. ಫಟ್....ಬಾಸುಂಡೆ....ಲತಾಪತಿ....,ಚಂಡಾಲಾ!' ....ಫಟ್..ಬೋಂಡ, ಕೆಂಗಡುಬು....'ಅಯ್ಯೋ!'..ಫಟ್ ಫಟ್.. 'ಕೊಂದು ಹಾಕಿಬಿಡುತ್ತೇನೆ'....ಫಟ್....

ಮಹಾಜನಗಳ ಆಗಮನ..ಟೆಗರುಗಳನ್ನು ಅಗಲಿಸುವ ಪ್ರಯತ್ನ! 'ಏನ್ರಿ ಇದು....ದೊಡ್ಡವರಾಗಿ, ಇತರರು ಜಗಳ ಆಡಿದರೆ ನಿಲ್ಲಿಸಬೇಕಾದವರು'......ಫಟ್....ಅಯ್ಯೋ!....'ಬನ್ರಿ, ಇಲ್ಲಿ'..'ಸಾಕು, ಸುಮ್ಮನಿರ್ರಿ' ಧಬ್..ಹಾಳಾದವನೇ..ಫಟ್....

ಆಗ, ೩೬೧ ನೇ ನಂಬರ ಗೃಹಿಣಿ, ಬಲಗಾಲ ಉಳುಕಿನಿಂದ ನರಳುತ್ತಿದ್ದ ಮಹಿಳಾಮಣಿ ದೊಂಬಿ ನಡೆಯುತ್ತಿದ್ದ ಕಡೆಗೆ ಅಳುತ್ತಾ ಓಡಿ ಬಂದಳು. ತನ್ನ ಗಂಡನ ಎಡಗೈಯನ್ನು ಹಿಡಿದು ಎಳೆಯುತ್ತಾ, 'ಬಿಡಿ, ಅಂದರೆ, ಆ ಪಾಪಿಯನ್ನು ನೀವ್ರ ಯಾಕೆ ಹೊಡೆಯಬೇಕು, ದೇವರಿದ್ದಾನೆ ನೋಡಿಕೊಳ್ಳುತ್ತಾನೆ, ಮನೆಗೆ ಬನ್ನಿ ಅಂದರೆ ಕೂಸಿಗೆ ಚೇಳು ಕಚ್ಚಿದೆ, ಚೇಳು, ಕೂಸಿಗೆ.. ಚೇಳು....ಬನ್ನಿ ಅಂದರೆ....ದೊಡ್ಡ ಚೇಳು....ಇವರ ವಿಷಯ ನಾಳೆ ಆದರೂ ಆಯಿತು..ಸದ್ಯಕ್ಕೆ ಮಗುವನ್ನು ನೋಡಿ, ಚೇಳನ್ನು ಸಾಯಿಸಿ.' ಎಂದು ಒಂದೇ ಸಮನೆ ಕಿರಿಚಿದಳು, ಕರ್ಕಶ ಧ್ವನಿಯಲ್ಲಿ!

'ಈಗ ಸಾಯಿಸಿಬಿಡುತ್ತೇನೆ' ಎಂದು ಆಕೆಗೆ ಉತ್ತರ ಹೇಳುತ್ತಾ ಶಾಮಣ್ಣನವರು ಪೂರ್ಣಬೋಧರಾಯರ ತಲೆಬುರುಡೆಯ ಮೇಲೆ ಬಲವಾಗಿ ಕುಟ್ಟಿದರು. ಆಗ, ರಾಯರಿಗೆ ಸಾವಿರಾರು ನಕ್ಷತ್ರಗಳು ಒಟ್ಟಿಗೆ ತಮ್ಮ ತಲೆಯೊಳಗೆ ಬೆಳಗಿದಂತೆ ಭಾಸವಾಯಿತು. ಬಂದ ಕೋಪದಲ್ಲಿ ರಾಯರು 'ಎಲ್ಲಿ ಹೋಗುತ್ತೀಯೋ, ಪಿಶಾಚೀ' ಅಂತ ಅರಚುತ್ತಾ ೩೬೧ ರ ಬೆನ್ನೆಲುಬಿನ ಮಧ್ಯಭಾಗದಲ್ಲಿ ತಮ್ಮ ವಜ್ರಮುಷ್ಟಿಯಿಂದ ಒಂದು ಬಿಗಿದರು.. 'ಹೌ......' ಎಂದು ವಿಲಕ್ಷಣವಾಗಿ ಊಳಿಡುತ್ತಾ ಶಾಮಣ್ಣನವರು ತಮ್ಮ ಮನೆ ಕಡೆ ಓಡಿದರು.

ಮಹಾಜನಗಳೆಲ್ಲರೂ 'ಬಿಸಿಬಿಸಿ' ಬಾತ್ಮಿಯನ್ನು ಮುತ್ತಿದರು. ಅವರನ್ನು ಒತ್ತಿಹಿಡಿದು ತಳ್ಳಿ ಮನೆಯೊಳಕ್ಕೆ ಸೇರಿಸಿ, ನೀರು-ಮಜ್ಜಿಗೆ ಕುಡಿಸಿ, ಮಲಗಿಸಿದರು. 'ಹೊರಗೆ ಬಿಡಬೇಡಿ, ಅಮ್ಮಾ, ಹುಷಾರಿನಿಂದ ನೋಡಿಕೊಳ್ಳಿ........ಬಿಟ್ಟರೆ ಖೂನಿ ಮಾಡುತ್ತಾರೆ, ಅಥವಾ, ಖೂನಿ ಆಗುತ್ತಾರೆ, ಅಷ್ಟೆ.' ಎಂದು ಆಕೆಗೆ ಎಚ್ಚರಿಕೆ ಕೊಟ್ಟು, ಅವರೆಲ್ಲರೂ ಹೊರಟು ಹೋದರು. ಅಂದರೆ, ನೆಟ್ಟಗೆ ತಮ್ಮ ತಮ್ಮ ಮನೆಗಳಿಗೆ ಹೋಗಲಿಲ್ಲ; ತಾವು ಕಂಡ ಕದನವನ್ನು ಕುರಿತು ಮಾತನಾಡುತ್ತಾ ಮೂಲೆ ಮೂಲೆಯಲ್ಲಿ ನಿಂತರು. ಅನೇಕರಿಗೆ ಆನಂದಕ್ಕಿಂತ ಅಸಮಾಧಾನವೇ ಹೆಚ್ಚು. ಮೊದಲಿಂದಲೂ ನೋಡಲಿಲ್ಲವಲ್ಲಾ ಎಂದು ಕೆಲವರು ವ್ಯಸನಪಟ್ಟರು; ಒಬ್ಬರನ್ನಾದರೂ ಆಸ್ಪತ್ರೆಗೆ ಸಾಗಿಸಬೇಕಾಗಿತ್ತು ಅಂತ ಹಲಕೆಲವರ ಅಭಿಪ್ರಾಯ; ಏಕಾದಶಿಯಂದು ಮಾರಾಮಾರಿ ನಡೆದಿದ್ದರೆ ಹಸಿದ ಹುಲಿಯಂತೆ ರಾಯರು ೩೬೧ ರ ಮೇಲೆ ಬೀಳುತ್ತಿದ್ದರು, ಆಗ ಜಗಳಕ್ಕೆ ಇನ್ನೂ ಚೆನ್ನಾಗಿ ಕಳೆಕಟ್ಟುತ್ತಿತ್ತು ಎಂದು ಕೆಲವರ ಮನಸ್ತಾಪ; ಹಾಳು ಚೇಳು ಇನ್ನೊಂದರೆ-ಘಳಿಗೆ ಬಿಟ್ಟು ಅವರ ಮಗು ಹತ್ತಿರಕ್ಕೆ ಬರಬಾರದಾಗಿತ್ತೆ ಅಂತ ಎಲ್ಲರೂ ಶಪಿಸಿದರು. ಬ್ರಾಹ್ಮಣರಿಬ್ಬರು ಹೀಗೆ ರಾಕ್ಷಸರ ಹಾಗೆ ಬೈದಾಡಿ ತಲೆ ಒಡೆದುಕೊಂಡರೆ ಪ್ರಳಯ ಇನ್ನೂ ಹತ್ತಿರ ಬರುವುದಿಲ್ಲವೇ ಎಂದು ಕೆಲವರು ಮುದುಕರು ಒಬ್ಬರನ್ನೊಬ್ಬರು ಕೇಳಿದರು. 'ಸಂದೇಹವೇನು?' ಎಂದು ಒಬ್ಬರಿಗೊಬ್ಬರು ಉತ್ತರ ಹೇಳಿಕೊಂಡರು. ಈ ಹಾಳು ಜಗಳ ನೋಡಿ ಹೆದರಿಕೊಂಡ ಮಕ್ಕಳನ್ನ ಹನುಮಂತರಾಯನ ಗುಡಿಗೆ ಕರೆದುಕೊಂಡು ಹೋಗಬೇಕಲ್ಲಾ ಎಂಬುದು ಮುದುಕಿಯರ ಸಂಕಟ. ದಿನವೂ ಹೀಗಾದರೆ, ಈ ಬೀದಿಯಲ್ಲಿರುವ ಮನೆಗಳಿಗೆ ಬಾಡಿಗೆ ಕಡಿಮೆಯಾಗುವುದೋ ಏನೋ ಎಂದು ಕೆಲವರು ಮಾಲೀಕರು ಗೋಳಿಟ್ಟರು....

ಮಗುವಿನ ಕಿರಲಾಟ ಕಿವಿಗೆ ಬೀಳುತ್ತಲೂ ೩೬೧ ಮನೆಯೊಳಕ್ಕೆ ನುಗ್ಗಿದರು. ಚೇಳಿಗಾಗಿ ತಡಕಾಡಿದರು. ಸಿಕ್ಕಲಿಲ್ಲ. ಮೈ ಬಗ್ಗಿಸಿ ಮಗುವನ್ನೆತ್ತಿಕೊಂಡು ಅವಸರ ಅವಸರವಾಗಿ ಬೀದಿ ಉದ್ದಕ್ಕೂ ಓಡಿದರು. ಮುಂದಿನ ಬಾಗಿಲಿಗೆ ಬೀಗ ಹಾಕಬೇಕಾಗಿದ್ದರಿಂದ ಆಕೆ ಬರುವುದು ಕೊಂಚ ತಡವಾಯಿತು. 'ಎದುರು ಮನೆ ಗುಂಡಮ್ಮನವರ ಹತ್ತಿರ ಹೋಗೋಣ'

ಎಂದು ಆಕೆ ಕೂಗಿಕೊಂಡರೂ ಶಾಮಣ್ಣನವರು ಉದಾರಶಿರೋಮಣಿಗಳ ಮನೆಗೇ ಬಂದರು. ಆಕೆಯೂ ಕೂಡ ಅವರನ್ನು ಹಿಂಬಾಲಿಸಿ ಅಲ್ಲಿಗೆ ಬರಬೇಕಾಗಿ ಬಂತು....

ಒಳಗಿನ ಕೊಠಡಿಯಲ್ಲಿ ಹನುಮಂತನ ಮಂತ್ರಚಿಕಿತ್ಸೆ ಮುಗಿದಿರಲಿಲ್ಲ. ಹನುಮಂತ ತಾನು ಕಲಿಯದ ವಿದ್ಯೆಯನ್ನೆಲ್ಲಾ ಖರ್ಚುಮಾಡಿದ! ಬೆಳ್ಳುಳ್ಳಿ ಉಪ್ಪು ತಿಕ್ಕಿದ. ಸಕ್ಕವನ್ನೂ ಬೆರೆಸಿ ನೋಡಿದ. ಚೇಳಿನ ವಿಷ ಇಳಿಯಲೇ ಇಲ್ಲ. ಗುಂಡ ಉಪದೇಶಿಸಿದ ಮಂತ್ರವನ್ನು ಬರೆದುಕೊಂಡಿದ್ದ ಕಾಗದದ ತುಂಡಿಗಾಗಿ ತುಂಬಾ ಹೊತ್ತು ಪರದಾಡಿದ. ಕಡೆಗೆ, ತಾನೇ, ಆಂಜನೇಯನ ಕುಂಕುಮದ ಪ್ರಭಾವದಿಂದ, ಒಂದು ಶ್ಲೋಕವನ್ನು ಮಾಡಿ, ಗಟ್ಟಿಯಾಗಿ ಜಪಿಸಿದ:

**ದೊಡ್ಡ ವೃಶ್ಚಿಕಃ | ಬಾಲಂ ಕುಟುಕುಟುಃ**
**ಸಣ್ಣ ಕೂಸಸ್ಯ | ನೋವಂ ಬಿಡುಬಿಡುಃ**

ಹತ್ತು ಹದಿನೈದು ಸಲ ಈ ಮಂತ್ರವನ್ನು ಪ್ರಯೋಗಿಸಿದ. 'ಧಾಂ.. ಧೋಂ..ಧೀಂ..ಧಗಾಡಿ ಧೋಂ..' ಎಂದೆಲ್ಲಾ ಆರ್ಭಟಿಸಿದ. 'ವಾತಾತ್ಮಜಂ ವಾನರಯೂಥ ಮುಖ್ಯಂ' ಅಂತ ಗೋಗರೆದ. ಚೇಳು ಜಗ್ಗಲೇ ಇಲ್ಲ. ಹಿತ್ತಲ ಬಾಗಲಿಂದ ಓಡಿಹೋಗೋಣವೇ ಅನ್ನಿಸಿತು....

ಬರಬರುತ್ತಾ ಮಗುವಿನ ಸಂಕಟ ಹೆಚ್ಚಾಯಿತು. ಕಣ್ಣುಗುಡ್ಡೆಗಳು ಎದ್ದು ನಿಂತುವು. ಕೈಕಾಲು ಸೆಳೆತ ಪ್ರಾರಂಭವಾಯಿತು. ಮಗುವನ್ನು ಮಡಿಲಲ್ಲಿ ಮಲಗಿಸಿಕೊಂಡಿದ್ದ ತಾಯಿ, 'ನೀವು ಶುದ್ಧ ಮೋಸಗಾರರಿರಬೇಕು!' ಎಂದರು.

ಅಷ್ಟು ಹೊತ್ತಿಗೆ ಸರಿಯಾಗಿ, ಶಾಮಣ್ಣ–ಆನಂದರಾವ್ ಮಾತುಕತೆ ಮುಗಿಯಿತು. 'ಇವನ ಚಿಕಿತ್ಸೆ ಇನ್ನೂ ಮುಗಿದಿಲ್ಲವೆ? ಮಗು ಅಳುತ್ತಾ ಇದೆಯಲ್ಲಾ!' ಎಂದು ಆಶ್ಚರ್ಯಪಡುತ್ತಾ ಉದಾರಶಿರೋಮಣಿಗಳು ಒಳಗೆ ಬಂದರು. ಅವರ ಹಿಂದೆಯೇ ೩೬೧ ಬಂದರು. 'ಇವರಿಗಿಂತ ಎದುರು ಮನೆ ಮುಗುಕಿ ಸಾವಿರ ಪಾಲು ವಾಸಿ' ಎಂದು ಬೈಯುತ್ತಾ ಆಕೆ ಎದ್ದಳು.

'ಈ ಮಗುವನ್ನ ಯಾವುದೂ ಕಚ್ಚಿಲ್ಲ, ಅಪ್ಪಾ! ಹೊಟ್ಟೆನೋವಿಂದ ಅಳುತ್ತಾ ಇರುವ ಹಾಗೆ ಕಾಣುತ್ತದೆ; ಅಥವಾ, ಯಾವುದಾದರೂ ಕಚ್ಚಿ

ದ್ದರೂ ಹೇಳಿರಲಾರದು' ಎಂದು ಹನುಮಂತ ನೆಪ ತೆಗೆದು ತನ್ನ ಮಾನಪನ್ನು ಉಳಿಸಲು ನೋಡಿದ. 'ಅಲ್ಲಯ್ಯಾ ನಿನ್ನ ಬೋರ್ಡ್ ನೋಡಿ ಮೋಸ ಹೋಗಿ, ಇಲ್ಲಿಯ ತನಕ ಓಡಿ ಬಂದು, ಇಷ್ಟು ಹೊತ್ತು ತಡೆದು ನಿನಗಾಗಿ ಕಾದು ಕುಳಿತು,.. ನಿನಗೆ ಮಂತ್ರವೇ ಗೊತ್ತಿಲ್ಲ, ತಂತ್ರವೇ ಬರದು! ಶುದ್ಧ ಕಳ್ಳ! ಒಂದಾಣೆ ಬೇರೆ ಕಿತ್ತುಕೊಳ್ಳುತ್ತೀಯಾ ಈ ನಿನ್ನ ಹಾಳು ಬೂಟಾಟಿಕೆಗೆ.. ನಿನ್ನ ಬೋರ್ಡ್ ಕಿತ್ತು ಬೆಂಕಿಗೆ ಹಾಕುತ್ತೇನೆ' ಅಂತ ಹೇಳಿ ಶಾಮಣ್ಣನವರು ಹೊರಟರು. ಹಲಗೆ ತುಂಡನ್ನು ಕಿತ್ತು ಕಂಕುಳಲ್ಲಿ ಇರಿಸಿಕೊಂಡರು 'ನಿನ್ನ ಮೇಲೆ ಪೋಲೀಸು ಕೇಸು ಮಾಡುತ್ತೇನೆ. ಜನಗಳಿಗೆ ಮಂಕುಬೂದಿ ಹಾಕಿ ಹಣ ಕಿತ್ತುಕೊಳ್ಳುತ್ತೀಯಾ?' ಅಂತ ಗರ್ಜಿಸುತ್ತಾ ಬೀದಿಗೆ ಇಳಿದರು. ಬೋರ್ಡನ್ನು ಹಿಂದಕ್ಕೆ ಕೊಟ್ಟು ಹೋಗಿ ಅಂತ ಬಲವಂತಪಡಿಸಲು ತಂದೆಗೂ ಮಗನಿಗೂ ಧೈರ್ಯ ಬರಲಿಲ್ಲ. ನಿಜವಾಗಿಯೂ ಮಂತ್ರಚಿಕಿತ್ಸೆ ಮಾಡಲು ಹನುಮಂತನಿಗೆ ಬರುವುದಿಲ್ಲವಾದ್ದರಿಂದ ಈ ನೆಪದಿಂದಾದರೂ ಅವನು ಅದನ್ನು ಬಿಟ್ಟುಬಿಡಲಿ ಎಂಬುದು ಉದಾರಶಿರೋಮಣಿಗಳ ಅಭಿಪ್ರಾಯ! 'ಭೀಮರಾಯರ ಮನೆ ಪಾಠದ ದುಡ್ಡಿನಿಂದಲೇ ಸಿನಿಮಾ ನೋಡಬಹು ದಾದ್ದರಿಂದ, ಬೆಳ್ಳುಳ್ಳಿ ತಿಕ್ಕಿ ಒಂದೊಂದಾಣೆಯಾಗಿ ಸಂಪಾದಿಸಬೇಕಾಗಿಲ್ಲ ವಲ್ಲಾ; ಅದೂ ಅಲ್ಲದೆ, ಲಕ್ಷ್ಮಣನ ಚರ್ಮದ ಮೇಲೆ ಬೆಳ್ಳುಳ್ಳಿ ಮಾಡಿದ ಪ್ರಭಾವವನ್ನ ಅದು ಇತರ ಮಕ್ಕಳ ಚರ್ಮದ ಮೇಲೆ ಮಾಡುತ್ತಿಲ್ಲ! ಹೀಗಿರುವಾಗ ಸುಮ್ಮನೆ ಬೋರ್ಡನ್ನು ತಗುಲಿಸಿ ಚೇಳಿನ ಕೇಸುಗಳನ್ನು ಮನೆಯಲ್ಲಿ ತುಂಬಿಕೊಂಡರೆ ಪ್ರಯೋಜನವೇ ಇಲ್ಲ' ಎಂದು ಹನುಮಂತನೂ ಯೋಚಿಸಿದ. ಅಂತು, ಊರ್ವಶಿಯ ಶಾಪದಿಂದ ಉಪಕಾರವೇ ಆಯಿತು ಅರ್ಜುನನಿಗೆ.

ಶಾಮಣ್ಣನವರು ರಸ್ತೆಯ ಮೇಲೆ ಕಾಲಿಟ್ಟರೋ ಇಲ್ಲವೋ, 'ಯಾವನೋ ಚಂಡಾಲ, ನಾನೋ ನೀನೋ? ಮೂವತ್ತೊಂದು ವರ್ಷದಲ್ಲ ಒಂದು ಏಕಾದಶಿ ಕೂಡ ತಪ್ಪದೆ ಉಪವಾಸ ಇದ್ದಿದ್ದೇನೆ? ನಾನೆಂಥ ಚಂಡಾ ಲನೋ?' ಎಂದು ಅಬ್ಬರಿಸುತ್ತಾ, 'ಬಂದನಾ ಹುಲಿರಾಯನು!' ಶಾಮಣ್ಣ ನವರು ಕಾಲಿಗೆ ಬುದ್ಧಿ ಹೇಳಿದರು; ಕತ್ತಲೆ, ಯಾರಿಗೂ ಕಾಣಿಸುವುದಿಲ್ಲ ಎಂಬ ಧೈರ್ಯ ಅವರಿಗೆ..ಆದರೆ, ಗಲಾಟೆಯ ಸದ್ದು ಕೇಳಿ ಕಿಟಕಿ ತೆಗಿದು

ಇಣಿಕಿ ನೋಡಿದಾಗ ಕೆಲವರು ಬೀದಿ ದೀಪದ ಬೆಳಕಿನಲ್ಲಿ ಮುಸಕುಮುಸಕಾಗಿ ಕಂಡ ನೋಟವನ್ನು ಅವರು ಇಂದಿಗೂ ಮರೆಯುವ ಹಾಗಿಲ್ಲ.

ಮೊದಲು-ಅಳುತ್ತಿರುವ ಕೂಸನ್ನು ಎತ್ತಿಕೊಂಡು ಹಿಂದೆ ತಿರುಗಿ ನೋಡದೆ ಒಂದೇ ಸಮನಾಗಿ ಓಡುತ್ತಿರುವ ಅಲಂಕಾರಪೂರ್ತಿಯಾಗದ ಶಾಮಣ್ಣನವರು, ನಂಬರು ೩೬೧, 'ಮನೆ ಹತ್ತಿರಕ್ಕೆ ಬಾ! ಮಗುವನ್ನ ಮಲಗಿಸಿ ಬಿಟ್ಟು ಬರುತ್ತೇನೆ, ನಿನ್ನನ್ನ ಸಾಯಿಸುವುದಕ್ಕೆ' ಅಂತ ಆಗಾಗ ಶಾಮಣ್ಣನವರು ಕೂಗಿಕೊಳ್ಳುತ್ತಿದಾರೆ....ಆಮೇಲೆ....ಸಾಕ್ಷಾತ್ ಶ್ರೀಮಾನ್ 'ಬಿಸಿಬಿಸಿ' ಬಾತ್ಮಿ....ಕಡೆಯದಾಗಿ. ಮಿಸೆಸ್ ೩೬೧.. 'ಓಡಿ! ಓಡಿ! ಬಂದುಬಿಟ್ಟರು, ಬಂದುಬಿಟ್ಟರು!' ಅಂತ ಆಕೆ ತನ್ನ ಗಂಡನಿಗೆ ಹುರುಪು ಕೊಡುತ್ತಾ ಓಡಿಸುತ್ತಿದಾಳೆ.

—

ಎಂಟನೆಯ ಅಧ್ಯಾಯ

## ಪೂರ್ಣಬೋಧರಾಯರ ಪೇಪರು

●

ಕಾಸ್ ಈಸ್ಕೊಂಡಿ ಕಸ ಕೊಟ್ಟಿ
ದರ್ಮ ಗಿರ್ಮ ಮೂಲೇಗ್ ಇಟ್ಟಿ
ದುಡ್ಡು ಕೂಡಾಕೋನ್ ಯಾರು ? —ರತ್ನ.

ತಪ್ಪದಾರದು ? ತಿಳಿದು ನೋಡೆ, ತಪ್ಪದಾರದು ?—ಚಿಕದೇವರಾಜ.

●

ಪೂರ್ಣಬೋಧರಾಯರು ಕಾನ್‌ಸ್ಟೆಬಲ್ ಶಾಮಣ್ಣನವರನ್ನು ಅಟ್ಟಿಸಿಕೊಂಡು ಕತ್ತಲಲ್ಲಿ ಓಡಿಹೋದದ್ದನ್ನು ಕಂಡು ಉದಾರಶಿರೋಮಣಿಗಳು 'ನಿಡುಬೆರಳಿಟ್ಟು ನಾಸಿಕಕ್ಕೆ' ಸ್ತಬ್ಧರಾಗಿ ನಿಂತರು. 'ಕೋಪ ಬಂದಾಗ ಹತ್ತರ ತನಕ ಎಣಿಸು ಅಂತಾರೆ ಬ್ರಿಟೀಷು ಜನ! ನಮ್ಮಲ್ಲಿ ನಾವು ಕೋಪ ಬಂದ ಕೂಡಲೇ ಸಹಸ್ರನಾಮ ಹೇಳುವುದಕ್ಕೆ ಪ್ರಾರಂಭಿಸಿಬಿಡುತ್ತೇವೆ. ಆದರೂ ನಮ್ಮ ಕೋಪ ಅಡಗುವುದಿಲ್ಲವಲ್ಲಾ! ಅರೆಹೊಟ್ಟೆ ತಿಂಬುವಾಗಲೇ ಹೀಗಾದರೆ ನಾಳೆ ದೇಶದಲ್ಲೆಲ್ಲಾ ಸಂಪತ್ತು ತುಂಬಿದರೆ, ನಮ್ಮ ಗತಿ ಏನು?' ಎಂದು ಹೇಳುತ್ತಾ, ಅವರು ಹಣೆ ಹೊಡೆದುಕೊಂಡರು. ಹನುಮಂತನಿಗೂ 'ಅಯ್ಯೋ' ಎನಿಸಿತು....ಆದರೆ, ಈ ಜಗಳದಿಂದ ಮುಂದೆ ಅವನಿಗಾಗುವ ಪ್ರಯೋಜನದ ಅರಿವು ಕೊಂಚವಾದರೂ ಇದ್ದಿದ್ದರೆ....ಬೇಡ, ಈಗಲೇ ಅದರ ಪ್ರಸ್ತಾಪ ಬೇಕಿಲ್ಲ....

ಮೆರವಣಿಗೆ ಮುಗಿದು ಮೂರು ಜನರೂ (ಮಗುವೂ ಸೇರಿ ನಾಲ್ಕು ಜನರೂ) ಮನೆ ಸೇರಿದಾಗ ಒಬ್ಬರೂ ಕದನಕುತೂಹಲರಾಗಿರಲಿಲ್ಲ. ಮತ್ತೆ

ಮಾರಾಮಾರಿಯನ್ನು ಮುಂದುವರಿಸಲು ಬೇಕಾದ ಹುರುಪೂ ಹುಮ್ಮಸ್ಸೂ ಓಟದ ಪಂದ್ಯದಲ್ಲೇ ಮುಗಿದುಬಿಟ್ಟಿತ್ತು. ಆದ್ದರಿಂದ, ಶಾಮಣ್ಣನವರು, 'ಈಗ ಮಲಗಿಕೊಳ್ಳೋಣ, ಬೆಳಗಾದ ಮೇಲೆ ಬಾಕಿ ವಿಚಾರ' ಅಂತ ಬಿಳಿ ಬಾವುಟ ಎತ್ತಿದರು. 'ನನಗೂ ಅದೇ ಬೇಕಾಗಿತ್ತು. ಬೆಳಗ್ಗೆ ಎದ್ದ ಕೂಡಲೇ ಮುಯ್ಯಿಗೆ ಮುಯ್ಯಿ ತೀರಿಸುತ್ತೇನೆ' ಅಂತ ಪೂರ್ಣಬೋಧರಾಯರೂ ಹೇಳಿದರು. 'ಈ ಮಗುವನ್ನ ಗುಂಡಮ್ಮನವರ ಮನೆಗೆ ತೆಗೆದುಕೊಂಡು ಹೋಗಿ ಚಿಕಿತ್ಸೆ ಮಾಡಿಸದೆ ಹೋದರೆ ನಮ್ಮ ಮನೆಯಲ್ಲೂ ಪಕ್ಕದ ಮನೆಯಲ್ಲೂ ಇವತ್ತು ರಾತ್ರಿ ಒಬ್ಬರಿಗೂ ನಿದ್ದೆ ಇಲ್ಲ' ಅಂತ ಶಾಮಣ್ಣನವರ ಹೆಂಡತಿ ಜ್ಞಾಪಿಸಿದಳು. ಆದ್ದರಿಂದ, ಉಭಯ ಪಕ್ಷದವರೂ ತಾತ್ಕಾಲಿಕವಾಗಿ ಯುದ್ಧವನ್ನು ನಿಲ್ಲಿಸಲು ಒಪ್ಪಿಕೊಂಡರು.

ಒಂದು ಬಟ್ಟಲು ಹಾಲು ಕುಡಿದು ಮಲಗಿಕೊಂಡಾಗ ಪೂರ್ಣಬೋಧರಾಯರಿಗೆ ಒಳಗಿಂದ ಪಶ್ಚಾತ್ತಾಪವು ಉಕ್ಕಿ ಬಂತು. 'ಈ ದಿನದ ಅವಾಂತರಕ್ಕೆ ಪೀಠಿಕೆ ಹಾಕಿದವನು ನಾನು; ಅವನೇನೋ ಬೈದ, ಬೈಯುವುದೇ ಪೋಲೀಸಿನವನ ಧರ್ಮ ಅಂತ ಅವನು ತಿಳಿದುಕೊಂಡಿದ್ದಾನೆ, ಪಾಪ; ಚಂಡಾಲ, ನರಕಾಸುರ ಅಂತ ಅವನು ಹೆಸರಿಟ್ಟ ಮಾತ್ರಕ್ಕೆ ನಾನು ಏಕೆ ಚಂಡಾಲನಾದೆ? ಛೆ! ಹೀಗೆ ಆಸುರೀ ಸಂಪತ್ತನ್ನೇ ಗಳಿಸುತ್ತಾ ಹೋದರೆ ನನ್ನನ್ನ ಜಯವಿಜಯರು ಬಾಗಿಲಲ್ಲೇ ತಡೆದು ಹಿಂದಕ್ಕಟ್ಟುವುದಿಲ್ಲವೆ? ಅಥವಾ ನಾರದರು ಬಂದು, 'ಇವನು ಕೊಬ್ಬಳ್ಳಿ ಸಂಗೀತ ನಾಟಕ ಸಭೆಯಲ್ಲಿ ಮೂರು ಸಲ ನಾರದ ಪಾರ್ಟು ಮಾಡಿದ್ದಾನೆ, ಪರವಾ ಇಲ್ಲ, ಇವನನ್ನು ಬಿಡಿ' ಅಂದರೂ ಕೂಡ, ದ್ವಾರಪಾಲಕರು ಒಳಕ್ಕೆ ಬಿಡುತ್ತಾರೆಯೋ? ಇನ್ನುಮೇಲೆ ಓಂ ಶಾಂತಿಶ್ಶಾಂತಿಶ್ಶಾಂತಿಃ ಎಂದು ಜಪಿಸುವುದಕ್ಕೆ ನನಗೆ ಅಧಿಕಾರವೆಲ್ಲಿಯದು?' ಎಂದು ಗೋಳಾಡಿದರು!..ತಮ್ಮ ಪತ್ನಿಗೂ ತಿಳಿಯದೆ ಮೆಲ್ಲನೆದ್ದು ಹಿತ್ತಲಬಾಗಿಲು ತೆರೆದು, ಸದ್ದು ಮಾಡದೆ ಗೋಡೆ ಹಾರಿ, ಎಂಜಲು ದೊನ್ನೆಯನ್ನು ಕತ್ತಲಲ್ಲೇ ಕಿಡಕಿ ತೆಗೆದು, ಅದರ ಸಮೇತವಾಗಿ ಮತ್ತೊಮ್ಮೆ ಮನೆಗೆ ಚಂಗನೆ ನೆಗೆದು ಭೂಮಿಯ ಬಸಿರೊಳಗೆ ಅದನ್ನು ಬಚ್ಚಿಟ್ಟರು! ಕೈ ತೊಳೆದು ಮತ್ತೆ ಮಲಗಿದರು..ಕೊಂಚ ಹೊತ್ತಿನ ಮೇಲೆ ಎದ್ದು ಕುಳಿತು ಆಕೆಯನ್ನೂ ಎಬ್ಬಿಸಿ, 'ಇನ್ನು ನಾವು ಈ ಊರಲ್ಲಿದ್ದರೆ

ಸುಖವಿಲ್ಲ; ನಾಟಕದ ಕಂಪನಿಯಿಂದ ತಪ್ಪಿಸಿಕೊಂಡು ಬಂದಿದೇನೆ ಅಂತ ಪ್ರೊಪ್ರೈಟರು ಆಗಲೇ ಪುಕಾರ್ ಹಾಕಿದಾನೆ; ನಾನು ಬಂದ ದಿನವೇ ನೂರು ರೂಪಾಯಿ ಬೆಲೆ ಬಾಳುವ ಡಿರಸ್ಸು ಕಾಣದೆ ಹೋಗಿದೆಯಂತೆ. . . . ಈಗ ಈ ಊರು ಪೋಲೀಸರೊಂದಿಗೂ ಜಗಳ ಕಾದುಬಿಟ್ಟಿದೇನೆ. ನನ್ನ ಪೂರ್ವ ಚರಿತ್ರೆಯನ್ನ ತೋಡಿ ತೆಗೆದರೆ, ಬಂದೀಖಾನೆ ಸಿದ್ಧ. . . . ಬೇಗನೆದ್ದು ಪಾತ್ರೆ ಪದಾರ್ಥ ಕಟ್ಟು' ಎಂದರು. . ಸರಿ! ಬೆಳಗಿನ ಹೊತ್ತು ಐದೂ ಕಾಲಿಗೆ ವಿಚಿತ್ರದುರ್ಗಕ್ಕೆ ಬರುವ ರೆಯಿಲಲ್ಲಿ ಕುಳಿತು ದಂಪತಿಗಳಿಬ್ಬರೂ ಹೊರಟೇೀ ಬಿಟ್ಟರು. . . . ಕುಂಭಕೋಣಕ್ಕೆ! . . . .

ಆಂಜನೇಯನ ಪ್ರಸಾದ ಹಣೆಗೆ ಬೀಳುತ್ತಲೂ ಹನುಮಂತನಿಗೆ ಒಂದರ ಮೇಲೊಂದಾಗಿ ದೈವಾನುಗ್ರಹದ ಚಿಹ್ನೆಗಳು ಕಾಣುತ್ತಲೇ ಇದ್ದುವು. ಭೀಮರಾಯರ, ಅದರಲ್ಲೂ ಮೇಜರ್ ಭೀಮರಾಯರ ಮಗಳಿಗೆ ಪಾಠ ಹೇಳುವ ಭಾಗ್ಯವೊದಗಿತು; ಚೇಳಿನ ಚಿಕಿತ್ಸೆಯ ಬೋರ್ಡನ್ನು ದೇವರೇ ೩೬೧ ರ ಕೈಯಲ್ಲಿ ತೆಗಿಸಿ ಮಾನ ಉಳಿಸಿದರು; 'ಬಿಸಿಬಿಸಿ' ಬಾತ್ಮಿಯೂ ಪತ್ನಿಯೂ ಮೂಟೆ ಕಟ್ಟಿಕೊಂಡು, ಮುಂದಿನ ವಿಳಾಸವನ್ನು ಬಿಟ್ಟು ಹೋಗದೆ, ಪಲಾಯನವಾದರು.

ಮರುದಿನವಲ್ಲ. . ಅದರ ಆಚೆ ದಿನ. . ಬೆಳಗ್ಗೆ ಎಂಟು ಗಂಟೆಗೆ ದೋಸೆ ಕಾಫಿ ಕುಡಿದು ಹನುಮಂತ ಸೊಸೈಟಿಗೆ ಹೋದ. 'ಅಯ್ಯನವರೇ! ತಾವು ಬಂದ ತಕ್ಷಣ ಕರೆದುಕೊಂಡು ಬರಬೇಕೆಂದು ಗೋಳಪ್ಪನವರು ಹೇಳವರೆ!' ಎಂದು ಬಾಗಿಲಲ್ಲೇ ಜವಾನ ಹೇಳಿದ. ಹನುಮಂತ ಸೆಕ್ರೆಟರಿಯವರ ಆಫೀಸ್ ರೂಮಿಗೆ ತಲೆಯಿಡುತ್ತಲೂ, ಗೋಳಪ್ಪನವರು, 'ಬಾರಯ್ಯಾ! ಇನ್ನೇನೂ ಇಲ್ಲ. . ನಿಮ್ಮ ಸಂಸಾರಕ್ಕೆ ಇಪ್ಪತ್ತೇ ರೂಪಾಯಿ ಸಾಲದು ಅಂತ ನನಗೆ ಗೊತ್ತು. ಆದರೆ, ನೀನೂ ನೋಡುತ್ತಾ ಇದೆಯಲ್ಲಾ ನಮ್ಮ ಕಷ್ಟಗಳನ್ನೆಲ್ಲಾ? ಷೇರ್ ಹಣವನ್ನ ಸಾಲದ ಮೊತ್ತದಿಂದ ತೆಗೆದುಕೊಂಡು ಬಾಕಿ ಕೊಡಿ ನಮಗೆ ಅಂತ ಅರ್ಜಿ ಬರೆಯುವ ಮೆಂಬರುಗಳೇ ಹೆಚ್ಚು! ಸಾಲ ಎಲ್ಲರಿಗೂ ಬೇಕು; ಕಂತು ಕಟ್ಟುವವನು ಒಬ್ಬನೂ ಇಲ್ಲ' ಅಂತ ಪ್ರಾರಂಭಿಸಿದರು. ಆಗ ಹನುಮಂತ, 'ನೀವು ಈಗ ಕೊಡುತ್ತಿರುವ ಸಂಬಳ ಸಾಲದು ಅಂತ ನಾನು ಹೇಳಲಿಲ್ಲವಲ್ಲಾ' ಎಂದ. 'ನೀನು ಹೇಳಬೇಕೆ? ನನಗೆ ಗೊತ್ತಾಗು

ವುದಿಲ್ಲವೆ? ಪಾಪ ನಿಮ್ಮ ತಂದೆ ಹಿಂದೆ ಇದ್ದ ಸ್ಥಿತಿಯೇನು? ಈಗಿನ ಅವಸ್ಥೆಯೇನು? ಮಗನಿಗೆ ಬಹುಮಾನವಾಗಿ ಬಂದ ಬೆಳ್ಳಿ ಕಪ್ಪುಗಳನ್ನೆಲ್ಲಾ ಮಾರಿದಾಗ, ಅವರ ಮನ ಎಷ್ಟು ನೊಂದಿರಬೇಕು?..' ಎಂದು ಗೋಳಪ್ಪನವರು ಮತ್ತೆ ಪ್ರಾರಂಭಿಸಿದರು. 'ಈಗ ಆ ಪುರಾಣವೆಲ್ಲಾ ಯಾಕೆ, ಸಾರ್.... ನನ್ನನ್ನ ಕರೆಸಿದ್ದು ಯಾಕೆ?' ಎಂದು ಹನುಮಂತ ತನ್ನ ಬೇಸರಿಕೆಯನ್ನು ಪ್ರಕಟಿಸಿದ.

'ಇನ್ನೇನೂ ಇಲ್ಲ.... 'ಬಿಸಿಬಿಸಿ'ಯ ಬಾತ್ಮಿ ಮತ್ತು ಏಜಂಟು ಎರಡು ಕೆಲಸಗಳನ್ನೂ ನೋಡುತ್ತಿದ್ದ ಪೂರ್ಣಬೋಧರಾಯರನ್ನ ಪೋಲೀಸ್ ಶಾಮಣ್ಣ ಊರು ಬಿಟ್ಟು ಓಡಿಸಿದಾನೆ.. ಕೊಬ್ಬಳ್ಳಿಯಲ್ಲಿ ಅದರ ಸಂಪಾದಕರು ನನ್ನ ದೊಡ್ಡಪ್ಪನ ಅಳಿಯನ ತಮ್ಮನ ಭಾವಮೈದ. ಆತ ನನಗೆ ಕಾಗದ ಬರೆದಿದಾನೆ, ನಂಬಿಕಸ್ಥನಾದ ಹುಡುಗ ಸಿಕ್ಕರೆ ಕೆಲಸಕ್ಕೆ ನಿಯಮಿಸು, ಅಂತ. ಇದಕ್ಕಾಗಿ ನೀನು ಸೊಸೈಟಿ ಚಾಕರಿಗೆ ತಿಲೋದಕ ಕೊಡಬೇಕಾಗಿಲ್ಲ, ಎರಡನ್ನೂ ಒಟ್ಟಾಗಿ ನೋಡಿಕೊ. ತಿಂಗಳಿಗೆ ಮೂರೋ ನಾಲ್ಕೋ ಕೊಡಿಸುತ್ತೇನೆ' ಅಂದರು. 'ಸಾಲದೆ?' ಎಂದು ಉಪಚಾರದ ಪ್ರಶ್ನೆ ಹಾಕಿದರು! ಸಾಲದು ಎಂದು ಹೇಳುವ ಬಾಯಿ ಉದಾರಶಿರೋಮಣಿಗಳ ಮಗನಿಗುಂಟೆ?

ಮನೆಗೆ ಬರುತ್ತಿದ್ದಾಗ ದಾರಿ ಉದ್ದಕ್ಕೂ ಹನುಮಂತನಿಗೆ ಅದೇ ಚಿಂತೆ. 'ತಾನು ಬಾತ್ಮಿಯಾದಂದಿನಿಂದ 'ಬಿಸಿಬಿಸಿ' ಪತ್ರಿಕೆಯ ಚರಿತ್ರೆಯಲ್ಲಿ ಒಂದು ಸುವರ್ಣಯುಗ ಪ್ರಾರಂಭವಾಗಬೇಕು. ಸುದ್ದಿಗಳೆಲ್ಲವೂ ಕೊಂಚವೂ ತಡವಾಗದೆ, ತಪ್ಪಿಲ್ಲದೆ ಅಚ್ಚಾಗಬೇಕು. ಜನಸಾಮಾನ್ಯದ ವಿದ್ಯಾಭಿವೃದ್ಧಿಗೂ ಅವರಲ್ಲಿ ಸಾಹಿತ್ಯ,ಶಾಸ್ತ್ರ, ವಿಜ್ಞಾನ, ಕಲಾಪ್ರಚಾರಕ್ಕೂ ಬಹು ಮುಖ್ಯ ಸಾಧನವಾದ ವೃತ್ತಪತ್ರಿಕೆಗಳು ಹೆಚ್ಚು ಹೆಚ್ಚಾಗಿ ಮೊಳೆತು, ಚಿಗುರಿ, ಪಲ್ಲವಿಸಿ, ಪ್ರತಿಯೊಂದು ಮನೆಯವರೂ ಅವುಗಳನ್ನು ಸ್ವಾಗತಿಸಿ ತಾಯಂದಿರೂ ತಂಗಿಯರೂ ಮಕ್ಕಳೂ ಮುದುಕರೂ ಸಂತೋಷದಿಂದ ಅವುಗಳನ್ನು ಮತ್ತೆ ಮತ್ತೆ.... ಆಗ, ಅಲ್ಲೇ ಹತ್ತಿರವಿದ್ದ ಒಂದು ಅಂಗಡಿಯಿಂದ 'ಬಿಸಿಬಿಸಿ'ಯ ಒಂದು ಪ್ರತಿಯನ್ನು ಕೊಂಡು ಅದನ್ನೋದಿ ನೋಡುವ ಕುತೂಹಲದಿಂದ ಬಿರುಬಿರನೆ ಮನೆಗೆ ನಡೆದ.

'ಬಿಸಿಬಿಸಿ'ಯನ್ನು ಹನುಮಂತ ಅದುವರೆಗೂ ತಿರುವಿಹಾಕಿರಲಿಲ್ಲ.

ವಾರಪತ್ರಿಕೆ. ೧೬ ಪುಟ. ಕೆಂಪು, ನೀಲಿ, ಹಳದಿ, ಬಣ್ಣಗಳಿಂದ ಕಣ್ಣನ್ನು ಕುಕ್ಕುವ ಹೊದಿಕೆ. ಯಾವಳೋ ಒಬ್ಬಳು ಅವಲಕ್ಷಣದ ಹೆಂಗಸು ಹೊದಿಕೆ ಕಾಗದದ ಮೇಲಿಂದ ಹನುಮಂತನನ್ನು ಅಣಕಿಸಿ ಹಲ್ಲು ಕಿರಿಯುತ್ತಿದ್ದಳು. ಒಮ್ಮೆ ಪುಟಗಳ ಮೇಲೆ ಕಣ್ಣೋಡಿಸಿದ್ದರಿಂದಲೇ ಹನುಮಂತ ಒಂದು ತೀರ್ಮಾನಕ್ಕೆ ಬಂದ: ಇಂತಹ ಪತ್ರಿಕೆಗಳು ಕನ್ನಡ ನಾಡಿನ ಮೂಲೆ ಮೂಲೆಯಲ್ಲಿ ಒಂದೊಂದಿದ್ದರೆ ಸಾಕು, ಎಂದು.

'ಬಿಸಿಬಿಸಿ' ಪತ್ರಿಕೆಯಲ್ಲಿ ಜಾಹಿರಾತುಗಳಿಗೇ ಪ್ರಥಮ ಸ್ಥಾನ; ಸಂಪಾದಕರಿಗೆ ಹಣಸಂಪಾದನೆ ಮುಖ್ಯ ಉದ್ದೇಶವಾದ್ದರಿಂದ, ಜ್ಞಾನ ಪ್ರಚಾರಕ್ಕೆ ಬೇಕಾದ ಸ್ಥಳವನ್ನೂ ಕೂಡ ಅವರು ಬಾಡಿಗೆಗೆ ಕೊಟ್ಟುಬಿಟ್ಟಿದ್ದರು. ಹನುಮಂತ ನಿಧಾನವಾಗಿ ಜಾಹಿರಾತುಗಳನ್ನು ಓದಿ ನೋಡಿದ. ಸಾಕ್ಷರತಾಪ್ರಚಾರ, ವಯಸ್ಕರ ವಿದ್ಯಾಭ್ಯಾಸ, ಇತ್ಯಾದಿ ಚಳವಳಿಗಳನ್ನು ಹೂಡಿ ಬಡಪಾಯಿಗಳಾದ ನಮ್ಮ ದೇಶದ ರೈತರಿಗೆ ಓದು ಕಲಿಸಿ, ನಾವು ಅವರ ಮುಂದಿಡುವುದು ಇಂತಹ ಪತ್ರಿಕೆಗಳನ್ನಾದರೆ, ಅವರಿಗೆ ಓದು ಬರದೆ ಇರುವುದೇ ಮೇಲು ಎಂದು ಅನ್ನಿಸಿತು ಅವನಿಗೆ. ಜನಗಳನ್ನು ಗದರಿಸಿ ಅವರಿಂದ ರೊಕ್ಕ ಕಿತ್ತುಕೊಳ್ಳುವ ಜಾಹಿರಾತುಗಳು ಅನೇಕವಿದ್ದುವು:

**ಸತ್ತ ಮೇಲೆ ನಿಮಗೆ ಎಳ್ಳು ನೀರು ಬೇಡವೆ?**
ಹಾಗಾದರೆ ಕೂಡಲೇ ನಮ್ಮಲ್ಲಿ ವಿಮೆ ಮಾಡಿ ಸಾಯಿರಿ!
ಎಳ್ಳಿನ ಬೆಲೆ ಏರುವ ಸಂಭವವಿದೆ.
ಆದ್ದರಿಂದ ನಮ್ಮಲ್ಲಿ ಪ್ರೀಮಿಯಂ
ಹೆಚ್ಚಿದ್ದರೂ, ನಿಮಗೆ
ಮೋಸವಿಲ್ಲ.

---

**ನೀವು ಎಂದಾದರೂ ಎಡವಿದ್ದುಂಟೋ?**
ಹಾಗಾದರೆ ಹುಷಾರಿ, ಹುಷಾರಿ, ಪರಮ ಹುಷಾರಿ!
ಸದಾ ಸೊಂಟದಲ್ಲಿ ನಮ್ಮ 'ದುರ್ಗಾಮಾರ್ಗಯಂತ್ರ'ವನ್ನು ಧರಿಸಿ!
ನಡೆಯುವಾಗ ನಿಮಗೆ ಯಾವ ತೊಂದರೆಯೂ ಉಂಟಾಗುವುದಿಲ್ಲ.
ಬೆಲೆ ಮೂರೇ ರೂಪಾಯಿ. ದೂರ ಪ್ರಯಾಣಕ್ಕೆ ಸ್ಪೆಷಲ್ ಯಂತ್ರ ೪.ರೂ.

---

ಅಲ್ಲದೆ ಕನ್ನಡವನ್ನು ಓದಬಲ್ಲ ಯಾವುದೇ ವಯಸ್ಸಿನ ಎಳೆಯ ಮಕ್ಕಳನ್ನೂ ಮರುಳುಮಾಡುವ ಕಥೆಗಳ ರೂಪದಲ್ಲಿನ ಜಾಹಿರಾತುಗಳೂ ಇದ್ದುವು :

ಒಂದಾನೊಂದು ದಿನ ಒಂದು ಮುದಿಸಿಂಹವು (ನಮ್ಮ ತಾರುಣ್ಯ ರಕ್ಷಾಮಣಿ ಎಂಬ ದಿವ್ಯೌಷಧವನ್ನು ಸೇವಿಸದೆ ಇದ್ದುದರಿಂದ ಅದು ಮುದಿ ಆಯಿತೋ, ಏನೋ?) ಬೇಟೆಗಾರನು ಹರಡಿದ್ದ ಬಲೆಯೊಳಗೆ ಧುಮುಕಿ (ನಮ್ಮ ಚಾಳೀಸಾಂಜನವನ್ನು ಉಪಯೋಗಿಸಿದ್ದರೆ ಎಂತಹ ಸಣ್ಣ ಕಣ್ಣಿಯ ಬಲೆಯೂ ಕೂಡ ಕಾಣಿಸುವುದು) ತುಂಬಾ ಒದ್ದಾಡಿತು. ಬಲೆಯಿಂದ ತಪ್ಪಿಸಿ ಕೊಳ್ಳಲು ಅದಕ್ಕೆ ಸಾಧ್ಯವಾಗಲಿಲ್ಲ (ನಮ್ಮ ಮದನಕುಠಾರಲೇಹವನ್ನು ಒಂದು ಕಡಲೆಕಾಯಿನಷ್ಟು ಬಾಯಿಗೆ ಹಾಕಿಕೊಂಡಿದ್ದರೆ....ಆದರೆ, 'ರೆ' ಮಾತಿನಿಂದ ಈಗೇನು ಫಲ?) ಒದ್ದಾಡಿದ ಆಯಾಸದಲ್ಲಿ ಅದಕ್ಕೆ ನಿದ್ದೆ ಬಂತು. (ನಾವು ತಯಾರಿಸಿರುವ ಏಕಾದಶಿ ಮಾತ್ರೆಯನ್ನು ನುಂಗಿ ನಿದ್ದೆಯನ್ನೂ ಒದ್ದೋಡಿಸಿರಿ!) ಆಗ ಒಂದು ಸಣ್ಣ ಮೂಗಿಲಿ (ನಮ್ಮ ಥಡಿಯೋಜಿನ್ ಎಂಬ ದ್ರಾವಕವನ್ನು ಒಂದು ಔನ್ಸು ಸೇವನೆ ಮಾಡಿದ್ದರೆ ಅದು ನಿಜ ವಾಗಿಯೂ ಹೆಗ್ಗಣವಾಗುತ್ತಿತ್ತು) ಒಂದು ತನ್ನ ಹರಿತವಾದ ಹಲ್ಲಿನ ಸಹಾಯದಿಂದ (ನಮ್ಮ ಗೋರಿಲ್ಲಾ ಹಲ್ಲುಪುಡಿಯನ್ನೇ ಉಪಯೋಗಿಸಿ; ನಿಮ್ಮ ದಂತಾವಳಿಯೂ ಹೊಸ ಗರಗಸದಂತೆ ಹರಿತವಾಗುವುದು; ಅಪ್ಪಟ ಗೋರಿಲ್ಲಾ ಹಲ್ಲುಗಳನ್ನೇ ಶೇಖರಿಸಿ ಪುಡಿ ಮಾಡಿದೆ....)....ಹೀಗೆ..

ಮತ್ತೊಬ್ಬರು ಬೇರೊಬ್ಬರಿಗೆ ಬರೆದಿರುವ ಕಾಗದವನ್ನೂ ಹೇಳಿರುವ ಮಾತನ್ನೂ ಕದ್ದು ಓದಿ, ಕೇಳಿ ಆನಂದಿಸುವ ಹುಡುಗರನ್ನೂ ಹೆಣ್ಣುಮಕ್ಕ ಳನ್ನೂ ಸೆಳೆಯುವ ಸಲುವಾಗಿ ಪತ್ರಗಳ ರೂಪದಲ್ಲೂ ಸಂಭಾಷಣೆಗಳ ರೂಪ ದಲ್ಲೂ ಹಲಕೆಲವು ಜಾಹಿರಾತುಗಳು 'ಬಿಸಿಬಿಸಿ'ಯಲ್ಲಿ ಪ್ರಕಟವಾಗಿದ್ದುವು. ಸನಾತನಿಗಳೆನಿಸಿಕೊಂಡಿರುವ ಮಹನೀಯರೂ ಪುರಾಣಪ್ರಿಯರಾದ ಮಹಿಳೆ ಯರೂ ಮನಸೋತು ತಮ್ಮ ಅಂಗಡಿಗೆ ಬಂದು ಪದಾರ್ಥಗಳನ್ನು ಕೊಂಡು ಮೋಸ ಹೋಗುವಂತೆ ಧರ್ಮ-ಕರ್ಮ-ವೇದಾಂತಗಳನ್ನು ಬೆರೆಸಿರುವ ಜಾಹಿರಾತುಗಳೂ ಹಲವು! 'ನಾವು ಈ ಲೇಹವನ್ನು ಉದಯಾತ್ಪೂರ್ವ ನಾಲ್ಕು ಗಂಟೆಗೆ ತಣ್ಣೀರು ಸ್ನಾನ ಮಾಡಿದ ನಂತರ ಧನುರ್ಮಾಸದಲ್ಲಿ ಮಾತ್ರ ತಯಾರಿಸುತ್ತೇವೆ. ನಮ್ಮ ಡಿಪೋ ಮಾಲೀಕರು ಶ್ರೀಲಕ್ಷ್ಮೀಪಾದಾ

ರಾಧಕರು; ಯಾವ ಹಬ್ಬ ಹರಿದಿನವನ್ನೂ ಕೊಂಡಾಡದೆ ಬಿಡರು; ಅವರ ಎಂಟು ಮಕ್ಕಳಿಗೂ ಶ್ರೀಮನ್ನಾರಾಯಣನ ಹೆಸರುಗಳನ್ನೇ ಇಟ್ಟಿದಾರೆ. ಅವರ ಮನೆಯಲ್ಲಿ ಹಿರಿಯ ಮಗನನ್ನು ಬಿಟ್ಟು ಉಳಿದ ಗಂಡು ಹುಡುಗರೆಲ್ಲರೂ ದಿನಕ್ಕೆ ಒಂದು ಹೊತ್ತಾದರೂ ತಪ್ಪದೆ ಸಂಧ್ಯಾವಂದನೆ ಮಾಡುತ್ತಾರೆ. ಅನುಮಾನವಿದ್ದರೆ ಕೆಳಗಿನ ವಿಳಾಸಕ್ಕೆ ಬರೆದು ತಿಳಿದುಕೊಳ್ಳಬಹುದು. ಇಷ್ಟು ಆಚಾರಶೀಲರಾದ ಭೂಸುರೋತ್ತಮರು ಆ ಬೀದಿಯಲ್ಲೇ ಇಲ್ಲ. . ಧರ್ಮೋಽಸ್ಮತ್ ಕುಲದೈವತಂ. . . . . . ನೀವು ಇತರ ಅಂಗಡಿಗಳಿಗೆ ಹೋಗಿ ಹಣ ಕೊಟ್ಟರೆ, ಅವರ ದುರಾಚಾರಗಳಿಗೆ ಪ್ರೋತ್ಸಾಹ ಕೊಟ್ಟಹಾಗಾಗುತ್ತದೆ. ಅವರ ಪಾಪಕೂಪದಲ್ಲಿ ನೀವೂ ಬೀಳುವಿರಿ . . . . . ಎಚ್ಚರಿಕೆ . . . . . ನೇಹಸಾನಾಸ್ತಿ ಕಿಂಚನ! . . . ನಮ್ಮ ಜನರು ಗೇಣಿಗೆ ಒಂದು ಗಾದೆ ಹಾಕಿ ಮಾತನ್ನು ನೆಯ್ಯುತ್ತಾರೆ ಎಂಬ ಗುಟ್ಟನ್ನು ತಿಳಿದು 'ಬಿಸಿಬಿಸಿ'ಯಲ್ಲಿನ ಜಾಹಿರಾತುದಾರರೂ ಕೂಡ ತಮ್ಮ ಕಾರ್ಯಸಾಧನೆಗಾಗಿ ಗಾದೆಗಳನ್ನೂ ಧಾರಾಳವಾಗಿ ಅಳವಡಿಸಿಕೊಂಡಿದ್ದರು :

**ಬಾಯಿಬಿಟ್ಟರೆ ಬಣ್ಣಗೇಡು !**

* ನಮ್ಮ ಬೀಗಗಳನ್ನು ಪಯೋಗಿಸಿ, ಮಾನ ಉಳಿಸಿಕೊಳ್ಳಿ.

—

**ಹುಚ್ಚು ಬಿಡದೆ ಮದುವೆ ಆಗದು !**

ಆದ್ದರಿಂದ, ಪ್ರತಿಯೊಬ್ಬರೂ ನಮ್ಮ ಇನ್‌ಸಾನಿಟಿ ಪಿಲ್ಸ್‌ಗಳನ್ನು ಸೇವಿಸಿ,
ಹುಚ್ಚು ಬಿಡಿಸಿಕೊಳ್ಳಿ !
'ಹುಚ್ಚು ಬಿಟ್ಟಿದೆ, ಮದುವೆ ಮಾಡಿಕೊಳ್ಳಬಹುದು' ಎಂಬ
ಸರ್ಟಿಫಿಕೇಟನ್ನು ನಮ್ಮ ಡಾಕ್ಟರ್‌ವರು
ಕೊಡುತ್ತಾರೆ.

—

**ಕತ್ತೆ ಬಲ್ಲುದೇ ಬತ್ತದ ಗುಣವಾ ?**

ನಮ್ಮನ್ನು ವಿಚಾರಿಸಿ; ನಾವು ಉತ್ತಮವೆಂದು ಹೇಳಿದ್ದನ್ನೇ
ಕೊಂಡುಕೊಳ್ಳಿ !

—

**ಕೈ ಕೆಸರಾದರೆ ಬಾಯಿಗೆ ಮೊಸರು !**

ನಮ್ಮ ' ಕಾವೇರಿ ಕೆಸರು ' ಕೊಳ್ಳಿರಿ ! ಅದನ್ನು ಕೈಗೆ ಸವರಿ !
ಬಾಯಿಗೆ ಸೊಗಸಾದ ಮೊಸರು !

—

**ಶೀತರೆ ಬಿದ್ದು ಹೋಗೋ ಮೂಗು ಅಂಟಿಸಿದರೆ ನಿಂತೀತೆ ?**

ನಿಂತೀತು !
ನಮ್ಮ ' ನೋಸ್ಗಂ 'ನ್ನು ಪಕ್ಕದಲ್ಲಿಟ್ಟುಕೊಂಡು ಶೀನಿ !
ಹೆ ದ ರ ಬೇ ಡಿ !

—

ಹೀಗೆ ' ಬಿಸಿಬಿಸಿ 'ಯ ಮುಕ್ಕಾಲು ಮೂರುವೀಸೆ ಜಾಗವನ್ನೂ ಆಕ್ರಮಿಸಿದ್ದ ಜಾಹಿರಾತುಗಳೆಲ್ಲವೂ ಓದುಗರ ದಡ್ಡತನವನ್ನೇ ಅವಲಂಬಿಸಿದ್ದ ಹಾಗೆ ಹನುಮಂತನಿಗೆ ತೋರಿತು. ಕೆಲವು ಜನ ಮಾತ್ರ ಬರಿಯ ಸತ್ಯಾಂಶವನ್ನೇ ಪ್ರಕಟಿಸಿದ್ದರು ! ಅವರ ಸತ್ಯಪ್ರೇಮವನ್ನೂ ಎದೆಗಾರಿಕೆಯನ್ನೂ ಹನುಮಂತ ತುಂಬಾ ಮೆಚ್ಚಿದ. . . . .

**ಇತರ ಅಂಗಡಿಗಳಿಗೆ ಹೋಗಿ ಮೋಸಹೋಗಬೇಡಿರಿ !**
**ನಮ್ಮಲ್ಲಿಗೆ ಬನ್ನಿ !**

—

**ನಮ್ಮ ಅಂಗಡಿಯಲ್ಲಿ ಕೊಂಡ ಮಾಲಿನ ಬೆಲೆಯನ್ನು**

ಇತರರಿಗೆ ಹೇಳಬೇಡಿ
ಅವರು ಖಂಡಿತವಾಗಿಯೂ ನಂಬುವುದಿಲ್ಲ.

—

**ನಮ್ಮ ' ಮೇಣಸಾಂಜನ 'ವನ್ನು ಮೂರು ಸಲ ಲೇಪಿಸಿದರೆ**
**ಪುನಃ ನಿಮ್ಮ ಕಣ್ಣಿಗೆ**
**ಯಾವ ಔಷಧವೂ ಬೇಕಾಗುವುದಿಲ್ಲ !**

—

ಜಾಹಿರಾತುಗಳನ್ನು ಓದಿದ ಮೇಲೆ ಹನುಮಂತನಿಗೆ ಒಂದು ವಿಧವಾದ ಅಸಹ್ಯತೆ ಉಂಟಾಯಿತು. 'ಬಿಸಿಬಿಸಿ'ಯನ್ನು ಸದ್ಗೃಹಸ್ಥರು ಯಾರೂ ಓದಬೇಕಾಗಿಲ್ಲವೆಂಬುದು ಸಂಪಾದಕರ ತೀರ್ಮಾನವೇ? ಕೇವಲ ಕಿವುಡರು, ಹೇಳವರು, ರೋಗಿಗಳು, ಕುರೂಪಿಗಳು, ನಪುಂಸಕರು, ಶಿಥಿಲೇಂದ್ರಿಯರು ಇವರಿಗೆ ಉಪಯೋಗವಾಗುವ ವಿಷಯಗಳನ್ನೇ ತುಂಬಿರುವುದರ ಅರ್ಥವೇನು? ಇಷ್ಟೊಂದು ಮಿತಿಮೀರಿದ ಕಾಮುಕ ಜೀವನವೂ, ಅನೈಸರ್ಗಿಕ ಅಭ್ಯಾಸಗಳೂ ನಮ್ಮ ದೇಶದಲ್ಲುಂಟೆ? ಇರುವುದಕ್ಕಿಂತ ಕಡಿಮೆ ಮುದಿತನವನ್ನು ತೋರಿಸಲಿಚ್ಛಿಸುವ ಮುದುಕರೂ ಮುದುಕಿಯರೂ, ಪೋಕರಿಗಳ ಸಹವಾಸಕ್ಕೆ ಬಿದ್ದು ನಿರ್ವೀರ್ಯರಾಗಿರುವ ಹುಡುಗರೂ, ಪರರನ್ನು ವಶೀಕರಿಸಲು ಯಂತ್ರ-ಮಂತ್ರಗಳನ್ನು ಬಯಸುವ ಕುಟಿಲಮತಿಗಳೂ ತೆರುವ ಹಣದ ಒಂದು ಭಾಗವಾದ ಜಾಹಿರಾತು ವರಮಾನದಿಂದಲೇ 'ಬಿಸಿಬಿಸಿ' ಪತ್ರಿಕೆ ವಾರವಾರವೂ ಅಚ್ಚಾಗುತ್ತಿದೆ ಎಂದು ಮನಗಂಡಾಗ ಹನುಮಂತನಿಗೆ ತುಂಬಾ ವಿಷಾದವಾಯಿತು.

ಜಾಹಿರಾತುಗಳಿಲ್ಲದ ಕಡೆ ಪ್ರಕಟವಾಗಿದ್ದ ಲೇಖನಗಳೂ ವಾರ್ತೆಗಳೂ ಆದರ್ಶಪತ್ರಿಕೆ ಎಂದು ಹನುಮಂತ ಮನಸ್ಸಿನಲ್ಲೇ ಮಂಡಿಗೆ ತಿನ್ನುತ್ತಿದ್ದ ಪತ್ರಿಕೆಗೆ ತೀರ ವಿರೋಧವಾಗಿತ್ತು. ಬಸ್ಸು ಅನಾಹುತಗಳು, ಕಳ್ಳತನದ ಸುದ್ದಿಗಳು, ಖೂನಿ ಸಮಾಚಾರಗಳು;—ಅತ್ಯಾಚಾರ, ವ್ಯಭಿಚಾರ, ದರೋಡೆ, ಮೋಸ, ಅಸಭ್ಯತೆ;—ಮೂಢ ನಂಬಿಕೆಗಳನ್ನು ಬಲಪಡಿಸುವ ಸುದ್ದಿಗಳು; ಕೋಮುವಾರ ವೈಷಮ್ಯಕ್ಕೆ ವಿಷದ ನೀರೆರಚಿ ಬೆಳೆಸುವ ಲೇಖನಗಳು; ವಾರಭವಿಷ್ಯ; ಕುದುರೆ ಜೂಜಿಗೆ ಕಾಸು ಕೊಡುವುದಕ್ಕೆ ಶುಭ ದಿನ; ಹೆಂಡ ಕುಡಿಯುವುದನ್ನು ಪ್ರಾರಂಭಮಾಡಲು ಶುಭ ಮುಹೂರ್ತಗಳು!....

ಥೂ..ಹನುಮಂತ 'ಬಿಸಿಬಿಸಿ'ಯನ್ನು ಬರಬರನೆ ಹರಿದು ಸುರುಳಿ ಸುತ್ತಿ ರಸ್ತೆಯಲ್ಲಿದ್ದ ಡಬ್ಬದೊಳಕ್ಕೆಸೆದ!

ಎಲ್ಲಿಗೆ ಹೋಗುತ್ತೇನೆ ಅಂತ ಅಮ್ಮನಿಗೆ ಹೇಳಲೇ ಇಲ್ಲ. ರಾಮು, ಲಕ್ಷ್ಮಣರು 'ದೊಡ್ಡಣ್ಣಾ' 'ದೊಡ್ಡಣ್ಣಾ' ಅಂತ ಹಿಂದೆ ಬರುವುದನ್ನೂ ಗಮನಿಸಲಿಲ್ಲ. ನೆಟ್ಟಗೆ, ಗೋಳಪ್ಪನವರ ಮನೆಗೇ ನಡೆದ.

'ಸಾರ್! ನೀವು ಹೇಳಿದಿರಲ್ಲಾ..ಆ ಪೇಪರ್ ಸಮಾಚಾರ....

ನನ್ನ ಕೈಲಾಗೋದಿಲ್ಲ ಸಾರ್......ಆ ದರಿದ್ರ ಪೇಪರಿನ ಗೋಜೇ ಬೇಡ ಸಾರ್....ನನಗೆ!'

'ದರಿದ್ರವಲ್ಲಯ್ಯಾ ಅದು; ಮೂರೋ ನಾಲ್ಕೋ ಕೊಡುತ್ತೇನೆ ಅಂತ ಹೇಳಿದ ಮಾತ್ರಕ್ಕೆ ಅದನ್ನ ದರಿದ್ರ ಅನ್ನುತ್ತೀಯಾ? ನನ್ನ ನೆಂಟನಿಗೆ 'ಬಿಸಿ ಬಿಸಿ' ಒಂದರಿಂದಲೇ ತಿಂಗಳಿಗೆ ೫೦೦ ರೂಪಾಯಿ ಲಾಭ ಬರುತ್ತಿದೆ, ಗೊತ್ತೋ? ಇದಲ್ಲದೆ 'ಪ್ರೇಮಲೀಲಾ' ಎಂಬ ಒಂದು ಮಾಸಿಕೆ ಬೇರೆ ಇದೆ....

'ಕಾಸಿನ ಮುಖ ನೋಡಿ ಕೆಲಸ ತಪ್ಪಿಸಿಕೊಳ್ಳುವವನಲ್ಲ, ಸಾರ್, ನಾನು....ಆದರೂ....'

'ಹೆಚ್ಚು ಕೇಳುವುದಕ್ಕೆ ಸಂಕೋಚ ನಿನಗೆ, ನನಗೆ ಗೊತ್ತಿಲ್ಲವೆ? ಇರಲಿ, ನಾನು ನೋಡಿಕೊಳ್ಳುತ್ತೇನೆ......ನೀನು ಕೊಂಚ ಮೆಹನತ್ತು ಮಾಡಿ ಈ ಊರಲ್ಲಿ ೨೫೦ 'ಬಿಸಿಬಿಸಿ', ೧೦೦ ಪ್ರೇಮಲೀಲಾ ವ್ಯಾಪಾರ ವಾಗುವ ಹಾಗೆ ಮಾಡಿಬಿಡು, ನಿನಗೆ ತಿಂಗಳಿಗೆ ೧೫ ರೂಪಾಯಿ ಏಜನ್ಸಿ ಸಂಬಳ, ೫ ರೂಪಾಯಿ ಬಾತ್ಮಿ ಸಂಬಳ ಕೊಡಿಸುತ್ತೇನೆ, ಹೆದರಬೇಡ. 'ಬಿಸಿ ಬಿಸಿ'ಯಲ್ಲಿ ಎಂತೆಂತಹ ಸ್ವಾರಸ್ಯಗಳಿವೆ ಎಂಬುದನ್ನ ನಾಲ್ಕು ಜನಗಳಿಗೆ ಹೇಳು; ಓದಿ ತೋರಿಸು; ಆಸೆ ಹುಟ್ಟಿಸು....ಎಲ್ಲಾ ನಿನ್ನ ಉತ್ಸಾಹದ ಮೇಲಿದೆ....ಆ ಪೂರ್ಣಬೋಧರಾಯರ ಹಾಗೆ ಜಗಳಕ್ಕೆ ಹೋಗಬೇಡ.. ಸಭ್ಯನಾಗಿ ಬದುಕುವುದಕ್ಕೆ ಇದು ಒಳ್ಳೆಯ ಮಾರ್ಗ.'

'ಇಲ್ಲ, ಇಲ್ಲ! ನನಗೆ ಸುತರಾಂ ಇಷ್ಟವಿಲ್ಲ, ಸಾರ್, ಈ ಕೆಲಸದಲ್ಲಿ'

'ಏನು? ಎರಡು ಕೆಲಸಗಳನ್ನೂ ಒಟ್ಟಿಗೆ ನಿಭಾಯಿಸುವುದಕ್ಕಾಗುವು ದಿಲ್ಲ ಎಂಬ ಹೆದರಿಕೆಯೇನು ನಿನಗೆ? ಸುಲಭವಾಗಿ ಮಾಡಬಹುದು. ಬೆಳಗ್ಗೆ ಎದ್ದು ಸೊಸೈಟಿಗೆ ಬರುವ ದಾರಿಯಲ್ಲೇ ಪೋಲೀಸು ಸ್ಟೇಷನಿಗೆ ನುಗ್ಗಿ ಅಲ್ಲಿ ವಿಚಾರಿಸಿದರೆ ಕಳ್ಳತನ ಗಿಳ್ಳತನ ಅವರಿಗೆ ಏನಾದರೂ ತಿಳಿದದ್ದು ಹೇಳಿ ಕೊಡುತ್ತಾರೆ; ಹಾಗೆಯೇ ಬಸ್ಸು ಸ್ಟಾಂಡಿಗೆ ಹೋದರೆ, ಮೋಟಾರ್ ಅನಾಹುತಗಳ ಪಟ್ಟಿ ಸಿಗುತ್ತದೆ. ಇನ್ನೇನಿದೆ ನಮ್ಮೂರಲ್ಲಿ? ಸೇಂದಿ ಅಂಗಡಿ ಹರಾಜು, ರಾಮನವಮಿ ಉತ್ಸವ, ಮಹಿಳಾಸದನದ ಸಂತಾಪ ಸಭೆ, ಸೊಸೈಟಿ ಜೆನರಲ್ ಬಾಡಿ ಮೀಟಿಂಗು, ಮುನಿಸಿಪಲ್ ಕೌನ್ಸಿಲ್ ಜಗಳ

ಗಳು!—ಪೂರೈಸಿತು ನಿನ್ನ ಕೆಲಸ...... ಇಷ್ಟಕ್ಕೆ ಹೆದರಿ,ಮನೆಗೆ ಬಂದ ಲಕ್ಷ್ಮಿಯನ್ನ ಮುಖ ಮುರಿದು ಕಳುಹಿಸುತ್ತೀಯಲ್ಲಾ.... ನ್ಯಾಯವೇ, ವಿವೇಕವೇ? ನಿನ್ನಂತಹ ವಿದ್ಯಾವಂತರೇ ಹೀಗೆ ವೃತ್ತಪತ್ರಿಕೆಗಳಿಗೆ ಪ್ರೋತ್ಸಾಹ ಕೊಡದೆ ಇದ್ದರೆ....'

'ನನಗೇನೂ ಬೇಡಿ, ಸಾರ್. ಈ ಹಾಳು ಪೇಪರನ್ನ ಮುಟ್ಟಿದರೆ ಕೈಯಲ್ಲಿ ಕಜ್ಜಿ ಬರುತ್ತದೆ; ಮನೆಯಲ್ಲಿ ಹೆಂಗಸರ ಕೈಯಲ್ಲಿ ಕೊಡುವುದಕ್ಕೆ ನಾಚಿಕೆಯಾಗುತ್ತದೆ. ರೈತರ ಮೌಢ್ಯವನ್ನು ಮತ್ತಷ್ಟು ಹೆಚ್ಚಿಸುತ್ತದೆ!' ಅಂತ ಹೇಳುತ್ತಿರುವಾಗಲೇ 'ನನಗೆ ಬೇಡ, ಸಾರ್.... ನಾನು ಹೋಗುತ್ತೀನೆ' ಎಂದು ಹನುಮಂತ ಹಿಂತಿರುಗಿ ಹೊರಟುಬಂದ.... ಧೀರ!

ಒಂದು ಚಿಟಕಿ ನಶ್ಯವನ್ನೇರಿಸುತ್ತಾ, ಅದರ ಕಾವು ಮೂಗಿಂದ ಮೆದುಳಿಗೆ ಹತ್ತುತ್ತಲೂ 'ಬಿಸಿಬಿಸಿ' ಚಾತ್ಮಿಯ ಯೋಚನೆಯನ್ನು ಸಂಪೂರ್ಣ ಮರೆತುಬಿಟ್ಟ....

ಗೋಳಪ್ಪನವರು, 'ಎಂಥಾ ದಡ್ಡ ಇವನು! ಮಾನವಾಗಿ ನಾಲ್ಕು ಕಾಸು ಸಂಪಾದಿಸುವುದಕ್ಕೆ ದಾರಿ ತೋರಿಸಿದರೆ ಕಜ್ಜಿ ಬರುತ್ತದಂತೆ, ಲಜ್ಜೆಯಾಗುತ್ತದಂತೆ, ಶುದ್ಧ ತಲೆಹರಟೆ..... ಹುಡುಗರ ತಲೆಗೆ ಕಾಲೇಜುಗಳಿಂದ ಏನೇನು ಹಚ್ಚಿ ಕಳುಹಿಸುತ್ತಾರೊ! ದೇವರೇ ಗತಿ... ಹಾಳಾಗಿ ಹೋಗಲಿ!' ಎಂದು ಗೊಣಗುತ್ತಾ, ತಾನು ಓದುತ್ತಿದ್ದ 'ಪ್ರೇಮಲೀಲಾ' ಮಾಸಿಕೆಯ 'ಪಾಪಕೂಪ'ನೆಂಬ ಲೇಖನವನ್ನು ಮತ್ತೆ ತೆಗೆದರು.

—

ಒಂಬತ್ತನೆಯ ಅಧ್ಯಾಯ

## ಅಳಿಯಂದಿರ ಆಗಮನ



ಜವ್ವನದ ಜಾಡ್ಯಕ್ಕೆ ಮದುವೆ ತಾ ಮದ್ದು .........**ಪುಟ್ಟಪ್ಪ**

ನಾನು ಮೆಚ್ಚುವ ಸೀರೆ ಕುಪ್ಪಸ
ನೀನು ತೊಟ್ಟಿಹೆ ಎಂಬನು .............ವಿ. ಸೀ.

ಬೋಳೈಸಿ ತನ್ನೊಳಗು ಮಾ-
ಡಲು ಮೇಲೆ ಮೇಲದು ಮೆಲ್ಲಮೆಲ್ಲನೆ ಕೇಳತೊಡಗುವದು....**ಮಹಲಿಂಗರಂಗ**

ಯಾಕಾರೆ ನಾ ಬಂದೆ ಆ ರೂಪ ಕಾಣಲಿಕೆ ......**ಮುಗಳಿ**



ಹನುಮಂತನಿಗೆ ಇನ್ನೂ ಮದುವೆಯಾಗದೆ ಇದ್ದುದಕ್ಕೆ ಯಾರು ಹೊಣೆಗಾರರು ಎಂದು ಹೇಳುವುದೇ ಕಷ್ಟ. ಕಾಲೇಜು ವ್ಯಾಸಂಗ ಮುಗಿದಲ್ಲದೆ ಮದುವೆಯ ಮಾತು ಎತ್ತಬಾರದೆಂದು ಹನುಮಂತನೇ ರೇಗಿ ಕೂಗುತ್ತಿದ್ದ; 'ಬಿ. ಎ. ಅಂತ ಎರಡಕ್ಷರ ಬರಲಿ, ಆಮೇಲೆ ಹೆಂಡತಿಯನ್ನೂ ಪಕ್ಕದಲ್ಲಿ ಕೂರಿಸಿಕೊಂಡು ಮೆರವಣಿಗೆ ಹೊರಟರೆ ಚೆನ್ನ; ನನ್ನ ಮೆರವಣಿಗೆ ಸಮಯದಲ್ಲಿ ನನಗೆ ಹಾಗೆ ಅನ್ನಿಸಿತು.' ಎಂದು ಮೃತ್ಯು ಕೂಡ ಉಪದೇಶ ಮಾಡುತ್ತಿದ್ದ. ತನ್ನ ಸೋದರಳಿಯನ ಮಗಳು ಮಂಗಳಗೌರಿಯನ್ನು ತಂದು ಹನುಮಂತನಿಗೆ ವಿವಾಹ ಮಾಡಿಕೊಡಬೇಕು; 'ಪಾಪ! ಆ ಹುಡಿಗಿಗೆ ಸಿಡುಬು ಬಂದು ಮುಖವೆಲ್ಲಾ ಕಲೆ ನಿಂತುಬಿಟ್ಟಿದೆ; ಒಂದು ಕಣ್ಣು

ಜೀರಿ ಹೋಗಿಬಿಟ್ಟಿದೆ; ಇದರ ಪ್ರಾಣ ಹೋಗಬಾರದಾಗಿತ್ತೆ ಅಂತ ಅವನು ಗೋಳಾಡಿದಾಗಲೇ ನಾನು ಅವನಿಗೆ ಅಭಯ ಕೊಟ್ಟಿದ್ದೇನೆ, ಹಸು ಇದಾನೆ, ಹೆದರಬೇಡ, ಗಂಟುಹಾಕಿಬಿಡೋಣ ಅಂತ.' ಎಂದು ಉದಾರಶಿರೋಮಣಿ ಗಳು ಹೇಳುತ್ತಿದ್ದರು. ಆದ್ದರಿಂದ ಹಲಕೆಲವು ಮಾವಂದಿರು ನಿರಾಶರಾಗಿ ಹಿಂತಿರುಗಿದ್ದರು. 'ಚಿನ್ನದಂತಹ ಹುಡುಗ ಅವನು; ಏನೋ ಕೆಲವರ ಹಾಗೆ ಪುಸ್ತಕ ನುಂಗುವ ಗಂಟಲು ಇಲ್ಲದೆ ಇದ್ದ ಮಾತ್ರಕ್ಕೆ....ಕುಲನಾಶಿನಿ ಅಂತಾರಲ್ಲ ಅಂತಹ ಕುರೂಪಿಯನ್ನು ಅವನ ಕೊರಳಿಗೆ ಕಟ್ಟುವುದೇ? ನನ್ನ ತಮ್ಮ, ವೆಂಕಟರಾಮು ಮಗಳು, ಪುಟ್ಟು....ಪುಟ್ಟು ಅಂದರೆ! ಅವಳಿಗೆ ಏನಾಗಿದೆ; ಪುತ್ಥಳಿ ಗೊಂಬೆ... ಎಂದು ಮೂರು ಹೊತ್ತೂ ಸೂಚಿಸುತ್ತಿದ್ದ ತಾಯಿಯಿಂದಲೂ ಹನುಮಂತನ ಮದುವೆ ಮುಂದುವರಿಯಿತು. ಈ ತಂದೆ ತಾಯಿಯರ ವಾದವಿವಾದಗಳು ಎಂದಿಗೆ ಕೊನೆಗಾಣುವುದೆಂದು ನಿರೀಕ್ಷಿಸುತ್ತಿದ್ದು—ಬೇಸರಿಕೆಯಾಗಿ, ನಿರಾಶರಾಗಿ ಕಡೆಗೆ ಸೋದರಳಿಯನೂ ವೆಂಕಟರಾಮುವೂ ತಮ್ಮ ಹೆಣ್ಣುಮಕ್ಕಳನ್ನು ಇನ್ನೆಲ್ಲಿಗೋ ಕೊಟ್ಟು ಕೈ ತೊಳೆದುಕೊಂಡರು.

ಹುಡುಗನಿಗೆ ವಯಸ್ಸು, ೨೫.. .೨೬.. .೨೭.. .೨೮ ಕ್ಕೆ ಬಂತು. ವಯಸ್ಸು ನಿಲ್ಲುತ್ತದೆಯೇ? ಎಲ್ಲಿ ಇವನು ಆಜನ್ಮಬ್ರಹ್ಮಚಾರಿಯಾಗಿಯೇ ಕೊರಗಬೇಕಾಗುತ್ತೋ ಎಂಬ ಹೆದರಿಕೆ ತಂದೆ-ತಾಯಿಗಳ ಮನದಲ್ಲಿ ಮೂಡಿತು.

ಆದರೆ, ಹೆಣ್ಣು ಹೆತ್ತ ನೂರಾರು ಜನ ಅಳಿಯಂದಿರನ್ನು ಷಿಕಾರಿ ಮಾಡಿ ಹಿಡಿದು ತರಲು ಎಂಟು ದಿಕ್ಕುಗಳಿಗೂ ಹರಡಿರುವಾಗ ಹನುಮಂತನ ಬ್ರಹ್ಮ ಚರ್ಯ ಹೆಚ್ಚು ದಿನ ಉಳಿಯಲಾರದು. ಸದ್ಯಕ್ಕೆ ನೂರಾರು ಜನವೂ ಬಂದು ಅವನನ್ನೇ ಮುತ್ತಿಕೊಳ್ಳಲಿಲ್ಲ. ವಿಚಿತ್ರದುರ್ಗದಲ್ಲಿ ಹನುಮಂತ ಎಂಬ ಒಂದು ಗಂಡು ಇದೆ ಅಂತ ಕರ್ಣಾಕರ್ಣಿಕಯಾ ಕೇಳಿದ್ದವರು ಮಾತ್ರ, ಅದರಲ್ಲೂ ಭಾರದ್ವಾಜ ಗೋತ್ರದವರಲ್ಲದವರು ಮಾತ್ರ, ಅದರಲ್ಲೂ ತಿಂಗಳಿಗೆ ಸುಮಾರು ೧೦೦ ರೂಪಾಯಿಗಳಿಗಿಂತ ಕಡಿಮೆ ಸಂಬಳದವರು ಮಾತ್ರ, ಅದರಲ್ಲೂ ವರ-ದಕ್ಷಿಣೆ ಕೊಡುವುದಕ್ಕೆ ಕೊಂಚವೂ ಚೈತನ್ಯವಿಲ್ಲದವರು ಮಾತ್ರ, ಅಂದರೆ ಎಂಟು ಜನರು ಮಾತ್ರ ಹುಡುಗನ ಜಾತಕ ಕೊಡಿ ಅಂತ ಉದಾರಶಿರೋ

ಮಣೆಗಳ ಸನ್ನಿಧಿಗೆ ಬಂದರು. ಅವರಲ್ಲಿ ಐದು ಜನ ಜಾತಕ ಸರಿಹೋಗುವು ದಿಲ್ಲವೆಂದು ಹೇಳಿ ಹಿಮ್ಮೆಟ್ಟಿದರು. ಮತ್ತೊಬ್ಬರು ಊರಿಗೆ ಹೋಗಿ ಕಾಗದ ಬರೆಯುತ್ತೇನೆ ಅಂತ ಹೇಳಿ ಪರಾರಿಯಾದರು !

ಹೆಣ್ಣು ನೋಡುವುದಕ್ಕಾಗಿ ಮೊತ್ತಮೊದಲು ರೆಯಿಲು ಚಾರ್ಜು ಕೊಟ್ಟು ಹನುಮಂತನನ್ನು ಕರೆಸಿದವರು ದೊಡ್ಡಮಾವನೂರು ಪೋಲೀಸ್ ಇನ್‌ಸ್ಪೆಕ್ಟರ್ ಬ್ಯಾಟರಾಯರು ! ಆತ ದೊಡ್ಡ ಸಂಸಾರಿ, ಮಕ್ಕಳೊಂದಿಗ, ಸಾಲಿಗ. ಆದರೂ, ವಿಪರೀತ ಡಬ್ಬು ! ಊರಿಗೆಲ್ಲಾ ತಾನೇ ದಣ್ಣಾಯಕ ಎಂಬ ದರ್ಪ ಅವರಿಗೆ ! ತಾಯಿ ಮಗ ಇಬ್ಬರಿಗೂ ಎರಡನೆಯ ಕ್ಲಾಸಿನ ಚಾರ್ಜನ್ನು ಬ್ಯಾಟರಾಯರು ಮುಂಗಡವಾಗಿಯೇ ಕಳುಹಿಸಿದ್ದರು. ಆದರೆ, ಸುಂದರಮ್ಮನವರು ಅಲ್ಲಿ ಹಾಸಿದ್ದ ' ಚರ್ಮ 'ದ ಹೊದಿಕೆಯ ಸೀಟಗಳನ್ನು ನೋಡುತ್ತಲೂ ನೆಟ್ಟಗೆ ಮೂರನೆಯ ತರಗತಿಯಲ್ಲೇ ಹೋಗಿ ಕುಳಿತು-ಬಿಟ್ಟರು ! ಹನುಮಂತ ಮಾತ್ರ ಒಂಟಿಯಾಗಿ ಮೇಲ್ತರದ ಗಾಡಿಯಲ್ಲೇ ಪ್ರಯಾಣ ಮಾಡಿದ. ಅವನು ಅದುವರೆಗೂ ಅಂತಹ ಗಾಡಿಯಲ್ಲಿ ಕುಳಿತದ್ದೇ ಇಲ್ಲವಾದ್ದರಿಂದ, ಅಲ್ಲಿಯ ಮೆತ್ತನೆಯ ದಿಂಬುಗಳು, ಹೊಳೆಹೊಳೆವ ಬಾಗಿಲ ಹಿಡಿಗಳು, ಬಲ್ಬುಗಳು, ಮೇಲಿನ ಹಾಸಿಗೆಗಳು, ಎಲ್ಲವೂ ಅವನ ಮನಸ್ಸನ್ನು ಆಕರ್ಷಿಸಿದುವು. ಬೋನಿಗೆ ಹಾಕಿದ ಕಪಿಯಂತೆ ಅವನು ಪ್ರತಿಯೊಂದು ಕಿಟಕಿಯಿಂದಲೂ ಹೊರಕ್ಕೆ ಇಣಿಕಿದ; ಪ್ರತಿಯೊಂದು ಕಿಟಕಿಯನ್ನೂ ಹಾಕಿದ; ತೆಗೆದ. ಬಲ್ಬನ್ನು ಹೊತ್ತಿಸಿದ; ಆರಿಸಿದ. ಬೀಸಣಿಗೆಯನ್ನು ಮಾತ್ರ ಹೇಗೆ ಬೀಸಿಸುವುದು ಎಂಬುದು ಗೊತ್ತಾಗಲಿಲ್ಲ. ಪಕ್ಕದಲ್ಲಿದ್ದ ಸಣ್ಣ ಕೋಣೆಗೂ ನುಗ್ಗಿದ. ಕನ್ನಡಿಯಲ್ಲಿ ಹಲ್ಲು ಕಿರಿದ; ನಾಲಿಗೆ ನೀಡಿದ; ಮುಷ್ಟಿ ಯನ್ನು ಬಿಗಿದು ತನ್ನನ್ನೇ ಹೆದರಿಸಿದ. . ಕೂಡಲೆ ಹಿಂದಿನಿಂದ ಯಾರಾದರೂ ಬರುತ್ತಿದಾರೋ ಎಂದು ಭಯಪಟ್ಟು ಹಿಂದಿನ ಬಾಗಿಲನ್ನು ಎಳೆದುಕೊಂಡ. ಅಲ್ಲೇ ಮೂಲೆಯಲ್ಲಿ ಇಟ್ಟಿದ್ದ ಏಣಿಯನ್ನು ನೋಡಿ ಅದರ ಉಪಯೋಗ ವೇನೆಂದು ಯೋಚಿಸಿದ. ಎರಡು ಮೆಟ್ಟಲು ಹತ್ತುತ್ತಲೂ ತಲೆ ತಾಕಿತು. ಕೆಳಕ್ಕಿಳಿದು ಕನ್ನಡಿ ನೋಡಿದ. . . . . . ಅಲ್ಲಿ ಒಂದು ಕಡೆ ' ತಳ್ಳು ' ಒಂದು ಕಡೆ ' ಎಳೆ ', ಎಂದು ಬರೆದಿತ್ತು. ಆದರೆ, ಏತಕ್ಕೋಸ್ಕರ, ಎಂದು ಬರೆದಿರ ಲಿಲ್ಲ. ಹನುಮಂತನಿಗೆ ಧೈರ್ಯ ಬರಲಿಲ್ಲ. ಎಳೆದರೆ ಎಂಜಿನೇ ಹಿಂದಕ್ಕೆ

ಬರುತ್ತೋ ಏನೋ ? ಗಾಡಿ ಅಕಸ್ಮಾತ್ತಾಗಿ ನಿಂತುಹೋದರೆ, ತಳ್ಳಬೇಕಾಗಿರುವುದನ್ನು ಈಗಲೇ ತಳ್ಳಿದರೆ, ಇಡೀ ರೈಲು ಮುಗ್ಗರಿಸಿಬಿಟ್ಟರೆ, ಗತಿ ಏನು ? ಎಂದು ಸುಮ್ಮನಾದ....ಮತ್ತೆ ಹೊರಕ್ಕೆ ಬಂದ....ಅಲ್ಲಿ ಅಂಟಿಸಿದ್ದ ಪ್ರಕಟಣೆಗಳನ್ನೆಲ್ಲ ಓದಿದ....ಮೇಲಿನ ಹಾಸಿಗೆಗೆ ಸರಪಣಿ ಹಿಡಿದು ಹತ್ತಿ ಅಲ್ಲಿ ಮಲಗಿಕೊಂಡು ಒಂದು ಹಾಡು ಹೇಳಿದ....ಇಳಿದು ಬಂದು, ಒಂದೊಂದು ಕಿಟಿಕಿಯಿಂದಲೂ ಮತ್ತೊಂದಾವರ್ತಿ ಇಣಿಕಿ ನೋಡಿದ.. ಆಗ ಯಾವುದೋ ಒಂದು ಸ್ಟೇಷನು ಹತ್ತಿರ ಬರುವ ಸೂಚನೆಗಳು ಕಂಡು ಬಂತು. ಕೂಡಲೇ ಗಂಭೀರವಾಗಿ ಹನುಮಂತ ಒಂದು ಕಡೆ ಕುಳಿತ....

ದೊಡ್ಡಮಾವನೂರು ಸ್ಟೇಷನಲ್ಲಿ ಹನುಮಂತನನ್ನೂ ಸುಂದರಮ್ಮನವರನ್ನೂ ಸ್ವಾಗತಿಸಲು ಆರು ಜನ ಪೋಲೀಸಿನವರು ಬಂದಿದ್ದರು ! 'ಇದೆಲ್ಲಿ ಹಾಳು ಶನಿ ! ಜೈಲಿಗೆ ಹಿಡಿದುಕೊಂಡು ಹೋಗುವ ಹಾಗೆ ಆಯಿತಲ್ಲೋ!' ಅಂತ ಆಕೆ ಉರಿದುಬಿದ್ದಳು.

ಬ್ಯಾಟರಾಯರ ಮನೆಯಲ್ಲಿ ಹುಡುಗರ ದೊಂಬಿ, ಹೆಂಗಸರ ಹಾವಳಿ,— ಗದ್ದಲವೋ ಗದ್ದಲ. ಬಟ್ಟೆ ಹಾಕುವುದಕ್ಕಾಗಿ ಮಾಡಿದ್ದ ಸ್ಟಾಂಡಿನ ಮೇಲೆ ಕಾಕಿ ಡ್ರೆಸ್ಸು, ಲಂಗ, ಷರಾಯಿ, ನಿಕ್ಕರು, ಪೈಜಾಮು, ಮಡಿ ಸೀರೆ, ಛತ್ರಿ, ಧೋತ್ರ, ಬೂಟ್ಸು, ಎಲ್ಲವೂ ಕಲಸುಮೇಲೋಗರವಾಗಿ ಬಿದ್ದಿತ್ತು ! ಒಂದು ಶಿಸ್ತಿಲ್ಲ, ಕ್ರಮವಿಲ್ಲ. ನಾಯಿಗಳು ಬೇರೆ ಐದಾರು ! ಕೋಣೆ ಕೋಣೆಗೂ ಲಂಗುಲಗಾಮಿಲ್ಲದೆ ಬೊಗಳುತ್ತಾ ಹಾರಾಡುತ್ತಿದ್ದುವು.

ಕಾಫಿ ಬಹಳ ಚೆನ್ನಾಗಿತ್ತು. ಹಾಸ್ಟಲ್ ಬಿಟ್ಟ ಮೇಲೆ ಆ ಹದದ ಕಾಫಿಯನ್ನ ಹನುಮಂತ ಕುಡಿದಿರಲಿಲ್ಲ....ಒಳಗೆ ಅಡಿಗೆ ಮಾಡುತ್ತಿದ್ದ ಕಾನ್‌ಸ್ಟೇಬಲ್‌ರವರು ಮದುವೆಯ ತನಕ ಇನ್ನೆಲ್ಲಿಗೂ ವರ್ಗವಾಗಿ ಹೋಗದೆ ಇರಲಿ ಅಂತ ಹನುಮಂತ ವೆಂಕಟರಮಣಸ್ವಾಮಿಗೆ ಒಂದು ಪ್ರಾರ್ಥನೆ ಸಲ್ಲಿಸಿದ!....ಆಮೇಲೆ ಲೋಕಾಭಿರಾಮವಾಗಿ ಕೊಂಚ ಹೊತ್ತು ಮಾತುಕಥೆ ಆಡುತ್ತಿದ್ದು, ಬ್ಯಾಟರಾಯರು ಹನುಮಂತನನ್ನು ಕರೆದುಕೊಂಡು ಹೋಗಿ ಒಂದು ದಿಂಬಿನ ಕುರ್ಚಿಯಲ್ಲಿ ಕೂರಿಸಿದರು. 'ಕಂಲೀ ! ಕಂಲೀ ! ಬಾ ಇಲ್ಲಿ....ನನಗೆ ಹೊತ್ತಾಯಿತು. ಒಂಬತ್ತು ಗಂಟೆಗೆ ಹೊರಡಬೇಕಾಗಿದ್ದ ಚಿಕ್ಕಮಾವನೂರು ಬಸ್ಸು ನನಗೋಸ್ಕರ

ಕಾದು ನಿಂತಿದೆ. ಹತ್ತೂಕಾಲಾಯಿತು ಗಂಟೆ....ಬಾ, ಅಮ್ಮಾ, ಕಂಲೀ!' ಅಂದರು. ಹಾಗೆ ಹೇಳಿದ ತಕ್ಷಣವೇ ಹನುಮಂತನ ಕೈಗೆ ಒಂದು ಡಿಕ್ಷನರಿಯನ್ನಿಟ್ಟರು. 'ನೋಡಿ....೧೧೦ನೇ ಪುಟ ತೆಗೆಯಿರಿ' ಅಂದರು. ಬೇಸಲ್ ಮಿಶನ್‌ನವರದು ಇಂಗ್ಲೀಷ್-ಕನ್ನಡ ಡಿಕ್ಷನರಿ! ಹನುಮಂತ ಅದರ ನೂರನೆಯ ಪುಟವನ್ನು ತೆಗೆದ........'COMELY ಏನರ್ಥ ಹಾಕಿದಾನೆ ಓದಿ' ಅಂದರು. ಹನುಮಂತನಿಗೆ ಯಾವುದೂ ಗೊತ್ತಾಗಲಿಲ್ಲ. ಬೆಪ್ಪು ಹಿಡಿದವನಂತೆ, 'ಸುಂದರ....' ಎಂದು ಓದತೊಡಗಿದ. ಆಗ ಇನ್‌ಸ್ಪೆಕ್ಟರು, 'ಕಮಲ (ಗಂಡಸು) ಕಮಲಿ (ಹೆಂಗಸು) ಕಮಲಿ ಅಂತ ಕನ್ನಡ; ಕಂಲೀ ಅಂತ ಅದೇ ಮಾತು ಇಂಗ್ಲೀಷಲ್ಲಿ, COMELY--ಸುಂದರ..ಹೇಗಿದೆ?' ಅಂತ ಹೇಳಿ ತಾವೇ ಪೂರ ನಕ್ಕರು. ಹನುಮಂತ ಕೂಡ, ಏನು ಬಂತಪ್ಪಾ ಇವರಿಗೆ ಅಂತ ಗಾಬರಿಗೊಂಡು ಉಪಚಾರಕ್ಕಾಗಿ ತಾನೂ ಕೊಂಚ ನಕ್ಕ.

ಕಂಲಿ ಬಂದಳು.

'ಹೋಗಲಿ! ಪರವಾ ಇಲ್ಲ' ಎಂದೆನಿಸಿತು ಹನುಮಂತನಿಗೆ.... ಆದರೆ, ಅವಳು ಹೋಗಲಿಲ್ಲ. ಅಲ್ಲೇ ಗೋಡೆಗೆ ಒರಗಿಕೊಂಡು ತಂದೆಯ ಹತ್ತಿರ ನಿಂತಿದ್ದಳು....ಆಗ, ಇನ್‌ಸ್ಪೆಕ್ಟರ ಭಾವಮೈದ, ಶುದ್ಧ ಪೋಕರಿ ಹುಡುಗ, 'ಆಳಿಯಂದಿರೇ! ಕಂಲಿ ಇಸ್ಪೀಟು ಆಡುತ್ತಾಳೆ!' ಅಂದ, ಗಟ್ಟಿಯಾಗಿ. ಅವನಿಗೂ ಕಂಲಿಗೂ ಬೆಳಗ್ಗೆ ದೋಸೆ ಹಂಚಿಕೆಯ ವಿಷಯವಾಗಿ ಜಗಳವಾಗಿದ್ದುದಕ್ಕೆ ಈಗ ಸೇಡು ತೀರಿಸಿಕೊಳ್ಳುತ್ತಿದಾನೆ, ಪೋಲಿ! ಬ್ಯಾಟರಾಯರು ಅವನ ಕಪಾಳಕ್ಕೆ ಸರಿಯಾಗಿ ಬಿಸಿಬಿಸಿಯಾಗಿ ಒಂದು ಬಿಟ್ಟರು.. ಬಾಗಿಲು ಸಂದಿನಿಂದ ಇಣಿಕಿ ನೋಡುತ್ತಿದ್ದ ಮತ್ತೊಬ್ಬ ಹುಡುಗ, 'ಆಳಿಯಂದಿರೇ! ಕಂಲಿ ಬೈಸಿಕಲ್ ಬಿಡುತ್ತಾಳೆ' ಎಂದ. ಕಿಟಿಕಿಯ ಹೊರಗಡೆಯಿಂದ ಇನ್ನೊಬ್ಬ, 'ಆಳಿಯಂದಿರೇ! ಕಂಲಿ ನಶ್ಯ ಹಾಕುತ್ತಾಳೆ' ಅಂತ ಕೂಗಿಕೊಂಡ! ಹನುಮಂತನಿಗೆ ಬೇಗ ಮನೆ ಸೇರಿದರೆ ಸಾಕಪ್ಪಾ ಅನ್ನಿಸಿತು.. ಆಗ, ಇನ್‌ಸ್ಪೆಕ್ಟರು, 'ಪೋಲೀಸ್! ಈ ಹುಡುಗರನ್ನ ಹಿಡಿದುಕೊಳ್ಳಿರೋ!' ಎಂದು ಗದರಿಸಿದರು. ಆದರೆ, ಆ ವಾನರರು ಯಾರಿಗೂ ಹೆದರುವುದಿಲ್ಲವೆಂದು ತೋರಿತು. 'ಆಳಿಯಂದಿರೇ! ಕಂಲಿ ಬೀ..' ಅಂತ ಮತ್ತೊಂದು ಹುಡುಗ ಪ್ರಾರಂಭಿಸಿದ. ಬ್ಯಾಟರಾಯರು ಡಿಕ್ಷನರಿ ತೆಗೆದು ಅವನ ಮುಖಕ್ಕೆಸೆದರು. ಹಲ್ಲಿಂದ ರಕ್ತ ಸೋರಿಸುತ್ತಾ, ಅವನು ಅಯ್ಯೋ ಎಂದು ಕೂಗಿಕೊಂಡು

ಓಡಿ ಹೋದ. ಇತರ ಪೋಲಿಗಳೂ ಹೊರಟರು. 'ಅಯೋಗ್ಯವಮುಂಡೇ ಗಂಡರು!' ಎಂದು ಅವರನ್ನು ಬೈಯುತ್ತಾ ಬ್ಯಾಟರಾಯರು, 'ನೋಡಿ ರಾಯರೇ! ನಿಮಗೇನೂ ನಾನು ಹೇಳಬೇಕಾದ್ದಿಲ್ಲ....ನಮ್ಮ ಕಂಲಿ ಕೈ ಹಿಡಿದವನಿಗೆ ಎಂತಹ ಭಾಗ್ಯ ಬರುತ್ತದೆ ಎಂಬುದನ್ನ ಅವಳ ಜಾತಕವೇ ಹೇಳುತ್ತದೆ....ಅವಳಿಗೆ ಸಂಗೀತದಲ್ಲಿ ತುಂಬಾ ಪರಿಶ್ರಮವಿದೆ....ಬುಲ್ ಬುಲ್ ತರಂಗ್, ರೇಡಿಯೋ, ಗ್ರಾಮಫೋನು—ಎಲ್ಲಾ ಬಾರಿಸುತ್ತಾಳೆ. ಹಿಂದಿ ಬರುತ್ತದೆ; ಕನ್ನಡಗಲ್ಲಿ ಕಥೆ ಬರೆಯುತ್ತಾಳೆ. ಯಾರಾದರೂ ಎದುರಿಗೆ ಕುಳಿತಿದ್ದರೆ ಅವರ ಮೇಲೆ ಒಂದು ಪದ್ಯ ಬರೆದುಬಿಡುತ್ತಾಳೆ. ಈಗಿನ ಕಾಲದ 'ಕಡಲೆಪುರಿ' ಕವನಗಳನ್ನ ಇವಳ ಹಾಗೆ ಬೇರೆ ಒಬ್ಬರೂ ಬರೆಯು ವುದಿಲ್ಲ ಅಂತ ನನ್ನ ಅಭಿಪ್ರಾಯ, ನನಗೆ ತಿಳಿದ ಮಟ್ಟಿಗೆ. ನಾನೂ ಸುಮಾರು ಎಂಟು ತಾಲೂಕುಗಳಲ್ಲಿ ಪೋಲೀಸ್ ಕೆಲಸ ಮಾಡಿದೇನೆ . . . ಕಂಲಿ . . ನಿನ್ನ ಪದ್ಯದ ಪುಸ್ತಕ ತೆಗಿದುಕೊಂಡು ಬಾ . . . ಆ ದೊಡ್ಡ ಪುಸ್ತಕ ಬೇಡ . . . ತುಂಬಾ ಭಾರ . . . ಮೊನ್ನೆ ತೆಗಿದುಕೊಟ್ಟೆನಲ್ಲಾ ೬೪ ಪುಟದ ಬುಕ್ಕು . . ಅದನ್ನು ತಾ ಸಾಕು, ಸ್ಯಾಂಪಿಲಿಗೆ . . . . .' ಎಂದು ಹೇಳಿ ಹುಡುಗಿಯನ್ನು ಕಳುಹಿಸಿದರು. ಆಮೇಲೆ ಹನುಮಂತನ ಕಡೆ ತಿರುಗಿ, 'ಬಹಳ ಚೆನ್ನಾಗಿ ಬರೆಯುತ್ತಾಳೆ. ಅವಳೆದುರಿಗೆ ನಾನು ಅವಳನ್ನ ಹೊಗಳುವುದೇ ಇಲ್ಲ . . . . ಕೆಲವರು ಹಾಗೆ ಮಾಡಿ ಮಕ್ಕಳನ್ನು ಕೆಡಿಸಿಬಿಡುತ್ತಾರೆ' ಅಂದರು . . ಆಕೆ ತಂದ ಪುಸ್ತಕವನ್ನು ತೆಗಿದು ಬ್ಯಾಟರಾಯರೇ ಓದತೊಡಗಿದರು :

**ಧಧ್ಧದ್ಧೋಂ ಧೋಂಡ—ಭಾಳೆಕಾಯಿ ಭೋಂಡ !**
**ಭೋಂಡ ತಿಂದ ಘುಂಡ—ಭಾಳ ತಿಂದ ಭಂಡ !!**
**ಭಂಡ ಮಲಗಿ ಖೊಂಡ—ಘುಂಡನ ಮುಟ್ಟೆ ಖೆಂಡ !!**
**ಧಧ್ಧದ್ಧೋಂ ಧೋಂಡ—ಭಾಳೇಕಾಯಿ ಭೋಂಡ !!**

ಇದಕ್ಕಿಂತ ಇನ್ನೊಂದನ್ನ ಬಹಳ ಚೆನ್ನಾಗಿ ಬರೆದಿದಾಳೆ......ಶಿಶುಗೀತೆ ಅಂದರೆ ಇದು :

**ಅನ್ಮಂತ್ರಾಯಾ ಬಾರಣ್ಣಾ !**
**ಹಿಡಿವೆನು ಮೂತಿಗೆ ಕರ್ಪೂರ !!**
**ಅನ್ಮಂತ್ರಾಯಾ ಕೂರಣ್ಣಾ !**
**ಹಿಡಿವೆನು ಮೋರೆಗೆ ಕರ್ಪೂರ !!**

**ಅನ್ಮಂತ್ರಾಯಾ ತೋರಣ್ಣಾ !**
**ಹಿಡಿವೆನು ಮೂತಿಗೆ ಕರ್ಪೂರ !!**
**ಅನ್ಮಂತ್ರಾಯಾ ಹಾರಣ್ಣಾ !**
**ಆಯಿತು ಮೋರೆಗೆ ಕರ್ಪೂರ !!**

ಹನುಮಂತ ಎದ್ದು ನಿಂತುಬಿಟ್ಟ. 'ಸಾಕು! ಸ್ವಾಮಿ! ನಾವು ಊರಿಗೆ ಹೋಗಿ ಎಲ್ಲಾ ವಿವರಗಳಿಗೂ ತಮಗೆ ಕಾಗದ ಬರೆಯುತ್ತೇವೆ' ಅಂತ ಹೇಳಿ ಹೊಸಲು ದಾಟಿದ. ಸುಂದರಮ್ಮನವರೂ ಕೂಡ, 'ಬಾರೋ! ಹನು! ನಗುನಗುತ್ತಾನೇ ಹೋಗೋಣ. ಈ ದುರಹಂಕಾರದವರ ಸಂಬಂಧ ಬೇಡವೇ ಬೇಡ ನಮಗೆ. ಹೆಣ್ಣಿಗೇನು ಬರ ಬಂದಿಲ್ಲ ಪ್ರಪಂಚದಲ್ಲಿ. ಗಂಡು ಅಂತ ಹುಟ್ಟಿಸಿದ ದೇವರು ಹೆಣ್ಣು ಅಂತ ಒಂದನ್ನ ಇಟ್ಟೇ ಇಟ್ಟಿರುತ್ತಾನೆ. ಯೋಚನೆ ಮಾಡಬೇಡ' ಅಂದರು. ಆಕೆಗೂ ಅಷ್ಟು ಬೇಸರಿಕೆಯಾಗುವಂತೆ ಬ್ಯಾಟರಾಯರ ಹೆಂಡತಿ ಯಾವ ಮಾತು ಅಂದರೋ, ಯಾರಿಗೆ ಗೊತ್ತು?

ದೊಡ್ಡಮಾವನೂರಿಂದ ಬಂದ ಎಂಟು ದಿನಗಳೊಳಗೆ, ಕರೀಕೆರೆ ರಾಮಶೇಷಯ್ಯನವರು ತುಂಬಾ ಬಲವಂತಪಡಿಸಿದರು. ಈ ಸಲ ಹನುಮಂತನ ಸಂಗಡ ಸುಂದರಮ್ಮನವರು ಹೊರಡಲೇ ಇಲ್ಲ. ಹಿಂದಿನ ಕೋಪದಿಂದಲ್ಲ, ಅವಳಿ ರಾಮುಪಿಗೆ ಆಮಶಂಕೆ ಪ್ರಾರಂಭವಾಗಿ ಒಂದು ಘಂಟೆಯಾಗುವುದರೊಳಗೆ ಜವಳಿ ಲಕ್ಷ್ಮಣನಿಗೂ ಅದೇ ಖಾಯಿಲೆ ಬಂತು. ಆದ್ದರಿಂದ, ಆಕೆ ಮನೆಯಲ್ಲೇ ಉಳಿದರು. ಆದ್ದರಿಂದ ಮೃತ್ಯುವಿನ ತಂಗಿ, ಅಂದರೆ ಗುಂಡನ ಅಕ್ಕ, ಮಾಚ್ಚಿಯನ್ನು ಕರೆದುಕೊಂಡು ಹನುಮಂತ ಹೆಣ್ಣು ನೋಡುವುದಕ್ಕೆ ಹೊರಟ. ಕರೀಕೆರೆಯನ್ನು ಬೆಳಗ್ಗೆ ಎಂಟು ಗಂಟೆಗೆ ತಲಪಿದರು. ಕಾಫಿ ಉಪ್ಪಿಟ್ಟು, ಸ್ನಾನ-ಗೀನ,ಖೀರು, ಬೋಂಡ, ನಿಂಬೆಹುಳಿ ಚಿತ್ರಾನ್ನ, ಸೇಬು, ದ್ರಾಕ್ಷಿ—ಎಲ್ಲವೂ ಶಾಸ್ತ್ರೋಕ್ತವಾಗಿ ನಡೆಯಿತು. ರಾಮಶೇಷಯ್ಯನವರು ಕರೀಕೆರೆ ಮಿಡ್ಲಿಸ್ಕೂಲ್ ಹೆಡ್ಮೇಷ್ಟರು. ಅವರು ಯಾವುದನ್ನೂ ಕಡಿಮೆ ಮಾಡಲಿಲ್ಲ. ಅವರಿಗೇನು ಕಾಯಿಪಲ್ಯ, ಹಾಲು ಮೊಸರು, ಹಣ್ಣುಹಂಪಲು-ಹುಡುಗರು ತಂದು ಕೊಟ್ಟಿದ್ದು. ಮಧ್ಯಾಹ್ನ ಶಾಮಣ್ಣನವರೂ ಹನುಮಂತನೂ ಹೊರಗಿನ ಪಡಸಾಲೆಯಲ್ಲಿ ಕುಳಿತು ಹರಟುತ್ತಾ ಇದ್ದರು. ಮಾಚ್ಚಿ ಬಾಗಿಲಲ್ಲೇ ನಿಂತು, ಮಗುವನ್ನೂ ಕೊಂಕುಳಲ್ಲಿ ಇರಿಸಿಕೊಂಡು, ಎದುರಿನ

ರಸ್ತೆಯಲ್ಲಿ ಹೋಗುವವರು ಬರುವವರನ್ನು ನೋಡುತ್ತಾ ಇದ್ದಳು. ಆಗ.. ಅಬ್ಬಬ್ಬಾ! ಹದಿನಾಲ್ಕು ಹದಿನೈದು ವರ್ಷವಿರಬಹುದು; ಹೆಡ್ಮೇಷ್ಟರ ಮಗಳೇ ಇರಬೇಕು, ಹನುಮಂತನ ಮನಸ್ಸನ್ನು ಸಂಪೂರ್ಣ ಒಲಿಸಿ ಸೂರೆಗೊಳ್ಳುವಂತಹ ಸ್ಫುರದ್ರೂಪಿ! ಮಲ್ಲಿಗೆ, ಗುಲಾಬಿ, ಸಂಪಿಗೆ, ಜಾಜಿ ಎಲ್ಲದರ ಕಂಪನ್ನೂ ಸೊಬಗನ್ನೂ ಪೆಂಪನ್ನೂ ಕಡೆದು ತೆಗೆದು ಎರಕಹುಯ್ದು ಒಂದು ಸ್ತ್ರೀವ್ಯಕ್ತಿಯನ್ನು ಮಾಡಿದಂತೆ......ಮೆಲ್ಲಗೆ ಒಳಗಿಂದ ಬಂದು ನಾಚಿ ಬಳುಕಿ ಮಾಚ್ಚಿಯ ಹತ್ತಿರ ಬಂದು ಒಂದು ನಿಮಿಷ ನಿಂತು ಮಿಂಚಿ ಮಾಯವಾದಳು.

'ಲಗ್ನ ಕಟ್ಟಿಬಿಡಿ' ಎಂದು ಹೇಳೇಬಿಡೋಣ. ಇನ್ನೊಂದರೆಘಳಿಗೆಯಲ್ಲಿ ರಾಮಣ್ಣನವರ ಮನಸ್ಸು ಹೇಗೆ ತಿರುಗುತ್ತದೋ, ಎಂದು ಯೋಚಿಸಿ ಹನುಮಂತ ಬಿಗಿದ ಬಾಯನ್ನ ತೆರೆಯುವುದರೊಳಗೆ ಅವರೇ ಎದ್ದು, 'ಎಲ್ಲಾ ಸಿದ್ಧವಾಗಿದೆ; ಹಾಗೆಯೇ ಕೊಂಚ ನಡುಮನೆಗೆ ದಯಮಾಡಿಸಿ. ಹುಡುಗಿಯನ್ನ ನೋಡುವುದು ಎಂಬ ಒಂದು ಸಂಪ್ರದಾಯ ಇದೆಯಲ್ಲವೆ? ನಮ್ಮ ಕಾಲದಲ್ಲಿ ನಾವು ಬಂದದ್ದೆಲ್ಲಾ ಬರಲಿ ಗೋವಿಂದನ ದಯೆ ಒಂದಿರಲಿ ಸಾಕು, ಎಂದಿದ್ದೆವು. ಈಚೀಚೆಗೆ ಸಂತೆಯಲ್ಲಿ ದನಗಳನ್ನು ಪರೀಕ್ಷೆಮಾಡುವ ಹಾಗೆ ಇದೊಂದು ಹಾಳು ಸಾಂಪ್ರದಾಯ..ಬನ್ನಿ ಎಲ್ಲರೂ ಕಾದಿದಾರೆ' ಅಂದರು.

ಆಗಲೇ ನಡುಮನೆಯಲ್ಲಿ ಆರೇಳು ಜನ ಸೇರಿಬಿಟ್ಟಿದ್ದರು. ಕಿಟಿಕಿಗಳಲ್ಲೆಲ್ಲಾ ಮಿಡ್ಲಿಸ್ಕೂಲ ಹುಡುಗರು ತುಂಬಿಬಿಟ್ಟಿದ್ದರು.

'ಹುಡುಗಿ ಬರಬಹುದಲ್ಲಾ....ನಾಗಮಣಿ ಎಲ್ಲಿ?'

'ಬೇಡಿ ಬೇಡಿ, ಈಗಲೇ ಬರಬೇಕಾದ್ದಿಲ್ಲ. ಅಲ್ಲೇ ಕುಳಿತುಕೊಂಡು ಒಂದೆರಡು ಪಾಡು ಹೇಳಿದ ಮೇಲೆ ಈಚೆಗೆ ಬರಲಿ.'

'ನಾಗೂ, ಬಂದುಬಿಡೇ ಆಮೇಲೆ ಹಾಡಿದರೆ ಸಾಕು..ಬಾ..ಬಾ'

'ಹಾಗಲ್ಲ, ಹಾಗಲ್ಲ, ಹಾಡಲಿ! ಹಾಡು ಮುಗಿಸಿದ ಮೇಲೆ ಬಂದರೆ ಸಾಕು.'

'ನಾಗಮಣೀ, ಹಾಡಿಬಿಡು....ಲಂಬೋದರ ಹೇಳು.'

'ಇಲ್ಲಿ ಬಂದು ಕುಳಿತುಕೊಂಡು ಹೇಳಲಿ.'

'ಅಲ್ಲೇ ಕುಳಿತಾಯಿತಂತೆ. ಇನ್ನು ಮೇಲೆ ಎಬ್ಬಿಸಬೇಡಿ.'

‘ ಓಹೋ ! ಎಬ್ಬಿಸಿದರೇನಂತೆ ? ಬಾರೆ ಇಲ್ಲಿ ! ’

‘ ಇಲ್ಲ, ಇಲ್ಲ, ಅಲ್ಲಿಂದಲೇ ಹಾಡುತ್ತಾಳಂತೆ. ’

ತನ್ನ ಮನದಿನಿಯಳನ್ನು ಹೀಗೆ ಐದಾರು ಜನ ಸೇರಿಕೊಂಡು ಒಟ್ಟಿಗೆ ಪೀಡಿಸುವುದರಲ್ಲಿ ಹನುಮಂತನಿಗೆ ಕೊಂಚವೂ ಉತ್ಸಾಹವಿರಲಿಲ್ಲ. ಅವಳು ಹಾಡಲಿ, ಹಾಡದೆ ಹೋಗಲಿ ತಾನು ಅವಳನ್ನೇ ಮದುವೆಯಾಗುವುದು ದಿಟ. ಅಂದಮೇಲೆ ಅವಳನ್ನು ಬರಿದೆ ಬಳಲಿಸಿ ಫಲವೇನು ? ಆದ್ದರಿಂದ ಹನುಮಂತ, ‘ ನನಗೆ ಸಂಗೀತದ ಗಂಧವೇ ಇಲ್ಲ, ಸುಮ್ಮನೆ ಯಾಕೆ ತೊಂದರೆ ?’ ಎಂದನು. ಅಷ್ಟರೊಳಗೆ ನಾಗು, ಸರಿಮಾಗರಿ ಸರಿಗರಿಸಾ ಎಂಬಲ್ಲಿಗೆ ಬಂದುಬಿಟ್ಟಿದ್ದಳು.

‘ ಸಾಕಂತೆ, ನಾಗೂ, ಅಳಿಯಂದಿರೇ ನಿಲ್ಲಿಸು ಅನ್ನುತ್ತಾರೆ, ಇನ್ನೇ-ನಮ್ಮಾ ? ’

‘ ಪ್ರಾರಂಭ ಮಾಡಿದ್ದನ್ನು ಮುಗಿಸಲಿ, ಇನ್ನೇನು, ಆಗಿಹೋಯಿತು, ಮುಗಿಸಿಬಿಡಮ್ಮಾ. ’

‘ ಬೇಡ, ಬೇಡ, ಅಳಿಯಂದಿರು ಬೇಡ ಅಂದಮೇಲೆ ಹಾಡಲೇಬಾರದು ’

‘ ಯಾವಾಗಲೂ, ಎತ್ತಿದ ಹಾಡನ್ನು ಧಫಾರನೆ ಕೆಳಕ್ಕಿಡಬಾರದು. ನಾನು ಒಪ್ಪುವುದಿಲ್ಲ. ’

‘ ಒಪ್ಪದೇ ಇದ್ದರೆ ಬಿಡಿ, ಇದು ನನ್ನ ಮನೆ. ನಿಮ್ಮ ಮನೆಯಲ್ಲಿ ಜೋರು ಮಾಡಿ. . . . ತಿಳಿಯಿತೋ ? ’

‘ ಮತ್ತೆ ಯಾಕೆ ನಮ್ಮ ಹತ್ತಿರ ಬಂದು ಹಲ್ಲುಹಲ್ಲು ಕಿರಿದು ಬಾರಯ್ಯಾ ಮನೆಗೆ, ಅಳಿಯ ಬರುತ್ತಾನೆ ಅಂತ ಕೈಕಾಲು ಕಟ್ಟಿದೆ ? ’

‘ ಯಾರಯ್ಯಾ ಹಲ್ಲು ಕಿರಿದದ್ದು ? ಬಾಯಿಮುಚ್ಚಿಕೊಂಡು ಕುಳಿತಿದ್ದರೆ ತಾಂಬೂಲ ಕೊಡುತ್ತೇನೆ. ಇಲ್ಲದೆ ಇದ್ದರೆ ಕತ್ತು ಹಿಡಿದು ದಬ್ಬಿ. . . . ’

‘ ಹೆಡ್ಮೆಷ್ಟ್ರೇ ! ಸುಮ್ಮನಿರಿ, ರೇಗಬೇಡಿ ! ’

‘ ಯಾರಯ್ಯಾ ರೇಗಿದ್ದು ? ನಾನೋ, ನಿನ್ನ ತಾತನೋ ! ’

‘ ಯಾರು ಇಲ್ಲ ಸುಮ್ಮನಿರಿ. ಅಯ್ಯೋ, ಹೆಡ್ಮೆಷ್ಟ್ರೇ, ಯಾರೂ ರೇಗಿಲ್ಲ ! ಸುಮ್ಮನಿರಿ ಅಂದರೆ. ಕುಳಿತುಕೊಳ್ಳಬಾರದೇ ನೀವು ? ಸುಮ್ಮನಿರಿ, ಯಾರೂ ರೇಗಿಲ್ಲ, ದೊಣ್ಣೆ ಇಡಿ ಆ ಮೂಲೆಯಲ್ಲಿ. . ಸುಮ್ಮನಿರಿ ನೀವು . .

ಮಗೂ, ನಾಗೂ,......ಬೇಗ ಬಂದು ಬಂದು ನಮಸ್ಕಾರ ಮಾಡಮ್ಮಾ ಈ ಹೊಸಬರಿಗೆ.'

ಅಷ್ಟೆ. ಹನುಮಂತನ ಸ್ವರ್ಗಲೋಕವು ಅವನ ಸಮೀಪಕ್ಕೆ ಜಿಲ್, ಜಿಲ್ ಎಂದು ಗೆಜ್ಜೆಯ ಹೆಜ್ಜೆಯಿಡುತ್ತಾ, ಇನ್ನೇನು ಬರಬೇಕು,..ಬಂತು!

ಅವನ ಆ ನವಮೋಹನಾಂಗಿ ಅಲ್ಲ....ಯಾವಳೋ ಖಾತರಿ ಬಣ್ಣದ ಅಳುಮೋರೆಯ ಮಹರಾಯಗಿತ್ತಿ! ಅಲ್ಲೇ ನಿಂತಿದ್ದ ಮಾಚ್ಚಿ ಹನುಮಂತನ ಕಡೆಗೆ ನೋಡಿ, 'ಆಯಿತು ನಿನಗೆ ಆರತಿ' ಎಂದು ತನ್ನ ನಗುವಿನಿಂದ ಸೂಚಿಸಿದಳು.

ಊರಿಗೆ ಹೋಗಿ ತಂದೆ ತಾಯಿಗಳನ್ನು ಕೇಳಿ ಕಾಗದ ಬರೆಯುತ್ತೇವೆ ಎಂದುಕೊಂಡು ಹನುಮಂತ ಹೊರಟ. ಆದರೆ, ಅನ್ಯಾಯವಾಗಿ ಏತಕ್ಕೆ ಟಪಾಲಿನವರಿಗೆ ಒಂದಾಣೆ ದಾನ ಮಾಡಬೇಕು, ಎಂದು ಯೋಚಿಸಿ ಅವನು ತೆಪ್ಪಗಿದ್ದನು. ಆದರೆ, ಕರೀಕೆರೆ ರಾಮಣ್ಣನವರು ಮಾತ್ರ ಒಂದಾಣೆ ಉಳಿಸುವ ಪ್ರಯತ್ನ ಮಾಡಲಿಲ್ಲ. ಅವರಿಂದ ಮರುದಿನವೇ ಪತ್ರ ಬಂತು: 'ನಿಮ್ಮ ಮಗ, ಹುಡುಗಿಯನ್ನು ಒಪ್ಪಿದೇನೆ ಎಂದು ನನಗೆ ಕಾಗದ ಬರೆಯುವುದಕ್ಕೆ ಮುಂಚೆಯೇ ಈ ಪತ್ರ ನಿಮಗೆ ತಲಪಬೇಕೆಂದು ಅವಸರದಿಂದ ಬರೆಯುತ್ತಾ ಇದೇನೆ. ನನ್ನ ಮಗಳು ಬಲು ಜಾಣೆ; ನನ್ನ ಹಾಗೆಯೇ ಇಲ್ಲಿ ಬಂದಿದ್ದ ನಿಮ್ಮ ಮಗನ ಬಣ್ಣ, ಆಕಾರ, ಉಬ್ಬುಹಲ್ಲು, ಸಶ್ಯದ ಮೂಗು, ಇವುಗಳನ್ನು ನೋಡಿ ಅಸಹ್ಯಪಟ್ಟು ಈ ಮದುವೆಯನ್ನು ನಿಶ್ಚಯಿಸಿದರೆ ಬಾವಿಗೆ ಬೀಳುತ್ತೇನೆ ಎಂದು ಹೆದರಿಸುತ್ತಿದಾಳೆ.' ಎಂದು ಅವರು ಬರೆದಿದ್ದರು.

ಒಂದೊಂದಾಗಿ ವರ್ಷದ ಲಗ್ನಗಳು ಮುಗಿಯುತ್ತಾ ಬಂದುವು. ಯಾರಾದರೊಬ್ಬರು ಪುಣ್ಯಾತ್ಮರು ಮನೆ-ಬಾಗಿಲಿಗೆ ಬಂದು, ಹೆಣ್ಣು ಕೊಡುತ್ತೇನೆ ಅಂತ ಹೇಳದಿದ್ದರೆ ಕಡೇ ಪಕ್ಷ ಏಳೆಂಟು ತಿಂಗಳಾದರೂ ಹನುಮಂತನ ಬ್ರಹ್ಮಚರ್ಯ ಮುಂದಕ್ಕೆ ಸಾಗಬೇಕಾಗುವುದು. ಪಾಪ, ಅವನಿಗೂ ಆರೋಗ್ಯ ಚೆನ್ನಾಗಿರಲಿಲ್ಲ. ಸೊಸೈಟಿಯಿಂದ ನೆಟ್ಟಗೆ ಮೇಜರ್ ಭೀಮ-ರಾಯರ ಮನೆಗೆ ಹೋಗಿ ಅಲ್ಲಿ ಪಾಠ ಮುಗಿಸಿಕೊಂಡು ಬರುವಾಗ ಕೆಲವು ವೇಳೆ ರಾತ್ರಿ ಎಂಟು, ಎಂಟೂವರೆ ಆಗಿಬಿಡುತ್ತಿತ್ತು. ನಡುವೆ ಎಲ್ಲಾದರೂ ಕೊಂಚ ಬೆಳದಿಂಗಳು ಸಿಕ್ಕಿಬಿಟ್ಟರೆ ಹನುಮಂತ ಮನೆಗೆ ಬಂದ ಕೂಡಲೇ,

'ಅಮ್ಮಾ, ಬೀಸಣಿಗೆ ಎಲ್ಲಿ?' ಎಂದು ಕೇಳುತ್ತಾ ಬೆವರೊರಿಸಿಕೊಳ್ಳುವನು. ಸುಂದರಮ್ಮನವರಿಗೆ ಆಶ್ಚರ್ಯವಾಗುವುದು. ಅಲ್ಲದೆ ಹನುಮಂತನಿಗೆ ಎಂದಿನಂತೆ ಅನ್ನ ಸೇರುತ್ತಿರಲಿಲ್ಲ. ನಶ್ಯ ಹಾಕುವುದನ್ನೂ ಕೂಡ ದಿನೇ ದಿನೇ ಕಡಿಮೆ ಮಾಡುತ್ತಾ ಬಂದನು. ಆರಾಮದ ಕುರ್ಚಿಯೊಳಗೆ ಮಲಗಿರುತ್ತಾ ಎದೆಯ ಎಡಭಾಗದಲ್ಲಿ ಕೈಯನ್ನಿಟ್ಟು ಅದುಮುತ್ತಾ ಹಾ ಹಾ ಎಂದು ಸಂಕಟಪಡುವನು. ಇದ್ದಕ್ಕಿದ್ದ ಹಾಗೆ ಸುಂದರಮ್ಮನವರ ಹತ್ತಿರ ಬಂದು, 'ಅಮ್ಮಾ, ಕಮ್ಮೆಗಳೇನು? ಕರ್ನಾಟಕರೇನು? ಬ್ರಾಹ್ಮಣರೆಲ್ಲರೂ ಸರಿಸಮಾನರಲ್ಲವೇನಮ್ಮಾ?' ಎಂದು ಕೇಳುವನು. ಆಕೆಗೆ ಅರ್ಥವಾಗುತ್ತಿರಲಿಲ್ಲ. 'ನಾವು ಕಮ್ಮೆಗಳು; ಒಬ್ಬರಿಗೂ ಕಮ್ಮಿಯಲ್ಲ.' ಎಂಬರು. ಮತ್ತೊಂದು ದಿನ, 'ಅಮ್ಮಾ, ತಮ್ಮನಿಗೆ ಎರಡು ಜನಿವಾರ ಬಿತ್ತು ಅಂತ ಇಟ್ಟುಕೊ, ಅಣ್ಣನಿಗೆ ಒಂದು ಸಾಕೇ?' ಎಂದ. ಮರುದಿನ ಬೆಳಿಗ್ಗೆ ಆರೂಕಾಲು ಗಂಟೆ ಸಮಯ, ಆಗ ತಾನೇ ಹಾಸಿಗೆಯಿಂದ ಎದ್ದುಬಂದಿದಾನೆ ಹನುಮಂತ, 'ಅಮ್ಮಾ, ತಂದೆ ಸಿಪಾಯಿ ಆದರೆ ಮಗಳೂ ಸಿಪಾಯಿ ಆಗುತ್ತಾಳೆಯೇ?' ಎಂದು ಕೇಳಿದ. ಆ ದಿನ ಹುಣ್ಣಿಮೆ ಬೇರೆ. ಸುಂದರಮ್ಮನವರಿಗೆ ಗಾಬರಿಯಾಯಿತು. ತಕ್ಷಣವೇ ದೇವರ ಮನೆಗೆ ಹೋಗಿ ಅಡ್ಡಬಿದ್ದು ಎದ್ದುನಿಂತು ಕೈಜೋಡಿಸಿ, 'ಶ್ರೀರಾಮಾ, ಆಪದ್ಬಾಂಧವಾ, ಅನಾಥರಕ್ಷಕಾ, ಹನುಮಂತನನ್ನು ಕಾಪಾಡು. ಅವನ ಬುದ್ಧಿ ನೆಟ್ಟಗಿರಲಿ, ಕೆಟ್ಟು ಹೋಗದಿರಲಿ! ತುಂಗಾವತಮ್ಮಾ, ನಿನಗೊಂದು ಸೀರೆ ಅರ್ಪಿಸುತ್ತೇನೆ. ಹುಚ್ಚುರಾಯ ಸ್ವಾಮಿಗೆ ಹನ್ನೆರಡು ಈಡುಗಾಯಿ ಹೊಡೆಸುತ್ತೇನೆ.' ಎಂದು ಸಂಕಲ್ಪಮಾಡಿಕೊಂಡರು.

ಇದಾದ ಮೇಲೆ ನಾಲ್ಕೈದು ದಿನ ಹನುಮಂತ ಎಲ್ಲರ ಹಾಗೆಯೇ ಇದ್ದ. ಎಲೆ ಮುಂದೆ ಕುಳಿತರೆ ಸಾರು ಹುಳಿ ಚಟ್ನಿ ಎಲ್ಲವನ್ನೂ ಕಲಸಿಕೊಂಡು ಹೊಟ್ಟೆತುಂಬಾ ಊಟಮಾಡುತ್ತಿದ್ದ. ನಿದ್ದೆಮಾಡುವಾಗಲೂ ಹೆಚ್ಚಾಗಿ ಕನವರಿಸಲಿಲ್ಲ. ಬಟ್ಟೆಗಳನ್ನು ಸಾಬೂನು ಹಾಕಿ ಬೆಳ್ಳಗೆ ಮಡಿಮಾಡಿ ಅಚ್ಚುಕಟ್ಟಾಗಿ ಉಟ್ಟುಕೊಳ್ಳುತ್ತಿದ್ದ. ಕೂದಲನ್ನು ಬಾಚಿಕೊಳ್ಳುವನು. ಎಲ್ಲ ದೇವರ ಕೃಪೆಯೂ ಒಂದಾಗಿ ಸೇರಿ ಹನುಮಂತನನ್ನು ಕಾಪಾಡಿತು, ಎಂದು ತಾಯಿತಂದೆಯರು ನಲಿದರು.

ಅಷ್ಟಮಿ ದಿನ. ರಾತ್ರಿ. ಆನಂದರಾಯರು ಎಲೆ ಅಡಿಕೆ ಅಗಿಯುತ್ತಿದ್ದರು. ಹನುಮಂತ ಭೀಮರಾಯರ ಮನೆಯಿಂದ ಹಿಂತಿರುಗಿ ಬಂದ ಒಡನೆ ನೆಟ್ಟಗೆ ತಂದೆಯ ಕೋಣೆಗೆ ಹೋಗಿ ಕೊಂಚ ಗಟ್ಟಿಯಾಗಿ 'ಅಪ್ಪಾ' ಎಂದ. ಉದಾರಶಿರೋಮಣಿಗಳಿಗೆ ಎದೆ ನಡುಗಿತು. 'ಏನೋ, ಹನು?' ಎಂದು ಅವರು ಸಾವಧಾನದಿಂದ ಮಾತನಾಡಿಸಿದರು. 'ಅಪ್ಪಾ! ನಮ್ಮ ಮನೆಗೆ ನಾಳೆ ಮಿಲಿಟರಿಯವರು ಬಂದರೆ ನೀನು ಹೆದರಿ ಓಡಿಹೋಗುವುದಿಲ್ಲ ತಾನೆ?' ಎಂದ.

'ಅಯ್ಯೋ ಗ್ರಹಚಾರವೇ! ನನ್ನ ವಂಶದಲ್ಲಿ ತಾತ ಮುತ್ತಾತರು ಯಾರಿಗೂ ಹುಚ್ಚು ಅನ್ನುವುದೇ ಇರಲಿಲ್ಲವಲ್ಲಾ? ಅವಳ ಕಡೆಯಿಂದ ಎಲ್ಲಾದರೂ ವಕ್ರಿಸಿತೋ ಏನೋ? ಪಾಪ. ಸಾವಿರ ನೂರು ಕೈತುಂಬ ಸಂಬಳ ತರದೇ ಇದ್ದರೂ ಇವನ ಬುದ್ಧಿಯಾದರೂ ನೆಟ್ಟಗಿರಬಾರದೇ? ಅವನನ್ನು ಬೈದು ಏನು ಫಲ? ನನ್ನ ಪಾಪಶೇಷ!' ಎಂದು ಆನಂದರಾಯರು ಬಹಳ ಹೊತ್ತು ನೊಂದುಕೊಂಡರು. ಆ ದಿನ ರಾತ್ರಿ ಅವರಿಗೆ ನಿದ್ದೆಯೇ ಇಲ್ಲ; ಯಾವುಯಾವುದೋ ಕೆಟ್ಟ ಕನಸುಗಳು....

ಬೆಳಿಗ್ಗೆ ಮೇಜರ್ ಭೀಮರಾಯರು ಉದಾರಶಿರೋಮಣಿಗಳ ಮನೆಗೆ ದಯಮಾಡಿಸಿದರು! ಹನುಮಂತ ಹೇಳಿದ ಮಿಲಿಟರಿಯವರು ಭೀಮರಾಯರೇ ಇರಬೇಕೆಂದು ಅವನ ತಂದೆಗೆ ಆಗ ಗೊತ್ತಾಯಿತು. ಮೇಜರ್‌ರವರ ಪರಿಚಯವು ಆನಂದರಾಯರಿಗೆ ಹೆಚ್ಚಾಗಿರಲಿಲ್ಲ; ಆದರೂ ಅಲ್ಲಿ ಇಲ್ಲಿ ಆಗಾಗ ಅಲ್ಪಸ್ವಲ್ಪ ನೋಡಿ ಮಾತನಾಡಿಸಿದ್ದರು. ದೊಡ್ಡಮನುಷ್ಯರು; ದೊಡ್ಡ ಹುದ್ದೆಯಲ್ಲಿದ್ದವರು; ನೊಂದ ಜೀವಿ; ಹೊಸದಾಗಿ ಬಂದಿದಾರೆ; ತೇರಿನ ರಸ್ತೆಯಲ್ಲಿ ಸುಬ್ಬಣ್ಣನವರ ಮನೆಯನ್ನು ಕೊಂಡುಕೊಂಡರು; ಎಂಬ ಇಷ್ಟು ಸಮಾಚಾರಗಳು ಮಾತ್ರ ಅವರಿಗೆ ತಿಳಿದಿತ್ತು. ಹನುಮಂತ ಮನೆಯಲ್ಲಿರಲಿಲ್ಲ. ಸುಂದರಮ್ಮನವರು ಕಾಫಿ ಮಾಡಿ ತಂದು ಬಾಗಿಲ ಸಂದಿನಿಂದ ಸನ್ನೆ ಮಾಡಿದರು. ಕಾಫಿ ಕುಡಿಯುತ್ತಾ ಮೇಜರ್ ಭೀಮರಾಯರು—ಉದ್ದಕ್ಕೆ ಬೆಳ್ಳಗೆ ಬಾಗಿ ಬೆಳೆದಿರುವ ಗಂಭೀರ ವ್ಯಕ್ತಿ—'ನಾವು ಕರ್ನಾಟಕರು' ಎಂದರು. ಆ ಮಾತು ಸುಂದರಮ್ಮನವರಿಗೆ ಅರ್ಥವಾಯಿತು.

'ಒಳ್ಳೆಯದು ಅದರಿಂದೇನು? ನೀವು ಕರ್ನಾಟಕರು ನಾವು ಕಮ್ಮೆಗಳು. ಇದರಲ್ಲೇನಿಲ್ಲಾ ಏನಿದೆ ಮಹಾ?' ಎಂದರು ಉದಾರಶಿರೋಮಣಿಗಳು.

' ತಾವು ಅಷ್ಟುಮಟ್ಟಿಗೆ ಅಭಯಕೊಟ್ಟರೆ ಆಂಜನೇಯನ ಕೃಪೆಯಿಂದ ನಾನು ಬದುಕಿದೆ. '

' ಹೌದು, ಹೌದು, ನಿಮಗೆ ಹನುಮಂತನ ಮೇಲೆ ತುಂಬಾ ಪ್ರೀತಿ ಎಂದು ಕೇಳಿ...... '

' ಅದಕ್ಕಾಗಿಯೇ ನಾನು ಇಲ್ಲಿಗೆ ಬಂದದ್ದು. ನೀವು ವರ ಕೊಟ್ಟರೆ ....ಉದಾರ ಮನಸ್ಸಿನಿಂದ.... '

' ಅಂತಹ ದೊಡ್ಡ ಮಾತನ್ನ ತಾವು ಉಪಯೋಗಿಸಬಾರದು. ಏನೋ, ಹಾಳೂರಿಗೆ ಉಳಿದವನೇ ಗೌಡ ಎಂಬುವ ಹಾಗೆ ನಾಲ್ಕು ಜನ ಸೇರಿ ನನ್ನ ಮೇಲೆ ದೃಷ್ಟಿ ಹಾಕಿ ಉದಾರಶಿರೋಮಣಿ ಬಿರುದನ್ನ ನನ್ನ ತಲೆಗೆ ಕಟ್ಟಿದರು. ಅದನ್ನು ನೋಡಿಕೊಂಡು ನಿಮ್ಮ ಹಾಗೆ ಅನೇಕರು.... '

' ನನಗಿನ್ನೇನು ಬೇಡ, ನಿಮ್ಮಲ್ಲಿ ಇರುವ ಪದಾರ್ಥವೇ! ಆಂಜನೇಯನ ಕೃಪೆಯಿಂದ ಒಂದು ವರ.... '

' ಅಂದರೆ ನನಗೆ ಅರ್ಥವಾಗಲಿಲ್ಲ. '

ಒಳಗೆ ನಿಂತು ಇಬ್ಬರ ಮಾತನ್ನೂ ಕೇಳುತ್ತಿದ್ದ ಸುಂದರಮ್ಮನವರಿಗೆ ತಡೆಯಲಾಗಲಿಲ್ಲ. ' ಹನುಮಂತನ ಜಾತಕ ಕೇಳುವುದಕ್ಕೆ ಬಂದಿದಾರೆ ಅಂದರೆ, ಇದನ್ನ ತಿಳಿದುಕೊಳ್ಳಲಾರದೆ ಪೇಚಾಡುತ್ತಿದೀರಲ್ಲಾ, ' ಎಂದು ಹೇಳೇಬಿಟ್ಟರು.

' ಇಲ್ಲ, ತಾಯಿ, ಹಾಗಲ್ಲ. ಜಾತಕ ಬೇಕೇ ಇಲ್ಲ ನನಗೆ. '

ಸುಂದರಮ್ಮನವರ ಕೈಯಲ್ಲಿದ್ದ ಕಾಫಿ ಬಟ್ಟಲು ಕೆಳಗೆ ಬಿತ್ತು.

' ಆಂಜನೇಯನ ಕೃಪೆಯಿಂದ ಅವರಿಬ್ಬರೂ ಆಗಲೇ ಒಪ್ಪಿದ್ದಾರೆ. '

' ಯಾರಿಬ್ಬರೂ? ' ಎಂದು ಇಬ್ಬರೂ ಕೇಳಿದರು.

' ಹನುಮಂತರಾಯರೂ, ನನ್ನ ಮಗಳು ಲಲಿತುವೂ....ಈಗ ನೀವು ಅಸ್ತು ಅನ್ನುವುದೊಂದೇ ಬಾಕಿ...ನಾಳೆ ಶುಕ್ರವಾರದ ಲಗ್ನದಲ್ಲೇ.... '

' ತಾವು ಇಷ್ಟು ದೂರ ಬಂದು......ಇಷ್ಟು ದೊಡ್ಡಮನುಷ್ಯರಾಗಿ.... '

' ಅಯ್ಯೋ ಅಯ್ಯೋ...... '

'ಹಾಗಲ್ಲ, ತಾವು ಹಾಗನ್ನಬಾರದು. ವಧೂ-ವರರ ಸಾಮ್ಯಕ್ಕಿಂತ ಬೀಗ ಬೀಗರ ಸಾಮ್ಯವನ್ನೇ ಹೆಚ್ಚಾಗಿ ನೋಡಬೇಕಾದ್ದು. ತಾವು ಇಷ್ಟು ಶ್ರೀಮಂತರಾಗಿದ್ದು....'

'ಇದ್ದಿರಬಹುದು. ಆದರೂ ನಾನೇನು ನಿಮಗಿಂತ....'

'ಹಾಗಲ್ಲ, ಹಾಗಲ್ಲ, ತಮ್ಮ ಅಂತಸ್ತೇನು? ಅಧಿಕಾರವೇನು?....'

'ಛೆ, ಛೆ, ಸುಮ್ಮನಿರಿ ಹಾಗೆಲ್ಲ ಹೇಳಬೇಡಿ....'

'ತಮ್ಮ ಯೋಗ್ಯತೆಯೇನು?....'

'ತ್ಸು, ತ್ಸು, ಹಾಗೆ ಹೇಳಬೇಡಿ ಅಂದರೆ....'

'ನಾವು ತೀರ ಬಡವರು. ತಾವೋ....'

'ಶಾಂತಂ ಪಾಪಂ, ಎಲ್ಲಾದರೂ ಉಂಟೆ? ಛೆ, ಛೆ,....'

'ತಮ್ಮ ಮಾತಿಗೆ ಆಗುವುದಿಲ್ಲ ಎಂದು ಎದುರು ಮಾತಾಡುವುದು ಸಾಧ್ಯವೇ?....'

'ಹಾಗನ್ನಬೇಡಿ, ಕೆಲವು ತೊಂದರೆಗಳಿರಬಹುದು. ಮೊದಲನೆಯದಾಗಿ, ಆಂಜನೇಯನ ಕೃಪೆಯಿಂದ, ನಾವು ಕರ್ನಾಟಕರು....'

'ಚಿಂತೆಯಿಲ್ಲ, ಶ್ರೀರಾಮನ ಕೃಪೆಯಿಂದ ನಾವಿಬ್ಬರೂ ಬ್ರಾಹ್ಮಣರೇ.'

'ಆಮೇಲೆ ಎರಡನೆಯದಾಗಿ ನಮ್ಮದು ಕೌಂಡಿನ್ಯಗೋತ್ರ..'

'ನಮ್ಮದು ಭಾರದ್ವಾಜ....ಮತ್ತೇನು?'

'ಹಾಗಾದರೆ ಆಂಜನೇಯನ ಕೃಪೆಯಿಂದ....'

'ಶುಭಸ್ಯ ಶೀಘ್ರಂ.'

—

*

## ಹತ್ತನೆಯ ಅಧ್ಯಾಯ

### ಅವಳಿಜವಳಿಯ ಜಗಳ



ಕೆನೆವಾಲ ಕಡೆದು ನವನೀತಮಂ ತೆಗೆದು ಬಾ
ಯ್ಗಿನಿದಾಗಿ ಸವಿಯದದರೊಳಗೆ ಪುಳಿವಿಳಿದು ರಸ
ವನೆ ಕೆಡಿಸಿದೊಡೆ.........................................ಲಕ್ಷ್ಮೀಶ

ಒಮ್ಮತವು ಒಗ್ಗಟ್ಟು ಒಂದೇ ಮನವು ಎಲ್ಲಿದೆ ಹೇಳಿರಿ.................. ಕವಿಶಿಷ್ಯ

ಮನೆಯೆ ಮುನಿದಿದ್ದಿರಲು ಯಾ ದೇಶವೇನು ?......ಅಂಬಿಕಾತನಯದತ್ತ



ಮೇಜರ್ ಭೀಮರಾಯರು ಯಾವೊಂದು ಕೆಲಸ ಕಾರ್ಯವನ್ನೂ ತಮ್ಮ ಇಷ್ಟದೇವತೆಯ ಅಪ್ಪಣೆಯಿಲ್ಲದೆ ಮಾಡತೊಡಗುತ್ತಿರಲಿಲ್ಲ. ಆದ್ದರಿಂದ, ' ವಿಚಿತ್ರ ' ಮುದ್ರಣಾಲಯದಿಂದ ತಂದ ನಾಲ್ಕೈದು ನಮೂನೆ ಲಗ್ನಪತ್ರಿಕೆಗಳನ್ನೂ ಆಂಜನೇಯನ ಮುಂದಿಟ್ಟು ಅವರು ಕಣ್ಣುಮುಚ್ಚಿ ಕಲೆಸಿ, ಒಂದು ಪ್ರಾರ್ಥನಾಶ್ಲೋಕವನ್ನು ಹೇಳಿ ಮುಗಿಸಿ, ಅನಂತರ ಅವುಗಳಿಂದ ಒಂದನ್ನು ಹೊರತೆಗೆದು, ನೆಟ್ಟನೆ ಅಚ್ಚುಕೂಟಕ್ಕೆ ಕಳುಹಿಸಿಕೊಟ್ಟರು! ಹಿಂದಿನ ದಿನ ಮುದ್ರಣಾಲಯಕ್ಕೆ ಹೋಗಿದ್ದಾಗ ಅವರು ' ಈಚೆಗೆ ಜನಪ್ರಿಯವಾಗಿರುವ ಹೊಸ ರೀತಿಯಲ್ಲಿ ನಿಮ್ಮ ಲಗ್ನಪತ್ರಿಕೆಯನ್ನು ಅಚ್ಚುಹಾಕಿಸುತ್ತೀರೋ, ಅಥವಾ ಹಿಂದಿನ ಹಳೆಯ ನಮೂನೆಯೇ ಸಾಕೊ ? ' ಎಂದು ಕೇಳಿದರು. ಭೀಮರಾಯರಿಗೆ ದಿಗ್ಭ್ರಮೆ ಹಿಡಿಯಿತು. ಆಂಜನೇಯನನ್ನೇ ಕೇಳಿಬಿಡೋಣವೆನಿಸಿತು. ಆಂಜನೇಯನ ಒಪ್ಪಿಗೆಯನ್ನು ಪಡೆದದ್ದು

'ವಿಚಿತ್ರ' ಪ್ರೆಸ್ಸಿನ ೩ನೇ ನಂಬರ್ ಲಗ್ನಪತ್ರಿಕೆ!......ಆದರೂ ಭೀಮರಾಯರಿಗೆ ಕೊಂಚ ಅಸಮಾಧಾನವೇ! ೧ನೇ ನಂಬರಿನ ಹಳೆಯ ಪದ್ಧತಿಯು ಲಕ್ಕೋಟಿ ತನ್ನ ಕೈಗೆ ಸಿಗಬಾರದಾಗಿತ್ತೆ, ಎಂದು ಅವರು ಮನಮರುಗಿದರು. ೧ನೇ ನಂಬರಾಗಿದ್ದರೆ ಯಥಾಪ್ರಕಾರ, 'ಇಂತಹ ದಿವಸ ಇಂತಹ ಕಾರ್ಕೋಟಕ ಲಗ್ನದಲ್ಲಿ ಇಂತಹವರನ್ನು 'ತಂದು' ಇಂತಹವಳಿಗೆ 'ಕೊಟ್ಟು' ಇನ್ನು ಸೀವಾಯಿತು ನಿಮ್ಮ ಪಾಡಾಯಿತು ನಮ್ಮನ್ನೇನೂ ಕೇಳಬೇಡಿ, ಎಂದು ಮುಂದಕ್ಕೆ ತಳ್ಳಲು ಇಂತಿಂತಹವರು ಇಂತಹವರ ಪ್ರೇರಣೆಯಿಂದ ನಿಶ್ಚಯಿಸಿರುವರಾದ್ದರಿಂದ ತಾವು ಬಾಧು-ಮಿತ್ರ-ಕುಟುಂಬ-ಪರಿವಾರ-ಪರಿಜನ-ಚತುರಂಗ-ಸೇನಾಸಮೇತರಾಗಿ ನಾಲ್ಕು ದಿನ ಮುಂಚೆಯೇ ಬಂದರೆ ಆ ದಿನ ಸಂಜೆ ತನಕ ಉಪವಾಸವಿದ್ದು ಒಂದು ಸಣ್ಣ ಸೈಜಿನ ತೆಂಗಿನ ಕಾಯನ್ನು ತೆಗಿದುಕೊಂಡು ಹೊರಡಬಹುದು ಇತಿ ತಮ್ಮ ವಿಧೇಯನಾದ ಇಂಥಾವನು ಮತ್ತು ಇಂಥಿಂಥಾವರು' ಎಂದು ಅಚ್ಚಾಗುತ್ತಿತ್ತು. ಆದರೆ, ಆಂಜನೇಯನ ಕೃಪೆಯಿಂದ ಅಚ್ಚಾಗಿ ಬಂದ ೩ನೇ ನಂಬರು ಈ ರೀತಿ ಇತ್ತು:

## ಲ ಲಿ ತಾ ವಿ ವಾ ಹ

—❖—

**ವಿಚಿತ್ರದುರ್ಗ ತೇರಿನ ರಸ್ತೆ ೧೧೧ ನೇ ನಂಬರ್ ಮನೆಯಲ್ಲಿ ೨೦-೬-೩೯ರಲ್ಲಿ**
**ಮಧ್ಯಾಹ್ನ ೧ರಿಂದ ೧-೩೦ರ ವರೆಗೆ ಶುಭಮುಹೂರ್ತ.**
**ತಕ್ಕಮಟ್ಟಿಗೆ ವಿಜೃಂಭಣೆಯಿಂದ ನಡೆಸಲಾಗುತ್ತದೆ**
**ವಧೂವರರನ್ನು ಆಶೀರ್ವದಿಸಲು ಬರುವವರೆಲ್ಲರಿಗೂ ಸುಸ್ವಾಗತ !**

### ಮುಖ್ಯ ಪಾತ್ರಗಳು

**೧. ಮಿಡ್ಲಿಸ್ಕೂಲ್ ಪರೀಕ್ಷೆಯಲ್ಲಿ ಚರಿತ್ರೆಗೆ ಮಾತ್ರ ಎರಡು ನಂಬರ್ ಕಡಿಮೆ ಬಂದದ್ದರಿಂದ ಪಾಸಾಗದ, ಬಾಲಿಕಾ ಪಾಠಶಾಲೆ ಹಾರ್ಮೋನಿಯಂ ಸ್ಪರ್ಧೆ ನಡೆಯುತ್ತಿದ್ದಾಗ ಒಂದು ಬೆಳ್ಳಿ ಪದಕವನ್ನು ಸಂಪಾದಿಸಿದ ಶ್ರೀಮತಿ ಎಂ. ಬಿ. ಲಲಿತು— ವಧು**

| | | |
|---|---|---|
| ೨. | ಖಾಲಿಬಿಸೂರು ತಾಲೂಕು ಮುರುಕುಹಳ್ಳಿ ಜಮೀನ್‌ದಾರ್ ಭೀಮರಾಯರು, ಉರುಫ್ **ಮೇಜರ್ ಭೀಮರಾಯರು**— | ವಧುವಿನ ತಂದೆ. |
| ೩. | ದಡಾಗದ ಹುಂಡಿ ಜಹಗೀರುದಾರರು (ಧಾರೆ ಎರೆದು ಕೊಡುವವರು) ಶ್ರೀಕಂಠಯ್ಯನವರು— | ೧ರ ಸೋದರಮಾವ. |
| ೪. | ನಂ. ೧.ಗೆ ತಮ್ಮನಿಲ್ಲವಾದ್ದರಿಂದ ಲಾಜಹೋಮಕ್ಕೆ ಅರಳು ಹಾಕುವುದು, ಹೊಳಲು ಸುತ್ತುವಾಗ ಕಂಟಿ ಹೊರುವುದು, ತಾಂಬೂಲ ಕೊಡುವುದು, ಇತ್ಯಾದಿ ಕೆಲಸಗಳನ್ನು ಮಾಡಲು ದಯವಿಟ್ಟು ಒಪ್ಪಿರುವ **ಅಚ್ಚು**— | ೩ರ ಮಗ. |
| ೫. | **ಜಯಲಕ್ಷಮ್ಮನವರು**— | ವಧುವಿನ ತಾಯಿ |
| ೬. | **ಟೈಗರ್ ಸುಬ್ಬಾಶಾಸ್ತ್ರಿ**— | ಪುರೋಹಿತರು. |
| ೭. | ಇಂದಾ-ಗೆ ಗುಮಾಸ್ತೆ ಹನುಮಂತರಾಯರು— | ವರ. |
| ೮. | ಉದಾರಶಿರೋಮಣಿ ವಿ. ಆನಂದರಾಯರು— | ವರನ ತಂದೆ |
| ೯. | ನಂಬರ್ ೭ಗೆ ಸಹೋದರಿಯರಿಲ್ಲವಾಗಿ ವರಪೂಜೆ ದಿನ ವರನ ತಲೆಗೆ ಗರಿಕೆ ಸಿಕ್ಕಿಸುವುದಕ್ಕೂ, ಲಗ್ನವಾದ ಮೇಲೆ ದಂಪತಿಗಳ ಎಂಜಲೆತ್ತುವುದಕ್ಕೂ ದಯವಿಟ್ಟು ಒಪ್ಪಿರುವ, ನಂ. ೧೩ರ ಮಗಳು..**ಮಾಚ್ಚಿ**— | ವರನ ಸೋದರ-ಮಾವನ ಮಗಳು. |
| ೧೦, ೧೧, ೧೨. | ಶ್ರೀನಿವಾಸರಾವು, ಬಿ. ಎ., ರಾಮು—, ಲಚ್ಚು, | ವರನ ತಮ್ಮಂದಿರು |
| ೧೩. | [ಸಾವಿತ್ರಮ್ಮನವರು]— | [೯ರ ತಾಯಿ.] |
| ೧೪. | ಮೃತ್ಯುಂಜಯರಾಯರು— | ನಂ. ೧೩ರ ಹಿರಿಯ ಮಗ. |
| ೧೫. | ಗುಂಡೂರಾಯರು— | ೧೪ರ ತಮ್ಮ. |
| ೧೬. | ಸುಂದರಮ್ಮನವರು— | ವರನ ತಾಯಿ. |

---

ವಾಲಗ: ನೆಗಡಿ ಪಾಪಣ್ಣನವರಿಂದ.

ಅಡಿಗೆ: ನಳಪಾಕಂ ನಾರಾಯಣಾಚಾರ್ ಮತ್ತು ಗೆಳೆಯರು.

ಮಿಕ್ಕವರು ಅವಶ್ಯಬಿದ್ದಂತೆ.

---

ಈ ಪ್ರಕಾರ ಲಗ್ನಪತ್ರಿಕೆಯನ್ನು ಅಚ್ಚು ಹಾಕಿದ್ದರಿಂದ ತಿಂಗಳೂರು ಮುಂತಾದ ಕಡೆಯ ನವನಾಗರಿಕರಿಗೇನೋ ಮೆಚ್ಚುಗೆ ಆಗಬಹುದು. ಆದರೆ, ಹಿಂದುಜೀವಿಯಾದ ಉದಾರಶಿರೋಮಣಿಗಳಿಗೆ ಕೊಂಚ ಮನ ನೊಂದಿತು. ಆಂಜನೇಯನ ಚಿತ್ತ ಅಂತ ಭೀಮರಾಯರು ಹೇಳಿದ್ದರಿಂದ ಅವರು ಮರುಮಾತನಾಡಲಿಲ್ಲ. ಹನುಮಂತ ಮಾತ್ರ ತನ್ನ ಮದುವೆಯ ಲಗ್ನ ಪತ್ರಿಕೆ ಇಷ್ಟು ಮುಂದುವರಿದಿದೆಯಲ್ಲಾ ಅಂತ ಆನಂದಪಟ್ಟು ಹತ್ತಾರು ಸಲ ಅದನ್ನು ಓದಿ ಕುಣಿದಾಡಿದ. ಅವನಿಗೆ ಎಲ್ಲಿ ಮನಸ್ತಾಪವಾಗುತ್ತದೋ ಎಂಬ ಭಯದಿಂದ ಆನಂದರಾಯರೂ ಮೃತ್ಯು, ಶೀನ, ಗುಂಡ ಮುಂತಾದವರೂ ಸುಮ್ಮನಿದ್ದರು ! ಹೇಗೋ, ಹನುಮಂತನಿಗೆ ಮದುವೆ ಅಂತ ಒಂದು ನೆರವೇರಿಬಿಟ್ಟರೆ, ಶೀನನಿಗೆ ಯೋಗ್ಯರಾದ ಒಬ್ಬರನ್ನು ಮಾವಂದಿರಾಗಿ ಹುಡುಕಿ ತರಬೇಕೆಂದು ಉದಾರಶಿರೋಮಣಿಗಳು ನಿರ್ಧರಿಸಿದರು. ಲಗ್ನ ಪತ್ರಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಕುರ್ಚಿಯಲ್ಲೇ ಕುಳಿತು ಬಿಸುಸುಯ್ದರು !

ಆದರೆ ಸುಂದರಮ್ಮನವರಿಗೂ, ಮೃತ್ಯುವಿನ ತಾಯಿಗೂ ಇಂತಹ ಹೊಸ ವಿಧಾನಗಳೂ ಆಟಾಟೋಪಗಳೂ ಬೇಕಿರಲಿಲ್ಲ. 'ಶುದ್ಧ ನಾಚಿಕೆಗೇಡು ಅಂದರೆ, ಇದೇನು ಅವಲಕ್ಷಣ ? ಮದುವೆಯೋ ನಾಟಕವೋ ನಾಳೆ ಆಗುವುದು ? ಬೀಡಿ ಸಿಗರೇಟು ಸೇದಬಾರದು, ಬೀಗರು ಕೂಡುವ ಸ್ಥಳದಲ್ಲಿ ಕಾರಣವಿಲ್ಲದೆ ಇತರರು ಕುಳಿತರೆ ಪೋಲೀಸರ ವಶಕ್ಕೊಪ್ಪಿಸಲಾಗುವುದು, ಎಂದು ಕೂಡ ಅಚ್ಚು ಹಾಕಿಸಬಹುದಾಗಿತ್ತಲ್ಲಾ.' ಎಂದು ಅವರು ಉರಿದು ಬಿದ್ದರು. ಅದಕ್ಕೆ ಆನಂದರಾಯರು, 'ಸುಮ್ಮನಿರಿ ನೀವು. ಬಾಯಿಬಿಟ್ಟು ಒಂದು ಮಾತನ್ನೂ ಆಡಬೇಡಿ. ಹೇಗೋ ಅವನಿಗೆ ಮದುವೆ ಅಂತ ಆಗಿ ಹೋಗಿ ಬಿಡಲಿ....ಹನುಮಂತನ ಮದುವೆಯೂ ಕೂಡ ಎಲ್ಲಿ ಗಣೇಶನ ಮದುವೆಯ ಹಾಗೆ ಆಗಿಬಿಡುತ್ತದೋ ಅಂತ ನನಗೆ ಭಯ. ಭೀಮರಾಯರು ಸೈನ್ಯದಲ್ಲಿದ್ದವರು. ಕಪಿಮುಷ್ಟಿ. ಹಠಮಾರಿ. ಅವರ ಇಷ್ಟ ಹೇಗೋ ಹಾಗೆಯೇ ಆಗಲಿ.' ಎಂದರು....

ಸ್ತ್ರೀಯರು ಪುರುಷರ ಮಾತಿನಂತೆ ನಡೆದಿದ್ದರೆ ಪ್ರಪಂಚದ ಚರಿತ್ರೆಯೇ ಬೇರೆ ರೀತಿ ಮುಂದೆ ಸಾಗುತ್ತಿತ್ತು. ಆನಂದರಾಯರ ಮಾತನ್ನ ಒಬ್ಬರೂ ಕೇಳ-

ಲಿಲ್ಲ. ವರಪೂಜೆಗೆ ಹನುಮಂತನನ್ನು ನಡೆಸಿಕೊಂಡೇ ಹೋದರಂತೆ; ದೊಡ್ಡ ರಂಪವಾಗಿ ಹೋಯಿತು. ಸುಂದರಮ್ಮನವರೂ ಅವರಿಗಿಂತ ಹೆಚ್ಚಾಗಿ ನಂ. ೯ ಮತ್ತು ೧೩ ಇವರು ಯದ್ವಾತದ್ವಾ ರೇಗಲು ಪ್ರಾರಂಭಿಸಿದರು. ಗಲಾಟೆ ಭೀಮರಾಯರ ಕಿವಿಯನ್ನೂ ಮುಟ್ಟಿತು....ಆದರೆ, ಅವರಿಗೆ ಗತ್ಯಂತರವಿರ ಲಿಲ್ಲ. ವಿಚಿತ್ರದುರ್ಗದಲ್ಲಿ ಇದ್ದ ಒಂದು ಟ್ಯಾಕ್ಸಿಗೆ ಆ ದಿನ ಒಂದು ಚಕ್ರ ಕಳಚಿಹೋಗಿಬಿಟ್ಟಿತ್ತು; ಎಂತಹ ಮೇಜರ್ ಬಂದು ಗುಟುರು ಹಾಕಿದರೂ ಅದರ ರಿಪೇರಿ ಮುಗಿಯಲಿಲ್ಲ......ಸುಂದರಮ್ಮನವರ ಕೋಪ ಕೊಂಚ ಇಳಿಮುಖವಾಯಿತೋ ಏನೋ ಎಂಬ ಅನುಮಾನ ಬಂದರೆ, ಸಾವಿತ್ರಮ್ಮ ನವರು ಅದನ್ನು ಊದಿ ಹೊತ್ತಿಸುವರು: 'ಈ ಜನ ಇಷ್ಟು ಜಿಪುಣರು ಅಂತ ಗೊತ್ತಾಗಿರಲಿಲ್ಲವೇ?' ಎಂದು ತಿವಿಯುವರು. ಆಗ, ಆಕೆ, 'ಅಯ್ಯೋ! ಬಂದು ಬಂದು ಮನೆ ಬಾಗಿಲಲ್ಲಿ ಬಡಿದುಕೊಂಡರಲ್ಲಾ ಅಂತ ನಾವೂ ಹೂಂ ಅಂದೆವು......ಜನವಲ್ಲ; ಜಾತಿಯಲ್ಲ; ಕಂಡಿಲ್ಲ; ಕೇಳಿಲ್ಲ' ಎಂದು ಹೇಳು ವಷ್ಟರಲ್ಲೇ, ಸಾವಿತ್ರಮ್ಮನವರು, 'ನಿಮ್ಮ ಹಿರಿಯ ಮಗನಿಗೆ ಮೊದಲನೆಯ ಮದುವೆ! ವರಪೂಜೆಗೆ ಒಂದು ಮೋಟಾರು ಬೇಡವೆ? ಎರಡೇ ಎರಡು ಗ್ಯಾಸ್ ಲೈಟ್ ಸಾಕೆ?' ಎಂದರು. 'ಉದಾರಶಿರೋಮಣಿ ಅಂತ ಊರಿ ನವರೆಲ್ಲಾ ಕೊಂಡಾಡುತ್ತಾ ಇರುವ ಬೀಗರು ಸಿಕ್ಕಿದರೂ ಇಷ್ಟೇನೆ ಇವರ ಉಪಚಾರ.' ಅಂತ ಮಾಚ್ಚಿ ಕೂಡ ಮೆಲ್ಲಗೆ ಉರಿ ಹೊತ್ತಿಸಿದಳು.

ಮರುದಿನ ಬೆಳಗ್ಗೆ ಕಾಶಿಯಾತ್ರೆ ಹೊರಡುವಾಗ ಹನುಮಂತನಿಗೆ ಕೊಟ್ಟ ಒಂದೂಕಾಲು ರೂಪಾಯಿ ಕೊಡೆಯ ಮೇಲೂ ಕೂಡ ಕಟುವಾದ ಟೀಕೆಗಳಾದುವು. ಮುಹೂರ್ತ ಸಮಯದಲ್ಲೂ ಪಿಸುಪಿಸಾ ಗುಸುಗುಸಾ ಅಂತ ಮಾತುಗಳು ಹೊರಟುವು. ಪುರೋಹಿತರ ತಂಡದಲ್ಲಿ ಈ ಮಂತ್ರವನ್ನ ಸರಿಯಾಗಿ ಹೇಳಲಿಲ್ಲ, ಹೀಗೆ ಮಾಡಿಸಬೇಕಾಯಿತು, ಹಾಗೆ ಬಳಸಿ ಬರ-ಬೇಕಾಯಿತು, ಎಂಬ ಜಗಳಗಳೆದ್ದು ವಿಪರೀತಕ್ಕಿಟ್ಟುಕೊಂಡಿತು. ಆನಂದ-ರಾಯರ ಮನೆ ಹೆಂಗಸರ ನಡುವೆ ವಧುವಿನ ಮೂಗಿನ ಮೇಲೆ ಇಲ್ಲದ ಸಲ್ಲದ ವ್ಯಾಖ್ಯಾನಗಳಾದುವು. ಲಲಿತು ಲಕ್ಷಣವಾದ ಹುಡುಗಿ; ಒಪ್ಪಲೇ ಬೇಕು. ಆದರೂ ಭಗವಂತ ಆಕೆಯ ಮೂಗನ್ನ ಇನ್ನೂ ಕೊಂಚ ಶ್ರಮ ವಹಿಸಿ ತಿದ್ದಿದ್ದರೆ ಅವಳ ಮುಖಕ್ಕೆ ಮತ್ತಷ್ಟು ವರ್ಚಸ್ಸು ಬರುತ್ತಿತ್ತು.

ಹನುಮಂತನಿಗೂ ಕೂಡ ಧಾರೆ ಸಮಯದಲ್ಲಿ ಹಾಗೆ ಅನ್ನಿಸಿತು. ಅವರಿವರು ಆಡುತ್ತಿದ್ದ ಮಾತು ಕಿವಿಗೆ ಬಿದ್ದಿದ್ದರಿಂದ ಹನುಮಂತ ಆಗ ಪ್ರತ್ಯೇಕವಾಗಿ ಆ ಮೂಗನ್ನು ಪರೀಕ್ಷಿಸಿದ.

ಹೌದು. ಆ ಮುಖಕ್ಕೆ ಆ ಮೂಗು ಸುತರಾಂ ಹೊಂದುವುದಿಲ್ಲ. . ಇನ್ನೂ ಸ್ವಲ್ಪ ತೆಳ್ಳಗಿರಬೇಕಾಗಿತ್ತು; ಅಗಲ ಕಡಿಮೆ ಇರಬೇಕಾಗಿತ್ತು. ಅದಕ್ಕೆ ಅಸ್ತಿಭಾರವೇ ಸಾಲದು. ಎರಡು ಕಣ್ಣುಗಳ ನಡುವೆ ಮೂಗಿನ ಅಡಿಪಾಯವನ್ನು ಪತ್ತೆಮಾಡುವುದೇ ಕಷ್ಟ. ಅದು ಬಿಲ್ಲಿನಂತೆ ಬಾಗಿ ಬಾಯೊಳಗೆ ಬಗ್ಗಿ ನೋಡುತ್ತಿತ್ತು. ಎರಡು ಕಡೆಯಲ್ಲೂ ಚುಚ್ಚಿ ಮೂಗು ಬೊಟ್ಟು ತೊಡಿಸಿದ್ದರಿಂದ, ಅದನ್ನು ನೋಡುತ್ತಾ ನೋಡುತ್ತಾ ಹನು-ಮಂತನಿಗೆ ಒಂದು ಭಯಂಕರವಾದ ಹಕ್ಕಿಯ ಕೊಕ್ಕಿನ ನೆನಪಾಯಿತು.

ಎರಡು ತಿಂಗಳ ತನಕ ದಿನವೂ ಆ ಮೂಗು ತನ್ನೆದುರು ಕುಳಿತಿದ್ದರೂ ಕೂಡ, ಅದರ ವಿಲಕ್ಷಣ ವಿಕಾರವನ್ನು ಕಂಡುಹಿಡಿಯದೆ ಹೋದೆನಲ್ಲಾ ಎಂದು ಹನುಮಂತ ತನ್ನನ್ನೇ ಶಪಿಸಿಕೊಂಡ. 'ಹೆಣ್ಣು ನೋಡುವುದು' ಎಂಬ ಸಾಹಸದಿಂದ ಏನೂ ಪ್ರಯೋಜನವಿಲ್ಲವೆಂದು ಅವನಿಗೆ ಭಾಸವಾಯಿತು. ತನಗೆ ಪರಿಚಿತರಾದ ನೆಂಟರಿಷ್ಟರನ್ನೂ ಅವರ ಪತ್ನಿಯರನ್ನೂ ನೋಡಿದರೆ, ಒಬ್ಬರಿಗಾದರೂ ರೂಪವತಿಯಾದ ಹೆಂಡತಿ ಸಿಗದಿರುವುದಕ್ಕೆ ಇದೇ ಕಾರಣವಿರಬೇಕು ಎಂದು ನಿಶ್ಚಯಿಸಿದ. ಸ್ತ್ರೀಯ ಸೌಂದರ್ಯ ವಿಮರ್ಶೆಯನ್ನು ಮಾಡುವುದು ಪುರುಷನಿಂದ ಸಾಧ್ಯವಿಲ್ಲವೆಂದು ಅವನಿಗೆ ತಿಳಿಯಿತು. ಹಾಗಿಲ್ಲದಿದ್ದರೆ, ಲಲಿತು ಅಂತಹವರಿಗೆಲ್ಲಾ ಮದುವೆ ಆಗುವುದು ಹೇಗೆ, ಪಾಪ, ಎಂದು ಹೇಳಿ ಸಮಾಧಾನ ಹೊಂದಿದ.

'ನಮಗೇನು? ಸುಮ್ಮನಿರಿ! ಸೊಟ್ಟೋ ಸರಿಯೋ, ಗಿಡಗವೋ ಗರುಡನೋ, ಅವನು ನೋಡಿ ಒಪ್ಪಿದ್ದು ತಾನೆ? ಮದುವೆ ಮಾಡಿಕೊಂಡು ನಾಳೆಯಿಂದ ಸಂಸಾರ ಹೂಡುವವನೂ ಅವನೇ—ನಮಗೇನು?' ಎಂದು ಸುಂದರಮ್ಮನವರೂ ಇತರರೂ ಬಿಗಿ ಹಿಡಿದರು.

ಭೀಮರಾಯರ ಮನೆಯೊಳಗಿಂದ ಮದುವೆಚಪ್ಪರದಲ್ಲಾಗುವ ಸಂಭ್ರಮಗಳನ್ನೆಲ್ಲಾ ನೋಡುವುದಕ್ಕೆ ಎರಡು ಸಣ್ಣ ಕಿಟಕಿಗಳಿದ್ದುವು. ಆದರೆ, ಸುವಾಸಿನಿಯಲ್ಲದ ಸಾವಿತ್ರಮ್ಮನವರಿಗೆ ಧಾರೆ ಮುಂತಾದವುಗಳನ್ನು

ನೋಡಲು ಸ್ಥಳ ಸಿಗದಂತೆ, ಅಲ್ಲಿ ಇವರ ಹೆಣ್ಣುಮಕ್ಕಳು ಕಿಕ್ಕಿರಿದುಬಿಟ್ಟ ರಂತೆ; ಆಕೆ ಅದನ್ನೇ ಒಂದು ದೊಡ್ಡ ಪುಕಾರು ಮಾಡಿ ಅಳುತ್ತಾ ಮನೆ ಬಿಟ್ಟು ಹೊರಟರು. ಪರಿಸ್ಥಿತಿಯನ್ನರಿತ ಮೃತ್ಯು ಹನುಮಂತನನ್ನೇ ಎಬ್ಬಿಸಿ ಅಲ್ಲಿಗೆ ಕರೆತಂದು ಅವನಿಂದ ಕ್ಷಮಾಪಣೆಯ ಮಾತುಗಳನ್ನು ಹೇಳಿಸಿ, ಒಂದು ಕಿಟಿಕಿ ಸಂಪೂರ್ಣ ಆಕೆಗೇ ಮೀಸಲಾಗಿ ಕೊಡಿಸಿದ. ಅಲ್ಲಿಗೆ ಕೊಂಚ ಶಾಂತಿ ಆಯಿತು.

ಸಂಜೆ ೬-೩೦ರ ತನಕ ಗಂಡಸರ ಗುಂಪಿನಲ್ಲಿ ಎಲ್ಲವೂ ಸಮನೆಲೆಯಾಗಿಯೇ ಇತ್ತು. ನಗು, ತಮಾಷೆ, ಕಾಡುಹರಟೆ, ಇಸ್ಪೀಟು, ಚರ್ಚೆ, ಅವಾಂತರ! ಆದರೆ, ದಡಾರದ ಹುಂಡಿ ಜಹಗೀರ್‌ದಾರರ ದೆಸೆಯಿಂದ ಉದಾರಶಿರೋಮಣಿಗಳ ನೆಮ್ಮದಿಗೂ ತೃಪ್ತಿಗೂ ಹುಳಿ ಬಿತ್ತು. 'ಥೂ! ಈ ಸಂಬಂಧ ಬೆಳಸಬಾರದಾಗಿತ್ತು. ಚೆನ್ನಾಗಿ ವಿಚಾರ ಮಾಡಬೇಕಾಗಿತ್ತು. ಕೈಮೀರಿ ಹೋದದ್ದಕ್ಕೆ ಅತ್ತು ಫಲವಿಲ್ಲ. ಆದರೂ ಇಂತಹ ಪೆಚ್ಚು ಕೆಲಸ ಇನ್ನು ಮಾಡಬಾರದು. ಯಾರು ಎತ್ತ ಎಂದು ಪೂರ್ವಚರಿತ್ರೆಯನ್ನೆಲ್ಲಾ ತೋಡಿ ತೆಗೆದು ಪರಿಶೀಲಿಸಲೇಬೇಕು.' ಎಂದು ಹೇಳಿಕೊಳ್ಳುವಷ್ಟು ಅವರಿಗೂ ಮನಸ್ಸು ಕೆಟ್ಟಿತು. ಪಶ್ಚಾತ್ತಾಪದಿಂದ ಅವರ ಕಣ್ಣಲ್ಲೂ ನೀರು ತುಂಬಿತು....

ಇನ್ನೇನೂ ಇಲ್ಲ....'ಭೀಮರಾಯರಿಗೂ ಮಿಲಿಟರಿ ಇಲಾಖೆಗೂ ಯಾವ ಸಂಪರ್ಕವೂ ಇರಲಿಲ್ಲವಂತೆ. ಅವರು ಯುದ್ಧದ ಮುಖವನ್ನೇ ಕಾಣರು. ಎಂದಾದರೂ ನವರಾತ್ರಿ ಸಮಯದಲ್ಲಿ ಮೈಸೂರಿಗೆ ಹೋಗಿದ್ದರೆ-ಗೀಗಿದ್ದರೆ ಸೈನ್ಯ-ಗೀನ್ಯ ನೋಡಿದ್ದರೂ ಇರಬಹುದಂತೆ!' ಶ್ರೀಕಂಠಯ್ಯನವರೇ ಹೇಳಿದರು. 'ಮಹರಾಯನನ್ನು ಹಿಡಿದು ಕುದುರೆ ಮೇಲೆ ಕೂರಿಸಿದರೆ, ಇಳಿಯುವುದಕ್ಕೆ ಬರದು; ಇಳಿಸಿದರೆ, ಯಾವ ಕಡೆಯಿಂದ ಹತ್ತಬೇಕು ಎಂಬುದೂ ಕೂಡ ತಿಳಿಯದು.' ಶ್ರೀಕಂಠಯ್ಯನವರು ಆನಂದರಾಯರ ಕಿವಿಯ ಹತ್ತಿರ ಬಾಯಿಟ್ಟು, 'ಸ್ವಾಮಿ! ನಾನು ಮಿಲಿಟರಿಯಲ್ಲಿದ್ದವನು; ಅಲ್ಲಿ ದೊಡ್ಡ ಹುದ್ದೆಯಲ್ಲಿದ್ದವನು; ಈಗ ರಿಟೈರಾಗಿದೆ, ಅಂತ ಭೀಮು ನಿಮ್ಮ ಹತ್ತಿರ ಹೇಳಿಕೊಂಡಿದಾನೆಯೇ?' ಎಂದು ಕೇಳಿದರು, ಗೋಳಪ್ಪನವರೂ ಹತ್ತಿರ ಕುಳಿತಿದ್ದರಿಂದ ಅವರಿಗೂ ಕೇಳಿಸಿತು. 'ಇಲ್ಲ, ಇಲ್ಲ! ಅವರಾಗಿ

ಯಾರೊಂದಿಗೂ ಹಾಗೆ ಹೇಳಿಲ್ಲ ಅಂತ ಕಾಣುತ್ತದೆ; ನಾವು, ಊರಿನವರು ಊಹಿಸಿಕೊಂಡೆವು' ಎಂದು ಗೋಳಪ್ಪನವರು ಉತ್ತರ ಹೇಳಿದರು. ಅಂತು, ಗುಟ್ಟು ರಟ್ಟಾಗಿಹೋಯಿತು! ಸಂತೆಯಲ್ಲಿ ಬುತ್ತಿ ಬಿಚ್ಚಿದ ಹಾಗೆ, ಜಹಗೀರ್‌ದಾರರು ನಿಜಸ್ಥಿತಿಯನ್ನು ಹೊರಗೆಡಹಿಬಿಟ್ಟರು.

ಈ ಕೆಟ್ಟ ಸುದ್ದಿ ಹನುಮಂತನ ಕಿವಿಯನ್ನೂ ಮುಟ್ಟಿತು. ಪಾಪ, ಅವನಿಗಾದ ಆಶಾಭಂಗವನ್ನು ಅಳೆಯುವುದಸಾಧ್ಯ!....ಆ ದಿನ ಮಹಿಳಾ ಸದನದ ರಜತಮಹೋತ್ಸವದಲ್ಲಿ ತಾನು ಊಹಿಸಿದಂತೆ ಆತನಿಗೆ ಗಾತ್ರ, ಗೆದ್ದಲು-ಮೀಸೆ, ಇವು ಇರದೆ ಇದ್ದರೂ ಕೂಡ, ಆತ ಮಿಲಿಟರಿಯಲ್ಲಿರಲಿಲ್ಲ ಎಂದು ನಿಶ್ಚಯಿಸಬಾರದಾಗಿತ್ತೆ, ಎಂದು ಈಗ ಹನುಮಂತ ಮನಸೊಂದನು. ಪೆನ್‌ಷನ್ ಪಡೆದಿರುವ ದೊಡ್ಡ ಆಫೀಸರಾದ್ದರಿಂದ ತನಗೆ ಮುಂದೆ ಅನುಕೂಲ ಜಾಸ್ತಿ, ಒಬ್ಬಳೇ ಒಬ್ಬಳು ಮಗಳಾದ್ದರಿಂದ ಅವಳಿಗೇ ಎಲ್ಲಾ ಆಸ್ತಿ, ಎಂದು ಹನುಮಂತ ಹಿಗ್ಗಿದ್ದ......ಈಗ, ಅವನ ಮುಂದೆ ಇದ್ದುದು ಆ ಮೂಗು ಒಂದು ಮಾತ್ರ! ಎಂತಹ ಮೂಗು!

'ಎರಡು ತಿಂಗಳಿಂದ ಅವರೊಂದಿಗೆ ಒಂದು ದಿನ ಬಿಡದೆ ಅರ್ಧ ಮುಕ್ಕಾಲು ಘಂಟೆ ಸುಖಸಂಕಥಾವಿನೋದದಿಂ ಸರಸಸಲ್ಲಾಪ ಮಾಡುತ್ತಿದ್ದ ನಾನು ಅವರು 'ಮೇಜರ್' ಅಲ್ಲ ಎಂಬುದನ್ನ ಪತ್ತೆಮಾಡದೆ ಹೋದೆನಲ್ಲಾ; ಆಷಾಢಭೂತಿಯ ಅಳಿಯನಾಗಿ ಗಂಟುಬಿದ್ದೆನಲ್ಲಾ ' ಎಂದು ಅವನು ವ್ಯಥೆಪಟ್ಟನು.

ಭೀಮರಾಯರು, ಪಾಪ. ತಾನು ಮಿಲಿಟರಿಯವ ಎಂದು ಯಾರಿಗೂ ಹೇಳಿರಲಿಲ್ಲ. ಮೇಜರ್ ಭೀಮರಾವ್ ಎಂಬ ಅಡ್ಡಹೆಸರಿನ ಮೇಲೆ ಜನ ಕಟ್ಟಿದ ಕಥೆ ಅದು. ಅದಕ್ಕೆ ಅವರು ಹೊಣೆಗಾರರೇ? ಆದರೂ, ಉದಾರಶಿರೋಮಣಿಗಳಿಗೆ ಭೀಮರಾಯರ ಮೇಲೆ ಕೋಪ. ತನಗೆ ಅಂತಹ ಅಡ್ಡಹೆಸರು ಏಕೆ ಬಂತು ಎಂದು ಅವರೇ ವಿವರಿಸಬೇಕಾಯಿತು; ಸುಳ್ಳು ಹೇಳದೆ ಇದ್ದರೂ, ನಿಜ ಹೇಳದೆ ಇದ್ದುದರಿಂದ, ಆತ ಮೋಸಗಾರ ಎಂದು ಆನಂದರಾಯರು ತೀರ್ಮಾನಿಸಿದರು. ಒಬ್ಬರೊಂದಿಗೂ ತನ್ನ ಕೋಪವನ್ನು ಹೇಳಿಕೊಳ್ಳಲಿಲ್ಲ; ಗಂಭೀರವಾಗಿ ಕುಳಿತಿದ್ದರು.

—ಪುರೋಹಿತರು ಮಂತ್ರ ಹೇಳಿಕೊಡುತ್ತಿದ್ದರು; ಹನುಮಂತ ಎಲ್ಲೋ ಜ್ಞಾನದಲ್ಲಿ ಹೇಳುತ್ತಿದ್ದ. ಮದುವೆ ಶಾಸ್ತ್ರಗಳು ಹೇಗೋ ಮುಂದುವರಿದುವು—

'ಮತ್ತೆ, ಮೇಜರ್ ಭೀಮರಾವು ಎಂಬ ಬಿರುದು ಅವರಿಗೆ ಹೇಗೆ ಬಂತು?' ಎಂದು ಗೋಳಪ್ಪನವರು ಶ್ರೀಕಂಠಯ್ಯನವರನ್ನು ಕೇಳಿದರು.

'ಈಗ ಬೇಡಿ, ಸ್ವಾಮಿ! ದೊಡ್ಡ ಪುರಾಣ ಅದು....ಭೀಮು ಬೇರೆ ಇತ್ತ ಕಡೆಯೇ ನೋಡುತ್ತಿದಾನೆ··ಅವನು ನೋಡಿದರೇನಂತೆ..ಕೇಳಿದರೂ ಏನೂ ಭಯ ಇಲ್ಲ ನನಗೆ, ಅನ್ನಿ......ಆದರೂ ನನ್ನಿಂದ ಒಂದು ಮಾತು ಹೊರಕ್ಕೆ ಬಂತು ಅಂತ ದೂರಬಾರದು ಜನ..ಪ್ರತಿಯೊಬ್ಬನ ಚರಿತ್ರೆಯಲ್ಲೂ ಹುಳುಕುಗಳಿದ್ದೇ ಇರುತ್ತವೆ....ಅದನ್ನೆಲ್ಲಾ ಎತ್ತಿ ಆಡಬಾರದು..ನಾನು ಚಾಡಿ ಮಾತಿಗೆ ಹೋಗುವುದೇ ಇಲ್ಲ··ನಮಗೆ ಯಾಕೆ ಸ್ವಾಮಿ ಮತ್ತೊಬ್ಬರ ವಿಚಾರ. ಆದರೆ ನನಗೇನು! ಭಯವೇ? ಸುಲಭದಲ್ಲೇ ಹೇಳಿಬಿಡುತ್ತೇನೆ....ಇನ್ನೇನೂ ಇಲ್ಲ..ನೀವು ಹೆದರಬೇಕಾದ ಪ್ರಮೇಯವೇನೂ ಇಲ್ಲ..ಈ ಭೀಮರಾಯ ಇದಾನಲ್ಲಾ, ಇವನು ಇವನ ತಂದೆಯ ಮೊದಲನೆಯ ಸಂಸಾರದ ಮಗ..ತಾಯಿ ತಂದೆ ಇಬ್ಬರೂ ಹರಹರ ಅಂದ ಮೇಲೆ, ತಬ್ಬಲಿ ಮಗು; ಹತ್ತು ಹನ್ನೆರಡು ವರ್ಷದ ಹೀಚು; ಆಸ್ತಿಯನ್ನೆಲ್ಲಾ ನುಂಗಿ ಹಾಕಬೇಕು ಅಂತ ಹೊಂಚು ಕಾಯುತ್ತಿದ್ದ ಒಬ್ಬ, ಎರಡನೆಯ ಹೆಂಡತಿಯ ಅಣ್ಣ, ಯಮಘಾತಕ. ಕೋರ್ಟು ಕಚೇರಿ, ಹತ್ತಿದರು, ಇಳಿದರು. ಭೀಮು ಮೇಜರಾಗುವ ತನಕ ಅವನ ಪಾಲಿನ ಆಸ್ತಿಯನ್ನೆಲ್ಲಾ ಆ ಹೆಗ್ಗಣದ ವಶಕ್ಕೆ ಕೋರ್ಟಿನವರು ಒಪ್ಪಿಸಿದರು. ಅಂತಹ ಡಿಕ್ರಿ ಪಡೆದುಕೊಂಡ ಆ ಚಾಣಕ್ಯ. ಆಮೇಲೆ ವರ್ಷವರ್ಷಕ್ಕೂ ಭೀಮು ಜಾತಕವನ್ನ ಬದಲಾಯಿಸುತ್ತಾ ಬಂದ. ಸರಿ, ಈಗಿನ ಕಾಲದ ಕೆಲವು ಹುಡುಗಿಯರಂತೆ ಭೀಮು ವಯಸ್ಸು ೧೩, ೧೨, ೧೨, ೧೩, ಇಷ್ಟರಲ್ಲೇ ಓಲಾಡುತ್ತಿತ್ತು....ಹೀಗೆ ೮, ೧೦ ವರ್ಷಗಳಾದುವು. ಕಡೆಗೆ, ಇವನ ೨೮ನೇ ವಯಸ್ಸಿನಲ್ಲಿ ಯಾರೋ ಪುಣ್ಯಾತ್ಮರು ಇವನನ್ನ ಕೋರ್ಟೆದುರಿಗೆ ಎಳೆದುಕೊಂಡು ನಿಲ್ಲಿಸಿ, 'ಸ್ವಾಮಿ! ಇವನು ಮೇಜರ್ ಆಗಿದಾನೆ' ಎಂದರು. ಬಹಳ ದಿವಸಗಳ ತನಕ ಚರ್ಚೆ ನಡೆಯಿತು. ಕಡೆಗೆ, ಹೌದು! ಈತ ಮೇಜರ್' ಎಂದು ಜಡ್ಜರು ತೀರ್ಪು ಕೊಟ್ಟರು! ಆಸ್ತಿ

ಯನ್ನ ಇವನ ವಶಕ್ಕೆ ಒಪ್ಪಿಸಿದರು, ಅಂದರೆ, ಆ ಹೆಗ್ಗಣ ತಿಂದು ಉಳಿದಿದ್ದ ದ್ದನ್ನ. ಆತನಿಗೆ ಸುಳ್ಳು ಜಾತಕ ಬರೆಸಿದ ಅಂತ ಏಳು ವರ್ಷ ರಾಜಾತಿಥ್ಯ ಲಭಿಸಿತು. ಈತನಿಗೆ ಒಂದು ಮನೆ, ಹತ್ತೋಕ್ರೆ ಜಮೀನು! ಈಗ ಅದನ್ನೆಲ್ಲಾ ಸಾಲಗಾರರ ಪಾಲು ಮಾಡಿಬಿಟ್ಟಿದಾನೆ, ಅನ್ನಿ. .ಈಗ ಅವನಿಗುಳಿದಿರುವುದು ಅಡ್ಡಹೆಸರು ಮಾತ್ರ! 'ಮೇಜರ್' ಭೀಮರಾಯ—ಅಂತ!'

ಸಂಜೆ ೫, ೫-೩೦ರ ಹೊತ್ತಿಗೆ ಮತ್ತೊಂದು ಅನಾಹುತ ನಡೆದು ಬೀಗರ ಪರಸ್ಪರ ವಿಶ್ವಾಸ ಗೌರವಗಳಿಗೆ ಇನ್ನೂ ಧಕ್ಕೆ ಬಂತು. ಮೇಜರ್ ಭೀಮರಾಯರ ಮನೆಯಿಂದ ಎರಡು ಬೆಳ್ಳಿ ಕಪ್ಪುಗಳು ಮಾಯವಾದುವು. ಜಯಲಕ್ಷ್ಮಮ್ಮನವರು (ನಂ. ೫.) ಸುಮ್ಮನಿರಲಿಲ್ಲ. ಮದುವೆ ಮನೆ ಅಂದ ಮೇಲೆ ಕಳುವು ಇದ್ದೇ ಇರುತ್ತದೆ, ಎಂದು ತಿಳಿದುಕೊಂಡು ಆಕೆ ಶಾಂತ ಳಾಗಲಿಲ್ಲ. ವಿಪರೀತ ಗದ್ದಲ ಮಾಡಿದರು. ಆಳುಗಳನ್ನೆಲ್ಲಾ ಕರೆದು ಗದರಿಸಿ ದರು. ಮನೆಗೆ ಬಂದಿದ್ದ ಬಡವರಾದ ನೆಂಟರ ಪೆಟ್ಟಿಗೆಗಳೆಲ್ಲವನ್ನೂ ನಿರ್ದಾ ಕ್ಷಿಣ್ಯವಾಗಿ ಹುಡುಕಿಸಿದರು. ಅವರಲ್ಲಿ ಕೆಲವರು ಆಕ್ಷಣವೇ ತಾಂಬೂಲ ಕೂಡ ತೆಗೆದುಕೊಳ್ಳದೆ ರೆಯಿಲು ಸ್ಟೇಷನ್ನಿಗೆ ನಡೆದರು. ಪುರೋಹಿತರ ಗಂಟು ಗಳನ್ನೆಲ್ಲಾ ಬಿಚ್ಚಿಸಿದರು. ಜಮಖಾನೆಗಳನ್ನೆಲ್ಲಾ ಮಗುಚಿ ತಡಕಾಡಿದರು. ತೂಗು ಹಾಕಿದ್ದ ಕೊಡೆಗಳನ್ನು ಕೊಡವಿದರು. ಜೋಬುಗಳ ಜಪ್ತಿಯೂ ನಡೆಯಿತು. ಈ ಗಲಾಟೆಯ ನಡುವೆ ಏನೂ ಅರಿಯದ ಮಾಚ್ಚಿ ಹೊಸ ಸೀರೆ ಯನ್ನು ಉಟ್ಟು ಸಂಪಿಗೆ ಹೂ ಮುಡಿದು ಬೆಳ್ಳಿ ತಟ್ಟೆ ಒಂದರಲ್ಲಿ ಎಲೆ ಅಡಿಕೆ ಕೊಬ್ಬರಿ ಗಿಟುಕು ಬಾಳೆಹಣ್ಣಿನ ಚಿಪ್ಪು ಮತ್ತು ಅದೇ ತಟ್ಟೆಯಲ್ಲೇ ಎರಡು ಬೆಳ್ಳಿ ಕಪ್ಪುಗಳು—ಒಂದರಲ್ಲಿ ಕುಂಕುಮ, ಒಂದರಲ್ಲಿ ಗಂಧ—ತೆಗೆದು ಕೊಂಡು ಪ್ರವೇಶಿಸಿದಳು. ಜಯಲಕ್ಷ್ಮಮ್ಮನವರಿಗೆ ಅವಳ ಮೇಲೂ ಗುಮಾನಿ. ಅವಳು ತಂದ ಬೆಳ್ಳಿ ಕಪ್ಪುಗಳನ್ನೂ ಪರೀಕ್ಷಿಸಿದಳು........ 'ಓಹೋ, ದೊಡ್ಡ ದೊಡ್ಡ ಹೆಂಗಸರೆಲ್ಲಾ ಕದಿಯುವುದಕ್ಕೆ ಬಂದಿದ್ದೀರೋ, ಇಲ್ಲಿ?' ಎಂದು ಆರ್ಭಟಿಸುತ್ತಾ ಆ ಕಪ್ಪುಗಳ ಮೇಲೆ ಕೆತ್ತಿದ್ದ, 'ಮೇ–ಭೀ' ಎಂಬ ಅಕ್ಷರಗಳನ್ನು ತೋರಿಸಿದರು. ಮಾಚ್ಚಿ ಪಾಪ ಅಳುವುದಕ್ಕೆ ಪ್ರಾರಂಭ ಮಾಡಿದಳು........ 'ನನಗೇನೂ ಗೊತ್ತಿಲ್ಲ. ದೇವರಾಣೆ ನಾನು ತೆಗೆದು ಕೊಂಡಿಲ್ಲ. ನನ್ನ ಮಕ್ಕಳಾಣೆ ನಾನು ಕದ್ದಿಲ್ಲ. ನನ್ನ ಮನೆಯಲ್ಲಿ ಇಂತಹ

ಕಪ್ಪುಗಳು ನೂರಾರು ಬಿದ್ದಿವೆ' ಎಂದು ಗೋಳಾಡಿದಳು. 'ಎಲ್ಲವೂ ಕದ್ದ ಮಾಲಿರಬೇಕು' ಎಂದು ಒಬ್ಬರು ಅಂದರು. 'ಅದಿರಲಿ! ಎಲ್ಲಿಂದ ತಂದೆ ಇದನ್ನ?' ಎಂದು ಅವಳನ್ನ ಯಾರೋ ಕೇಳಿದರು. 'ನನಗೇನೂ ಗೊತ್ತಿಲ್ಲ. ದೇವರಾಣೆ. ಇವೆರಡೂ ಶೀನನ ಮೇಜಿನ ಮೇಲಿತ್ತು' ಎಂದು ಮಾಚ್ಚಿ ಅಳುತ್ತಾ ನಿಜವನ್ನು ಹೇಳೇ ಬಿಟ್ಟಳು......ಮಿಸ್ಟರ್ ಶ್ರೀನಿವಾಸರಾವ್, ಬಿ. ಎ. ಅವರ ಯೋಗ್ಯತೆಯನ್ನು ಪ್ರಪಂಚಕ್ಕೆ ತಿಳಿಸಿಬಿಟ್ಟಳು.

ಶೀನ ಮಾಡಿದ್ದು ತಪ್ಪು ಎಂದು ಹೇಳುವ ಹಾಗಿಲ್ಲ. ಏಕೆಂದರೆ, ಆ ದಿನ ಆನಂದರಾಯರು ಹಠಾತ್ತಾಗಿ ಅವನ ಐದು ಬೆಳ್ಳಿ ಕಪ್ಪುಗಳನ್ನೂ ಅಂಗಡಿಯಲ್ಲಿ ಮಾರಿ ಹಾಸ್ಟಲ್ ಹಣ ಕೊಡಿಸಿದ ಮೇಲೆ ಶೀನನಿಗೆ ಒಂದು ವಿಧವಾದ ಹುಚ್ಚು ಹಿಡಿದುಬಿಟ್ಟಿತ್ತು. ಇತರ ಸಂದರ್ಭಗಳಲ್ಲಿ ಅವನು ಎಷ್ಟು ಪ್ರಾಮಾಣಿಕನಾಗಿದ್ದರೂ ಕೂಡ ಬೆಳ್ಳಿ ಕಪ್ಪು ಕಣ್ಣಿಗೆ ಬಿದ್ದರೆ ಅವನು ಅದನ್ನು ಹೇಗೋ ಕಬಳಿಸಿ ಕಂಕುಳಲಿರಿಸಿ ಕದ್ದುಬಿಡುವನು. ಅದನ್ನು ತನ್ನ ಮೇಜಿನ ಮೇಲಿರಿಸಿ, 'ಹಾ, ಹಾ! ಅಂಗಡಿ ಹೋಗಿದ್ದೆಯಾ ದ್ರೋಹಿ ಬಾ, ಮತ್ತೆ ನನ್ನ ಮೇಜಿನ ಮೇಲೆ ಕುಳಿತುಕೋ, ನಿನ್ನ ಸ್ನೇಹಿತರೆಲ್ಲಿ? ಕರೆ. ಬರಲಿ, ಒಬ್ಬೊಬ್ಬರಾಗಿ. ಇಷ್ಟು ದಿವಸ ನನ್ನನ್ನು ಬಿಟ್ಟು ಎಲ್ಲೆಲ್ಲಿ ತಿರುಗಿದೆ, ಶಿಂಗಾರಿ?' ಎಂದು ವಿಧವಿಧವಾಗಿ ಹೊಲಬುವನು. ಒಂದೆರಡು ಗಂಟೆ ಗಳೊಳಗೆ ಎಲ್ಲಾ ವಿಷಯಗಳನ್ನೂ ಸಂಪೂರ್ಣ ಮರೆತು, 'ಯಾವುದು ಈ ಕಪ್ಪು? ಎಲ್ಲಿಂದ ಬಂತು?' ಎಂದು ತಾನೇ ಬೆರಗಾಗಿ ಇತರರನ್ನು ಕೇಳು ವನು. ಕಪ್ಪನ್ನು ಕದ್ದ ಮಹಾರಾಯ ತಾನೇ ಎಂಬುದನ್ನು ಅವನು ಮರೆತೇ ಬಿಡುವನು. ಆಗಲೇ ರಾಮಮೋಹನ ಹಾಸ್ಟಲಿಗೆ ಹೀಗೆ ಎರಡು ಸಾರಿ ಬೆಳ್ಳಿ ಕಪ್ಪನ್ನು ಕದ್ದು ತಂದಿದ್ದ. ಆದರೆ ಅವನ ಪೂರ್ವಚರಿತ್ರೆಯನ್ನು ಚೆನ್ನಾಗಿ ತಿಳಿದುಕೊಂಡಿದ್ದ ವಾರ್ಡನ್ ಸಾಹೇಬರು, 'ಇದು ಕೇವಲ ಮಾನಸಿಕವಾದ ಖಾಯಿಲೆ. ಕೆಟ್ಟ ಸ್ವಭಾವದ ಕುರುಹಲ್ಲ. ಇವನು ನಿಜವಾಗಿಯೂ ಕಳ್ಳನಲ್ಲ' ಎಂದು ಹೇಳಿ ಶೀನನ ಮಾನವನ್ನು ಉಳಿಸಿದ್ದರು. ಆದರೆ ಈಗ ಈ ಹಾಳು ಕೊಂಪೆಯಲ್ಲಿ ಮನಶ್ಶಾಸ್ತ್ರ ಬಲ್ಲವರು ಯಾರೂ ಇರಲಿಲ್ಲ. ಮೃತ್ಯು ಪಾಪ, 'ಹಾಗಲ್ಲ; ಹೀಗೆ; ಹಾಸ್ಟಲ್‌ನಲ್ಲೂ ಕದ್ದಿದ್ದ; ಆದರೆ ನಮ್ಮ ಮೇಷ್ಟ್ರು

........' ಎಂದು ಜನರನ್ನು ಸಮಾಧಾನಪಡಿಸುವುದಕ್ಕೆ ನೋಡಿದ್ದರಿಂದ ಅವರು ಶೀನನನ್ನು ಹಳೆಯ ಕಳ್ಳ, ಎಂದು ಕರೆಯುವುದಕ್ಕೆ ಕಾರಣವಾಯಿತು.

'ಇಂತಹ ಹಗಲುಗಳ್ಳರೂ, ದಕಾಯಿತರೂ ಇರುವ ನಿಮ್ಮ ಮನೆಗೆ ಸರ, ಡಾಬು, ಬೆಂಡೋಲೆ, ಬಳೆ ಎಲ್ಲವನ್ನೂ ಹಾಕಿ ನಮ್ಮ ಹುಡುಗಿಯನ್ನ ಹೇಗೆ ಕಳುಹಿಸುವುದು ನಾಳೆ?' ಎಂದು ಸುಂದರಮ್ಮನವರನ್ನು ಅವರ ಬೀಗಿತ್ತಿಯವರು ಕೇಳಿದರು. ಸುಂದರಮ್ಮನವರಿಗೆ ಮನಶ್ಶಾಸ್ತ್ರ ತಿಳಿಯದು ತಲೆ, ತಗ್ಗಿಸಿಕೊಂಡು ಕಣ್ಣೀರು ಬಿಟ್ಟರು. ಆದರೂ, ಜಯಲಕ್ಷ್ಮಮ್ಮನವರು ಬಿಟ್ಟ ಬಾಣ ಎದೆಯಲ್ಲಿ ನೆಟ್ಟಿತು. ಮಾಚ್ಚಿ, ಪಾಪ, 'ಅಯ್ಯೋ, ನಾನು ಅವನ ರೂಮಿಂದ ಆ ಕಪ್ಪುಗಳನ್ನು ಎತ್ತಿಕೊಂಡು ಹೋದದ್ದೇ ತಪ್ಪು. ಅಥವಾ ಹೋದವಳು ಎಲ್ಲಿತ್ತು ಅಂತ ಅವರಿಗೆ ಹೇಳಬಾರದಾಗಿತ್ತು' ಎಂದು ಗೊಣ ಗುತ್ತಾ ಒಂದು ಕೋಣೆಯೊಳಗೆ ಮಲಗಿ ಹೊರಳಾಡುತ್ತಿದ್ದಳು. ಶೀನ ಎಲ್ಲಿ ಬಂದುಬಿಡುತ್ತಾನೋ, ಬೈದುಬಿಡುತ್ತಾನೋ ಎಂದು ಅವಳಿಗೆ ಭಯ, ನಾಚಿಕೆ. ಉದಾರಶಿರೋಮಣಿಗಳಿಗೆ ತಡೆಯಲಾರದ ವ್ಯಸನವುಂಟಾಯಿತು. ಒಂದು ಕಡೆ ಕುಳಿತಿರಲಾರದೆ ಒಬ್ಬರನ್ನು ಮಾತನಾಡಿಸಲಾರದೆ ಅವರು ಕಳವಳಪಡುತ್ತಿದ್ದರು.

ತಾನು ಮಾಡಿದ್ದು ಏನು ಎಂಬುದರ ಅರಿವು ಕೊಂಚವೂ ಇಲ್ಲದ ಶೀನ ಮಾತ್ರ 'ಏನು ನಡೆಯಿತು? ಹನುಮಂತನ ಮದುವೆ ದಿನಸ ಇಷ್ಟೊಂದು ಜನಕ್ಕೆ ಅಳುಮೋರೆ ಯಾಕೆ? ಏಕೆ ಇವರೆಲ್ಲಾ ಇಷ್ಟು ಪರದಾಡುತ್ತಿ ದ್ದಾರೆ?' ಎಂದು ಎಲ್ಲರನ್ನೂ ಕೇಳುತ್ತಿದ್ದ. ಆದರೆ ಎಲ್ಲರೂ, 'ನನಗೆ ಗೊತ್ತಿ ಲ್ಲಪ್ಪ, ಮಾಚ್ಚಿಯನ್ನು ಕೇಳು' ಅನ್ನುತ್ತಿದ್ದರು. ಮಾಚ್ಚಿ ಮಾತ್ರ ಬಾಗಿಲು ಹಾಕಿಕೊಂಡು ಸಂಕಟದ ಭಾರದಿಂದ ನೆಲದ ಮೇಲೆ ಬಿದ್ದು ಹೊರಳಾಡು ತ್ತಿದ್ದಳು.

'ಆಂಜನೇಯನ ಕೃಪೆಯಿಂದ ಕಳೆದುಹೋದ ಪದಾರ್ಥ ಹಿಂದಕ್ಕೆ ಬಂತಲ್ಲಾ! ಸಾಕು; ಸುಮ್ಮನಿರು.' ಎಂದು ಹೆಂಡತಿಯನ್ನು ಸಮಾಧಾನ ಪಡಿಸಿ ಭೀಮರಾಯರು ಬಿಕ್ಕಟ್ಟನ್ನು ಒಂದು ರೀತಿಯಲ್ಲಿ ಬಗೆಹರಿಸಿ ಬೀಗ ರನ್ನು ಬಿಸಿಲಡಿಗೆ ಊಟಕ್ಕೆ ಕರೆದು ಕೂರಿಸಿದರು. ಆಗ ರಾತ್ರಿ ೭–೩೦ ಆಗಿತ್ತು.

ಎಲೆ ಮುಂದೆ ಮಂಡಿಸಿದ್ದ ಬೀಗರು ಅನ್ನ ಕಾಣುವ ಹೊತ್ತಿಗೆ ಎಂಟು ಘಂಟೆ ಹೊಡೆಯಿತು. ಬಡಿಸುವುದಕ್ಕೇನೋ, ಬೇಕಾದಷ್ಟು ಜನ ಇದ್ದರು; ಬೇಕಾದಷ್ಟಕ್ಕಿಂತ ಹೆಚ್ಚಾಗಿಯೇ ಇದ್ದರು. ಅವರಲ್ಲೆಲ್ಲಾ ಶಿಸ್ತಿಗಿಂತ ಉತ್ಸಾಹವೇ ಜಾಸ್ತಿಯಾಗಿತ್ತು. ಒಟ್ಟಿಗೆ ಎಲ್ಲರೂ ಮಾಯವಾಗುವರು. ಆಮೇಲೆ ಒಟ್ಟಿಗೆ ಎಲ್ಲರೂ ಒಂದೇ ಪದಾರ್ಥವನ್ನು ತಂದು ಕುಪ್ಪೆಕುಪ್ಪೆಯಾಗಿ ಬಡಿಸುವರು. ಊಟ ಮಾಡಿರುವವರ ಅನುಕೂಲವರಿತು ಹಿತವಾಗಿ ಮಿತವಾಗಿ ಕ್ರಮದಿಂದ ಬಡಿಸುವವರು ಒಬ್ಬರೂ ಇರಲಿಲ್ಲ. ಕೂಗಿ ಕೂಗಿ ಗಂಟಲು ಒಡೆದುಕೊಂಡರೆ ಹಾಗೆ ಕೂಗಿದವರಿಗೆ ಮಾತ್ರ ಅವರು ಕೇಳದ ಪದಾರ್ಥ ಒಂದು ಸಿಕ್ಕುತ್ತಿತ್ತು. ಹೀಗಾಗಿ ಬೀಗರೆಲ್ಲರೂ ದೂರ್ವಾಸ ಋಷಿಗಳಾದರು......ಆಗಲೇ 'ಕಾವು ಹತ್ತಿ ಕೆಂಡವಾಗಿ ಕನಲಿ ಕೆಂಗಲಿಸಿದ್ದ' ಮನಸ್ತಾಪವು ಜ್ವಾಲಾಮುಖಿಯಾಗಿ ಪಸಿಣಮಿಸಿತು.

ಇದ್ದಕ್ಕಿದ್ದ ಹಾಗೆ ಲಚ್ಚು ಎಂಬ ಜವಳಿಗೆ ಪಾಯಸದ ಮೇಲಿನ ಆಸೆ ಬಲವಾಯಿತು. ಅವನು, 'ಪಾಯಿಚಾ' ಎಂದು ಕೂಗಿದ. ಆಗ ಅವಳಿಗೂ ಅದೇ ಆಸೆ ಹತ್ತಿ ಇಬ್ಬರೂ ಒಟ್ಟಿಗೆ, 'ಪಾಯಿಚಾ, ಪಾಯಿಚಾ' ಎಂದು ಕಿರಿಚಿದರು. ಇಬ್ಬರದೂ ಚೂಪು ಗಂಟಲು. ಆದರೂ ಬಡಿಸುವವರ ಕೋಲಾಹಲದ ನಡುವೆ ಯಾರಿಗೂ ಕಿವಿ ಕೇಳಿಸಲಿಲ್ಲ. ಅಲ್ಲೇ ಚಪ್ಪರದ ಕಂಬಕ್ಕೆ ಒರಗಿ ನಿಂತಿದ್ದ ಸುಂದರಮ್ಮನವರು ತಮ್ಮ ಮಕ್ಕಳ ಗೋಳನ್ನು ನೋಡಿ ತುಂಬಾ ಪೇಚಾಡಿದರು. ತಾವೇ ಹೋಗಿ ಅಡಿಗೆಮನೆಯಿಂದ ಪಾಯಚ ತಂದು ಬಡಿಸೋಣವೆಂದರೆ ಬೀಗರ ಮನೆ, ಬಿಗುಮಾನ, ಅಪಮಾನ....
'ಪಾಯಿಚಾ,ಆ ಪಾಯಿಚಾಆ'

ಸುಂದರಮ್ಮನವರು ನೆಟ್ಟಗೆ ಅವಳಿಜವಳಿ ಹತ್ತಿರಕ್ಕೆ ಹೋಗಿ ಒಬ್ಬೊಬ್ಬರ ಬೆನ್ನಮೇಲೂ ಸಿಡಿಲು ಬಡಿದ ಹಾಗೆ ಒಂದೊಂದು ಗುದ್ದು ಕೊಟ್ಟರು.

ಆ ಸದ್ದಿಗೆ ಎಲ್ಲರ ಎದೆಯೂ ಥಂಗ್, ಎಂದಿತು. ಕೂಡಲೆ ಸುತ್ತ-ಮುತ್ತ ಇದ್ದವರೆಲ್ಲರೂ ಅಲ್ಲಿಗೆ ಓಡಿ ಬಂದರು. ಅಡಿಗೆಯವರೂ ಓಲಗದವರೂ ಗ್ಯಾಸ್ ಲೈಟಿನವರೂ, 'ಏನಾಯಿತು?' ಎಂದು ಕೇಳುತ್ತಾ ಚಪ್ಪರದೊಳಕ್ಕೆ ನುಗ್ಗಿದರು.

ಆನಂದರಾಯರು ಅರ್ಧ ಊಟದಲ್ಲೇ ಎದ್ದುಹೋಗಿ, ‘ ಹೆತ್ತ ಮಕ್ಕಳನ್ನು ಕೊಂದುಹಾಕುತ್ತೀಯಾ, ಚಂಡಾಲಿ ’ ಎಂದು ಅರಚುತ್ತಾ, ರಾಮಲಕ್ಷ್ಮಣರನ್ನು ಎಳೆದುಕೊಂಡು ಕತ್ತಲಲ್ಲಿ ಹೊರಟೇ ಹೋದರು. ‘ ಆಂಜನೇಯನ ಕೃಪೆ. ಪ್ರಾಣವಾದರೂ ಉಳಿಯಿತಲ್ಲ. ’ ಎಂದು ಭೀಮರಾಯರು ಸಮಾಧಾನಪಟ್ಟರು.

ಆಗ ಜಯಲಕ್ಷ್ಮಮ್ಮನವರು, ‘ ಏನು ಸುಂದರಮ್ಮನವರೇ, ಎಂತಹ ಕೆಲಸ ಮಾಡಿದಿರಿ ಮದುವೆ ಚಪ್ಪರದಲ್ಲಿ! ಮಕ್ಕಳು ಊಟ ಮಾಡುವಾಗ ಹೀಗೆ ಹೊಡೆಯಬಹುದೇ ನೀವು ? ’ ಎಂದರು. ಸುಂದರಮ್ಮನವರಿಗೆ ಸಹಿಸಲಿಲ್ಲ. ಬೀಗಿತ್ತಿ ಹತ್ತಿರ ಮಾತೇ ಆಡಲಿಲ್ಲ. ‘ ಲೋ, ಹನುಮಂತಾ ಪಾಯಸಕ್ಕೆ ಗತಿಯಿಲ್ಲದೆ ಇವರ ಮನೆಗೆ ಬಂದಿದೆವೆಯೋ ನಾವು? ಏಳೋ, ಅಲ್ಲಿಂದ. ಅಯ್ಯೋ, ನಿನ್ನ ಮುಸುಡಿಗೆ ಮಂಗಳಾರತಿ ಎತ್ತಿದರೂ ಈ ಕೊಕ್ಕರೆ ಮೂಗಿನ ಹೆಣ್ಣನ್ನು ಕಟ್ಟಿಕೊಂಡು ಒದ್ದಾಡುತ್ತೀಯೇನೋ, ದಡ್ಡಾ ? ’ ಎಂದರು. ಇದಕ್ಕೆ ಉತ್ತರ ಹೇಳಿದ್ದು ಹನುಮಂತನಲ್ಲ, ಅವನ ಅತ್ತೆ. ಅವರೂ ಕೂಡ ತಮ್ಮ ಗಂಡನನ್ನೇ ಸಂಬೋಧಿಸಿದರು. ‘ ಎಲ್ಲಿಂದೆಲ್ಲಿಗೆ? ಕೇಳಿದಿರಾ ? ನಿಮಗೆ ನಾನು ಹೇಳುವುದು ! ಇಲ್ಲಿ ಕೇಳಿ ಅಂದರೆ, ಗಂಡನ ಮಾತಿನಂತೆ ನಡೆಯದ ಗಂಡುಬೀರಿ ಮನೆಗೆ ನಮ್ಮ ಲಲಿತೂನ ಕೊಡಬಾರದು ಅಂತ ಆಗಲೇ ಹೇಳಿದೆ. ಈಗ ಅನುಭವಿಸಿ. ’ ಎಂದರು. ಆದಕ್ಕೆ ಲಲಿತುವಿನ ತಂದೆ ಉತ್ತರ ಹೇಳಲಿಲ್ಲ, ಅವರು ಸುಮ್ಮನಿದ್ದರು. ಆದರೆ ಮರುಮಾತು ಬಂದದ್ದು ಸುಂದರಮ್ಮನವರಿಂದ: ‘ ಅನುಭವಿಸುವುದೇನು ? ಯಾರೂ ಅನುಭವಿಸಬೇಕಾಗಿಲ್ಲ. ನಿಮ್ಮ ಹುಡುಗಿ ನಿಮ್ಮ ಮನೆಯಲ್ಲೇ ಇರಲಿ...... ಬಾರೋ ಹನು, ಹೆಣ್ಣಿಗೇನು ? ಕಾಸಿಗೆ ಮೂರು, ಕೊಸರಿಗೆ ನಾಲ್ಕು. ’ ಅಲ್ಲೇ ನಿಂತಿದ್ದ ನಂಜುಂಡಶಾಸ್ತ್ರಿಗಳು ಮಧ್ಯೆ ಬಾಯಿ ಹಾಕುತ್ತಾ, ‘ತಾಯಿ! ನೀವೇನೂ ಸಂಕೋಚಪಡಬೇಡಿ. ಆ ಟೈಗರ್ ಶಾಸ್ತ್ರಿಯ ಮಗ ಇವತ್ತು ಮಂತ್ರಗಳನ್ನೇ ಸರಿಯಾಗಿ ಹೇಳದೆ ಕುಲಗೆಡಿಸಿಬಿಟ್ಟಿದಾನೆ. ಶಾಸ್ತ್ರ, ಹೋಮ, ಸಪ್ತಪದಿ, ಔಪಾಸನ, ನಾಂದಿ, ಎಲ್ಲಾ ಯದ್ವಾತದ್ವಾ ಆಗಿಬಿಟ್ಟಿದೆ. ಆದ್ದರಿಂದ ಇವತ್ತು ನಡೆದ ವಿವಾಹ ವಿವಾಹವೇ ಅಲ್ಲ. ’ ಎಂದು ಒಂದು ದೊಡ್ಡ ಬಾಂಬನ್ನೇ ಸಭಾಮಧ್ಯದಲ್ಲಿ ಎತ್ತಿಹಾಕಿದರು. ‘ ಯಾರು

ಬೇಕಾದರೂ ಪುನಃ ಯಾರನ್ನು ಬೇಕಾದರೂ ಮದುವೆಯಾಗಬಹುದು; ಶಾಸ್ತ್ರಕ್ಕೇನೂ ತೊಂದರೆ ಇಲ್ಲ.' ಅಂದರು. ಭೀಮರಾಯರ ಎದೆ ಒಡೆದು ಹೋಯಿತು. ಟೈಗರ್ ಸುಬ್ಬಾಶಾಸ್ತ್ರಿಗಳು ಆ ದಿನ ಬೇರೆಲ್ಲಿಗೋ ಹೋಗಿದ್ದರಿಂದ ಪೌರೋಹಿತ್ಯ ಮಾಡಿಸಿದ್ದು ಅವರ ಮಗ ಯಜ್ಞೇಶು! ಯಜ್ಞೇಶು ಸುತ್ತ ಕುಳಿತಿದ್ದ ಇತರ ಬ್ರಾಹ್ಮಣರೆಲ್ಲರೂ ಬೆಳಗ್ಗಿಂದಲೂ ಒಂದೇ ಸಮನೆ ಅವನನ್ನು ಗೋಳುಹೊಯ್ದು ಕೆಡವಿದ್ದರು. ಈಗ ನಂಜುಂಡಶಾಸ್ತ್ರಿಗಳು, 'ನೋಡಿ, ಸ್ವಾಮಿ, ಭೀಮರಾಯರೇ! ಗಂಡಿನ ಭಾಷಿಂಗ ಹೆಣ್ಣಿನ ತಲೆಗೂ, ಹೆಣ್ಣಿನ ಭಾಷಿಂಗ ಗಂಡಿನ ತಲೆಗೂ ಕಟ್ಟಿದಾನಲ್ಲಾ, ಈ ಅಯೋಗ್ಯ, ಇವನ ತಲೆಗೆ ಯಾರಾದರೂ ಅಕ್ಷತೆ ಹಾಕುತ್ತಾರೆಯೇ? ಇವನು ದೊಡ್ಡ ವಿದ್ವಾಂಸನೇ? ಇವನ ಅಪ್ಪ ಇಲ್ಲದೆ ಇದ್ದರೆ ನಾವಿಲ್ಲವೆ ಪೌರೋಹಿತ್ಯಕ್ಕೆ? ಸಿಕ್ಕಿದ್ದೆಲ್ಲಾ ತನಗೇ ಬೇಕು ಅಂತ ಅವನು ಈ ಶುಂಠನ ಕೈಯಲ್ಲೇ ಎಲ್ಲಾ ಮಾಡಿಸುತ್ತಾನಲ್ಲಾ, ಅನುಭವಿಸಿ, ನನಗೇನು?' ಅಂತ ಹೇಳಿದರು! ಹನುಮಂತ ಹಣೆ ಮುಟ್ಟಿ ನೋಡಿಕೊಳ್ಳುತ್ತಾನೆ........ನಿಜ! ತನ್ನ ತಲೆಗೆ ಹೆಣ್ಣಿನ ಭಾಷಿಂಗ!! ಶಾಂತಂ ಪಾಪಂ!

'ಇನ್ನೇನು, ಹನು? ಮದುವೆಯೇ ಶಾಸ್ತ್ರೋಕ್ತವಾಗಿ ನಡೆದಿಲ್ಲ ಅಂತಾರೆ ನಮ್ಮ ಶಾಸ್ತ್ರಿಗಳು! ಎದ್ದು ಬಾರೋ, ಬೇಗ?'

ಆದರೆ, ಹನುಮಂತ ಏಳಲಿಲ್ಲ. ಸ್ವಾತಂತ್ರ್ಯ 'ಜವಾಬ್ದಾರಿ ಸರ್ಕಾರ' ಸ್ವದೇಶಿ, ಸಮತಾವಾದ ಮುಂತಾವುಗಳನ್ನು ಚರ್ಚಿಸುತ್ತಾ ಆಗಾಗ್ಗೆ ವೀರ ತರುಣನಾಗುತ್ತಿದ್ದ ಹನುಮಂತ, 'ನಾನು ಬರುವುದಿಲ್ಲ, ಅಮ್ಮಾ! ನನ್ನ ಮಟ್ಟಿಗೆ ಈ ಮದುವೆ ಅಗ್ನಿಸಾಕ್ಷಿಯಾಗಿ ಯಥಾವಿಧಿಯಾಗಿ ನಡೆದಿದೆ ಎಂಬುದೇ ನನ್ನ ಭಾವನೆ. ಹೊಟ್ಟೆಕಿಚ್ಚಿನಿಂದಲೂ ದುರಾಸೆಯಿಂದಲೂ ಬೆಳಗ್ಗಿಂದ ಈ ಪುರೋಹಿತರು ಒಬ್ಬರಿಗೊಬ್ಬರು ಬೈದಾಡುತ್ತಿದ್ದಾರೆ, ಅಷ್ಟೆ. ಕೊಕ್ಕರೆಯೋ ಸಕ್ಕರೆಯೋ, ಕೈಹಿಡಿದ ಹುಡುಗಿಯನ್ನ ನಾನು ಕೈಬಿಡುವುದಿಲ್ಲ' ಎಂದ.

ಧೀರ!....ಆ ಮೂಗನ್ನು ನೋಡಿಯೂ ಹಾಗಂದ!....ಶೂರ!

ಸುಂದರಮ್ಮನವರು ಗೊಳೋ ಎಂದು ಅಳತೊಡಗಿದರು. 'ಅಳಬೇಡಿ. ಸಮಾಧಾನ ತಂದುಕೊಳ್ಳಿ. ನಮಗೇನಂತೆ? ಅವರಿಬ್ಬರೂ ಎಷ್ಟು ದಿನ ಸುಖ

ವಾಗಿರುತ್ತಾರೆ, ನೋಡೋಣ! ನಾಳೆ ಅಲ್ಲ ನಾಳಿದ್ದು ಜಗಳ ಮನಸ್ತಾಪ ಬಂದೇ ಬರುತ್ತದೆ. ಆಗ ತಿಳಿಯುತ್ತದೆ ಹಸುವಿಗೆ. ಅಯ್ಯೋ! ತಾಯಿ ಮಾತು ಕೇಳದೆಹೋದೆನಲ್ಲಾ. ಆ ದಿನವೇ ತಪ್ಪಿಸಿಕೊಂಡಿದ್ದರೆ ಸುಖವಾಗಿತ್ತಲ್ಲಾ ಅಂತ ಅವನಿಗೆ ಆಗ ಅನ್ನಿಸುತ್ತದೆ....ಎರಡು ಮೂರು ತಿಂಗಳು ಸಂಸಾರ ನಡೆಸಲಿ....ಆಮೇಲೆ ತಾನಾಗಿಯೇ ಕರೆದುಕೊಂಡು ಬಂದು ಇಲ್ಲ ಬಿಟ್ಟುಬಿಟ್ಟು ಬದುಕಿದೆ ಅಂತ ಓಡಿಬರುತ್ತಾನೆ ನಿಮ್ಮ ಹತ್ತಿರಕ್ಕೆ.' ಎಂದು ಸಾವಿತ್ರಮ್ಮನವರು ಬುದ್ಧಿವಾದ ಹೇಳಿದರು. ಶೀನ ಹೋಗಿ ಅಣ್ಣನಿಗೆ, 'ಬೇಡ, ಹನು! ಹಠಹಿಡಿದು ಹಾಳಾಗಬೇಡ. ಅಮ್ಮನ ಅಭಿಪ್ರಾಯ ಅಂದರೆ ಅಷ್ಟು ಅಲಕ್ಷ್ಯ....' ಎಂದು ಪ್ರಾರಂಭಿಸಿದಾಗ, 'ಹೋಗೋ, ಪ್ರಾರಬ್ಧವೇ, ನಿನ್ನ ಪ್ರಾಸವೂ ಬೇಡ, ಪ್ರಸಂಗವೂ ಬೇಡ ನನಗೆ......' ಎಂದು ಅವನು ಒದರಿಬಿಟ್ಟ. ಮೃತ್ಯು, ಗುಂಡ,—ಯಾರಿಂದಲೂ ಹಸುಮಂತನನ್ನು ಅಲ್ಲಾಡಿಸಲಾಗಲಿಲ್ಲ....

ಕಡೆಗೆ, ಎಲ್ಲರಿಗೂ ಬೇಜಾರಾಯಿತು; ಇದೆಂತಹ ದರಿದ್ರ ಜಗಳ ಎಂದು ಅಲ್ಲಲ್ಲಿ ಕೆಲವರಿಗೆ ತೋರತೊಡಗಿತು; ಶಾಂತಿಯ ಕುರುಹುಗಳು ಕಾಣತೊಡಗಿದುವು. ಮೋಡಗಳು ಒಂದೊಂದಾಗಿ ಜಾರಿದುವು. 'ಹಾಳಾಗಿ ಹೋಗಲಿ' ಅಂತ ಸುಂದರಮ್ಮನವರು ಸುಮ್ಮನಾದರು. ಭಾಷಿಂಗದ ಬದಲಾವಣೆ ಅಂಥಾ ದೊಡ್ಡ ಅಪರಾಧವಲ್ಲ; ನೆರೆದಿದ್ದ ಬ್ರಾಹ್ಮಣರಿಗೆ ತಲಾ ನಾಲ್ಕಾಣೆ ದಕ್ಷಿಣೆ ಕೊಟ್ಟು ಅವರ ಕೈಯಲ್ಲಿ ಆಶೀರ್ವಾದ ಪಡೆದರೆ ಅದಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು ಎಂದು ನಂಜುಂಡಶಾಸ್ತ್ರಿಗಳೂ ಒಪ್ಪಿದರು; 'ಗಂಡುಬೀರಿ ಅಂತ ನಾನು ಹೇಳಿದ್ದು ನಿಮ್ಮನ್ನ ಅಲ್ಲವೇ ಅಲ್ಲ' ಎಂದು ಜಯಲಕ್ಷ್ಮಮ್ಮನವರು ಹೇಳಿದರು. 'ಎಲ್ಲವೂ ಆಂಜನೇಯನ ಕೃಪೆ' ಅಂತ ಭೀಮರಾಯರು ಹಿಗ್ಗಿದರು. ಕೊಂಕುಮಾತುಗಳು, ಗಂಟು ಹುಬ್ಬುಗಳು ಮಾಯವಾದುವು.

ಆಗ, ಶ್ರೀಕಂಠಯ್ಯನವರು 'ಇನ್ನು ಚಿಂತೆ ಇಲ್ಲ; ಊಟದ ನಡುವೆ ಮಕ್ಕಳನ್ನೂ ಎಳೆದುಕೊಂಡು ಎಲ್ಲಿಗೋ ಹೊರಟು ಹೋದ ಆನಂದರಾಯರನ್ನ ಹುಡುಕಿ ಕರೆದುಕೊಂಡು ಬರುತ್ತೇನೆ.' ಎಂದು ಹೇಳುತ್ತಾ ಒಂದು ಲಾಂದ್ರುವನ್ನು ಕೈಯಲ್ಲಿ ಹಿಡಿದು ಎದ್ದರು. ಒಂದೆರಡು ಹೆಜ್ಜೆ ಮುಂದಕ್ಕೆ

ಹಾಕಿದರು....ಜಯಲಕ್ಷ್ಮಮ್ಮನವರು ತೆಪ್ಪಗಿರಬಾರದಾಗಿತ್ತೆ? ಅವರನ್ನು ಹಿಂದಕ್ಕೆ ಕರೆದು, 'ಯಾಕೆ ಹೋಗಬೇಕು ನೀವು? ಎಲ್ಲಿಗೆ ಹೋಗುತ್ತಾರೆ ಅವರು? ಬಂದೇಬರುತ್ತಾರೆ. ಅಷ್ಟರಮಟ್ಟಿಗೆ ನಮ್ಮಮೇಲೆ ಕೋಪವಿದ್ದರೆ, ಇರಲಿ, ಯಾರು ಬೇಡ ಅನ್ನುತ್ತಾರೆ? ನೀವು ಏಕೆ ಹೋಗಬೇಕು ಈ ಕತ್ತಲಲ್ಲಿ? ಸುಮ್ಮನೆ ಕುಳಿತುಕೊಳ್ಳಿ. ಅಳಿಯಂದಿರು ನಮ್ಮ ಕಡೆ ಇರುವಾಗ ಅವರಿವರ ಹಿಂದೆ ನೀವು ಏಕೆ ಓಡಾಡುತ್ತೀರಿ?' ಎಂದರು.

ಹನುಮಂತನ ಎರಡು ಕಿವಿಗಳೂ ನೆಟ್ಟಗಾದುವು. ರಕ್ತ ಬಿಸಿ ಆಯಿತು; ಮೈಗೆಲ್ಲಾ ಕೋಪದ ಕಾವೇರಿತು. 'ಅಳಿಯಂದಿರು ನಮ್ಮ ಕಡೆ ಇರುವಾಗ ಅವರಿವರ ಹಿಂದೆ ನೀವು ಏಕೆ ಓಡಾಡುತ್ತೀರಿ?'....'ಇಷ್ಟಕ್ಕೆ ಬಂತೋ ಸೊಕ್ಕು?'....'ನಾನೇನು ಇವರ ಮನೆ ಗುಲಾಮನೋ?'...... 'ನಮ್ಮ ತಂದೆಯನ್ನೂ ಕೂಡ ಹೀಗೆ ಅಪಮಾನ ಮಾಡುವಷ್ಟು ನಾನು ಇವರ ಕಡೆ ಸೇರಿಬಿಟ್ಟೆನೋ?'....ಎಂದು ಯೋಚಿಸಿ....'ಛೆ! ಹಾಳು ಸಂಸಾರ!' 'ಥೂ, ಮದುವೆ!' ಎಂದ.

ಮದುವೆ ಚಪ್ಪರದಿಂದ ಮೆಲ್ಲಗೆ ನುಸುಳಿದ. ನರಸಿಂಗರಾಯರ ಮನೆ ಹಿತ್ತಲನ್ನು ಹಾದು, ಸೋಮೇಗೌಡನ ತೋಟಕ್ಕೆ ನುಗ್ಗಿ, ಅಲ್ಲಿಂದ ಕೆರೆ ಏರಿಯ ಮೇಲಕ್ಕೆ ಬಂದ......

—

## ಹನ್ನೊಂದನೆಯ ಅಧ್ಯಾಯ

### ಗೌಡರ ಮೌಢ್ಯ

●

ನಡೆ ಮುಂದೆ ನಡೆ ಮುಂದೆ ನಡೆ ಮುಂದೆ ಮುಂದೆ
ವೇದಾಂತಕೇಸರಿಯೆ ನುಗ್ಗಿ ನಡೆ ಮುಂದೆ —**ಪುಟ್ಟಪ್ಪ**

ಬಾವಿಯು ಬಳಸುವ ಪಸುಳೆಯು ತಪ್ಪೊ ?
ತಾವಂದು ತಡೆಯದ ತಾಯದು ತಪ್ಪೊ ? —**ಚಿಕದೇವರಾಜ**

ಗಾಣಿಗಗೆ ಸಿಟ್ಟಾಗಿ ಒಣರೊಟ್ಟಿ ತಿಂದಂತೆ —**ಅಂಬಿಕಾತನಯದತ್ತ**

●

ಕೆರೆ ಏರಿ ಮೇಲೆಯೇ ಬೇಗ ಬೇಗನೆ ನಡೆದು ರೆಯಿಲು ಸ್ಟೇಷನಿಗೆ ಬಂದ; ಹನುಮಂತ. . ತಲೆಯಮೇಲೆ ಮುಸುಕು ಹಾಕಿಕೊಂಡು ಗಂಟಲು ಬದಲಾಯಿಸಿ ತಿಪ್ಪೂರಿಗೆ ಒಂದು ತಿಕೇಟು ಕೊಂಡುಕೊಂಡು, ಅಲ್ಲೇ ನಿಂತಿದ್ದ ರೆಯಿಲಿನ ಹತ್ತಿರ ಬಂದು, ಅದರ ನೆರಳಲ್ಲೇ ಉದ್ದಕ್ಕೂ ಓಡಾಡಿ, ಜಾಗ ಹುಡುಕಿದ. ಯಾವ ಗಾಡಿಯೊಳಗೆ ಕುಳಿತರೆ ಹೆಚ್ಚು ಮರೆ ಎಂದು ತಡಕಾಡಿದ. ಸಾಲಾಗಿ ನಿಂತಿದ್ದ ಗಾಡಿಗಳೆಲ್ಲವೂ ಭರ್ತಿಯಾಗಿದ್ದುವು. ವಿಚಿತ್ರದುರ್ಗದವರು ಯಾರು ಸಿಕ್ಕಿದರೂ ತನ್ನನ್ನು ಗುರುತಿಸಿ 'ಇದೇನಯ್ಯಾ? ಮದುವೆಯಾದ ಹೆಣ್ಣನ್ನ ಅಲ್ಲಿ ಕೂರಿಸಿಬಿಟ್ಟು ನೀನು ಇಲ್ಲಿಗೆ ಬಂದಿದ್ದೀಯಾ?' ಎಂದು ಕೇಳಿದರೆ ಗತಿ ಏನು ? ಎಂದು ಅವನಿಗೆ ದಿಗಿಲಾಯಿತು. ಹಾಗೆಯೇ ಹುಡುಕುತ್ತಿದ್ದಾಗ, ತುತ್ತತುದಿಯಲ್ಲಿದ್ದ ಒಂದು ಗಾಡಿ ಮಾತ್ರ ಸಂಪೂರ್ಣ ಖಾಲಿ! . . ದೀಪ ಹಚ್ಚುವವನು ಕೂಡ ಒಳಗೆ ಹೊಕ್ಕಿರಲಿಲ್ಲ; ಕತ್ತಲು. . ಅನುಕೂಲವೇ ಆಯಿತು, ಅಂತ ಹನುಮಂತ ಅದರೊಳಗೆ ಕುಳಿತ.

ಒಂದೆರಡು ನಿಮಿಷಗಳ ಅನಂತರ ಸ್ಟೇಷನೊಳಕ್ಕೆ ಮೃತ್ಯು ಗುಂಡಶೀನ ಎಲ್ಲರೂ ಬಂದುಬಿಟ್ಟರು. ಶ್ರೀಕಂಠಯ್ಯನವರೂ ಸಂಜುಂಡಶಾಸ್ತ್ರಿಗಳೂ ಜೊತೆಯಲ್ಲೇ ಇದ್ದಹಾಗಿತ್ತು. ಸದ್ಯಕ್ಕೆ ಹೆಂಗಸರು ಯಾರೂ ಬಂದಿಲ್ಲ; ಅವರ ಬಾಯಿಬಡಿತವನ್ನು ಕೇಳಿದರೆ ಇಳಿದು ಮುಖ ತೋರಿಸಿಬಿಡೋಣ ಅನ್ನಿಸುತ್ತಿತ್ತೋ, ಏನೋ, ಎಂದು ಹನುಮಂತ ಕೊಂಚ ಧೈರ್ಯ ತಾಳಿದ. ತನ್ನನ್ನು ಹುಡುಕಲು ಅವರುಗಳು ಮಾಡುತ್ತಿದ್ದ ಅವಾಂತರವು ಹನುಮಂತನಿಗೆ ಸ್ಪಷ್ಟವಾಗಿ ಕೇಳಿಸಿತು. ಪ್ರತಿಯೊಂದು ಗಾಡಿ ಬಾಗಲಲ್ಲೂ ಧಬಧಬನೆ ಬಡಿಯುವುದು, ಹನೂ, ಹನೂ, ಹನುಮಂತಾ, ಹನುಮಂತರಾವು, ಹನುಮಂತರಾಯಾ, ಎಂದು ಕೂಗುವುದು, ಅನಂತರ, 'ಸ್ವಾಮಿ! ಇಲ್ಲಿಗೆ ಒಬ್ಬರು ಬಂದರೆ? ಉಬ್ಬು ಹಲ್ಲು? ಅಗಲವಾದ ಮೂಗು? ಕೊಂಚ ಕುಳ್ಳ?' 'ಗೌಡರೇ! ಆನಂದರಾಯರ ಮಗ, ಉಬ್ಬು ಹಲ್ಲಿನ ಕುಳ್ಳ ಹಿರಿಯುವನು ಇಲ್ಲಿದಾನೆಯೇ?' ಎಂದು ಒಳಗಿದ್ದವರನ್ನು ವಿಚಾರಿಸುವುದು—ಹೀಗೆ ಅವರು ಕ್ರಮವಾಗಿ ಪ್ರತಿಯೊಂದು ಗಾಡಿಯನ್ನೂ ಜಪ್ತಿ ಮಾಡುತ್ತಾ ಬಂದರು. ತನ್ನನ್ನು ಅವರು ವಿವರಿಸಿದ ರೀತಿಯನ್ನು ಕೇಳಿದಾಗ ಹನುಮಂತನಿಗೆ ತುಂಬಾ ರೇಗಿತು. ಇಳಿದು ಹೋಗಿ ಆ ಮೃತ್ಯುವಿನ ಕಾಪಾಳಕ್ಕೆ ಬಿಸಿಬಿಸಿಯಾಗಿ ಎರಡು ಬಿಗಿಯೋಣವೆನಿಸಿತು. 'ಕೃತಘ್ನ! ೭೭ ಸಾರಿ ಇವನಿಗೋಸ್ಕರ ಕತ್ತೆದಿಬ್ಬದಲ್ಲಿ ಕಿರಿಚಿದ್ದಕ್ಕೆ ಈಗ ನನ್ನನ್ನ ಹೀಗೆ ಅಪಮಾನಮಾಡುತ್ತೀಯಾ, ಊರಿನವರ ಮುಂದೆ!' ಎಂದು ಬೈಯುತ್ತಾ ಹನುಮಂತ ಕತ್ತಲಲ್ಲೇ ಮುಷ್ಟಿ ಬಿಗಿದನು; ಕಟಕಟನೆ ಹಲ್ಲುಕಡಿದನು.

'ಹನೂ!'—'ಉಬ್ಬುಹಲ್ಲಿನ ಕುಳ್ಳ ಇದಾನೆಯೇ?'—'ಹನೂ, ಲೋ, ನಿಮ್ಮ ತಾಯಿ ಕರೆಯುತ್ತಾಳೆ ಬಾರೋ!'—'ಸಾರ್! ಒಬ್ಬ ಹುಡುಗ ಬಂದಿದಾನೆಯೇ, ನಶ್ಯಹಾಕುತ್ತಾನೆ, ಮೂಗು ಸದಾ ಕೊಳೆಯಾಗಿರುತ್ತದೆ!'—'ಹನೂ!'—'ಲೋ!'......

ಕಡೆಗೂ ರೈಲು ಹೊರಟಿತು. ಸದ್ಯಕ್ಕೆ, ಹನುಮಂತ ಕುಳಿತಿದ್ದ ರೈಲು-ಗಾಡಿ ಹತ್ತಿರಕ್ಕೆ ಒಬ್ಬರೂ ಬರಲೇ ಇಲ್ಲ!....ಕತ್ತಲು ಗಾಡಿಯಲ್ಲಿ ಒಬ್ಬರು ಕೂರುವುದಿಲ್ಲ ಅಂತ ಅವರು ಊಹಿಸಿರಬಹುದು..ಉಫ್,

ಉಫ್, ಉಫ್, ಚುಕ್ಕುಚುಕ್ಕುಚುಕ್ಕುಚುಕ್ಕು..ಭುಕ್ಕು....ರೆಯಿಲು ಹೊರಟೇಬಿಟ್ಟಿತು.

ಇದೇನಿದು? ಹನುಮಂತರಾಯನ ಗಾಡಿ ನಿಂತಲ್ಲೇ ನಿಂತಿತ್ತು. ಕದಲಲೇ ಇಲ್ಲ. ಬಹುಶಃ ಅದನ್ನು ಇತರ ಗಾಡಿಗಳೊಂದಿಗೆ ಸರಪಣಿಯಿಂದ ಬಿಗಿದಿರಲಿಲ್ಲವೋ, ಏನೋ? ಅದರೊಳಗೆ ಬೇರೆ ಯಾರೂ ಬರದೆ ಇದ್ದದ್ದೂ, ದೀಪ ಹಚ್ಚದೆ ಇದ್ದದ್ದೂ ಆ ಕಾರಣದಿಂದಲೇ ಇರಬಹುದು. ಆದ್ದರಿಂದಲೇ, ಮೃತ್ಯು ಗುಂಡ ಶೀನ ಮೊದಲಾದವರು ಆ ಗಾಡಿಯ ಹತ್ತಿರ ಸುಳಿಯದೆ ಇದ್ದದ್ದು! ಸ್ಟೇಷನಿಂದ ಹೊರಡದೆ ಇರುವ ಗಾಡಿಯಲ್ಲಿ ಯಾವ ಮುಟ್ಠಾಳನೂ ಕೂಡುವುದಿಲ್ಲವೆಂದು ಅವರೆಲ್ಲರೂ ಊಹಿಸಿರಬೇಕು..ಆದರೆ, ದೇವರ ದಯೆಯಿಂದ, ಹನುಮಂತ ಅಂತಹ ಮುಟ್ಠಾಳನಾಗಿದ್ದ!....ಆದ್ದರಿಂದ, ಯಾರೂ ಅವನನ್ನು ಪತ್ತೆಹಚ್ಚಲಿಲ್ಲ!....

ಲಗ್ನದ ದಿನ ರಾತ್ರಿ ಅಳಿಯ ತಪ್ಪಿಸಿಕೊಂಡು ಓಡಿಹೋದುದಕ್ಕೆ ಸುಂದರಮ್ಮನವರೇ ಮುಖ್ಯ ಕಾರಣಕರ್ತರು ಎಂದು ಜಯಲಕ್ಷ್ಮಮ್ಮನವರು ವಾದಿಸಿದರು; 'ಅವಳಿಜವಳಿ ಮೇಲೆ ನಿಮಗೆ ಅಷ್ಟೊಂದು ಮಮತೆ ಇದ್ದಿದ್ದರೆ ನೆಟ್ಟಗೆ ಅಡಿಗೆ ಮನೆಗೆ ನುಗ್ಗಿ ಒಂದೊಂದು ಸೌಟು ಬಡಿಸಬಾರದಾಗಿತ್ತೆ? ನಾವೇನು ನಿಮ್ಮ ಕೈಯನ್ನ ತಡೆಯುತ್ತಿದ್ದೆವೇ?' ಎಂದು ಆಕೆ ಕೇಳಿದಳು. ಜಯಲಕ್ಷ್ಮಮ್ಮನವರು ಆಡಿದ ಚುಚ್ಚುಮಾತುಗಳೇ ಅವನನ್ನು ನೋಯಿಸಿದುವು ಎಂದು ಸುಂದರಮ್ಮನವರು ಹಠ ಹಿಡಿದರು. ಧಾರೆ ಮುಹೂರ್ತ ಎಲ್ಲವೂ ಹೇಗೋ ಸರಾಗವಾಗಿ ನಡೆದ ಮೇಲೂ ಕೂಡ, ಭಾಷಿಂಗದ ಬದಲಾವಣೆಯೊಂದರಿಂದಲೇ ಮದುವೆ ಎಂಬುದು ಶಾಸ್ತ್ರೋಕ್ತವಾಗಿ ನಡೆದಿಲ್ಲ ಎಂದು ಪುರೋಹಿತರು ಗಲಾಟೆ ಮಾಡಿದ್ದು ಅವನ ವ್ಯಥೆಗೆ ಕಾರಣವೆಂದು ಮೇಜರ್ ಭೀಮರಾಯರು ತರ್ಕಿಸಿದರು. ತಮ್ಮ ಬೆಳ್ಳಿಕಪ್ಪು ಕದ್ದದ್ದರಿಂದ ಉಂಟಾದ ಮಾನಹಾನಿಯಿಂದ ಅವನು ಪಲಾಯನ ಮಾಡಿರಬಹುದೆಂದು ಅಡಿಗೆಯವರು ಅಭಿಪ್ರಾಯಪಟ್ಟರು. 'ಏನೂ ಇಲ್ಲ ಕಣೋ, ಆ ಹುಡುಗಿ ಮೂಗು ಉದ್ದವಾಗಿತ್ತಂತೆ, ಸೊಟ್ಟಗಿತ್ತಂತೆ, ಅದನ್ನು ನೋಡಿ ಭಯಪಟ್ಟು ಓಡಿಹೋದನಂತೆ.' ಎಂದು ಊರಿನ ಪೋಲಿ ಹುಡುಗರು ಡಂಗುರ ಹೊಡೆದರು...... 'ಹೇಗಾದರೂ ಆಗಲಿ, ನಮ್ಮ ನಷ್ಟ ನಮಗೆ, ಇತರರನ್ನು

ಬೈದ. ಫಲವೇನು, ಹುಡುಗಿ ಜಾತಕ ತರಿಸಿ, ಶಿವಶಂಕರ ಜೋಯಿಸರ ಕೈಗೆ ಕೊಟ್ಟು ಚೆನ್ನಾಗಿ ಪರೀಕ್ಷಿಸಬೇಕಾಯಿತು, ನಮ್ಮದೇ ತಪ್ಪು! ಲಗ್ನದ ದಿವಸವೇ ಅವಳ ಜಾತಕದಲ್ಲಿ 'ಗಂಡಾಂತರ' ಯೋಗವಿತ್ತೋ ಏನೋ? ದೊಡ್ಡಮನುಷ್ಯರು, ನಮಗೆ ಮೋಸಮಾಡುವುದಿಲ್ಲ ಅಂತ ಭಾವಿಸಿದ್ದೇ ಈಗ ತಲೆಗೆ ಬಂತು; ಹನುಮಂತನನ್ನೂ ಕೂಡ ಆತ ಮೆತ್ತಗೆ ಪುಸಲಾಯಿಸಿ ಬಲೆಯೊಳಗೆ ಕೂಡಿಸಿಬಿಟ್ಟಿದ್ದರಲ್ಲಾ.' ಎಂದು ಆನಂದರಾಯರು ಅಂದು-ಕೊಂಡರು. ತುಂಬಾ ಗೋಳಾಡುತ್ತಿದ್ದ ತಮ್ಮ ಹೆಂಡತಿಯನ್ನು ನೋಡಿ, 'ಬೇಡ, ಕಣೆ! ಎಲ್ಲೋ ಕೊಂಚ ದಿನ ತಲೆ ತಪ್ಪಿಸಿಕೊಂಡು ಓಡಾಡಿ ಬಿ. ಎ., ಗಿ. ಎ., ಮಾಡಿಕೊಂಡು ಬರುತ್ತಾನೆ....ಪ್ರಾಣ-ಗೀಣ ಕಳೆದು-ಕೊಳ್ಳುವಷ್ಟು ಅವನಿಗೆ ಧೈರ್ಯವಿಲ್ಲ, ಕಣೆ' ಎಂದು ಹೇಳಿದರು. 'ನೆಗಡಿಗೆ ಹೆದರುವ ಪ್ರಾಣಿ ನೀರಿಗೆ ಬಿದ್ದಾನೆಯೇ?' ಎಂದು ಸಂತೈಸಿದರು. ಆದರೂ, ಕೂಡ. ತಂದೆತಾಯಿಗಳ ಪರದಾಟವನ್ನು ಕೇಳಬೇಕೆ?......ಕೆರೆ ಬಾವಿ ಹುಡುಕಿಸಿದರು; ಅತ್ತು ಕರೆದು ಗೋಳಾಡಿದರು....

ನಾಲ್ಕೈದು ದಿನಗಳ ನಂತರ ಆನಂದರಾಯರು ಶೀನನನ್ನೂ ಕರೆದು ಕೊಂಡು ಗೋಳಪ್ಪನವರ ಮನೆಗೆ ಹೋದರು: 'ಹನುಮಂತನ ಜಾಗದಲ್ಲಿ ಈತನನ್ನು ಇರಿಸಿಕೊಳ್ಳಿ!' ಎಂದು ಬೇಡಿದರು. ಆದರೆ, ಶೀನ ಬೆಳ್ಳಿಕಪ್ಪು ಕದ್ದ ಸಮಾಚಾರವು ಊರಿಗೆಲ್ಲಾ ತಿಳಿದುಬಿಟ್ಟಿತ್ತು. 'ಕಣ್ಣೆದುರಿಗಿದ್ದ ಪದಾರ್ಥಗಳನ್ನು ಕದಿಯದೆ ಇರುವುದಿಲ್ಲವಲ್ಲಾ ನಿಮ್ಮ ಬಿ. ಎ. ಮಗ? ಇವನನ್ನು ಸೊಸೈಟಿಯೊಳಗೆ ಸೇರಿಸಲೇ ಕೂಡದು. ಇಲ್ಲ, ಒಂದು ವೇಳೆ ಇವನು ಕದ್ದಿಲ್ಲ ಅಂತ ಇಟ್ಟುಕೊಳ್ಳಿ. ಇತರ ಗುಮಾಸ್ತೆಯವರು ಹಣ ಹೊಡೆದು ಬಿಟ್ಟು, ಈ ಹೋತನ ನೊಸಲಿಗೆ ಮೊಸರನ್ನು ಒರಸಿದರೂ ಒರಸ ಬಹುದು. ಆಗ ನಾವು ಇವನನ್ನೇ ಕಳ್ಳ ಅಂತ ಶಿಕ್ಷಿಸಬೇಕಾಗುತ್ತದೆ.... ಆದರೂ ನಿಮಗೆ ಉದಾರಶಿರೋಮಣಿ ಬಿರುದು ದಯಪಾಲಿಸಿದವನು ನಾನು! ಅದನ್ನ ನೀವು ಇದು ವರೆಗೂ ಚೆನ್ನಾಗಿ ಪರಿಪಾಲಿಸಿಕೊಂಡು ಬಂದಿದ್ದೀರಿ. ಅದಕ್ಕೆ ಪ್ರತಿಫಲವಾಗಿ ಒಬ್ಬ ಮಗನಿಗೆ ಇಲ್ಲಿ ಚಾಕರಿ ಕೊಡುತ್ತೇನೆ ಅಂತ ನಾನು ಹೇಳಿದ್ದೂ ಉಂಟು; ಇಲ್ಲ ಅಂತ ಹೇಳುತ್ತಿಲ್ಲ....ನನಗೇನೂ ನಷ್ಟ ವಿಲ್ಲ; ಹತ್ತು ಜನರ ಹಣ....ಆದರೆ, ಈತನ ನಡತೆ ಸರಿಯಾಗಿರುತ್ತದೆ, ಕೈ

ಶುದ್ಧವಾಗಿರುತ್ತದೆ, ಎಂಬ ಭದ್ರತೆಗಾಗಿ ನೀವು ಕಡೆಯ ಪಕ್ಷ ೨೦೦ ರೂಪಾಯಿಗಳನ್ನಾದರೂ ಇಲ್ಲಿ ಠೇವಣಾತಿ ಕಟ್ಟಬೇಕು, ' ಎಂದು ನಿರ್ಬಂಧಿಸಿದರು. 'ಹಾಗೆ ಮಾಡಿದರೆ ಶ್ರೀನಿವಾಸರಾಯನಿಗೆ ತಿಂಗಳಿಗೆ ೨೦ ರೂಪಾಯಿ ಸಂಬಳ ಕೊಡುವುದಾಗಿಯೂ ವಾಗ್ದಾನ ಮಾಡಿದರು. ಪಾಪ, ಗೋಳಪ್ಪನವರು ಇನ್ನೇನು ತಾನೇ ಮಾಡಿಯಾರು?....

ಸುಂದರಮ್ಮನವರ ಕೊರಳಿನಲ್ಲಿ ಉಳಿದಿದ್ದ ಒಂದು ಸರ ಮಾರಿ ೧೬೫ ರೂಪಾಯನ್ನು ತೆಗೆದುಕೊಂಡು ಹೋಗಿ ಲಕ್ಷ್ಮಣರಾಯರನ್ನು ಕೈಕಾಲು ಕಟ್ಟಿ 'ಅಷ್ಟೇ ಸಾಕು!' ಅನ್ನಿಸುವುದಕ್ಕೆ ಭಗೀರಥ ಪ್ರಯತ್ನವಾಗಿ ಹೋಯಿತು. ಕಡೆಗೆ ಗೋಳಪ್ಪನವರು 'ಇಂದಾ—ಗೆ' ರೆಜಿಸ್ಟರನ್ನು ಶ್ರೀನಿವಾಸರಾವ್ ಬಿ. ಎ. ಅವರ ಕೈಗೆ ಕೊಟ್ಟರು. 'ಹುಷಾರ್! ನಿನ್ನ ದುರ್ವಿದ್ಯೆ ಒಂದನ್ನೂ ಇಲ್ಲಿ ತೆಗೆಯಬೇಡ. ನೆಟ್ಟಗೆ ಜಯಿಲಿಗೇ ಕಳುಹಿಸುತ್ತೇನೆ, ಜೋಕೆ' ಅಂದರು. ಶೀನನಿಗೆ ಏನೂ ಅರ್ಥವಾಗಲಿಲ್ಲ. ಜನರು ಏಕೆ ಹೀಗೆ ತನ್ನ ಮೇಲೆ ರೇಗಿ ಬೀಳುತ್ತಾರೆ ಎಂದು ಅವನು ಕಳವಳಗೊಂಡನು. 'ಇದೇನು? ನನ್ನ ಮುಖದ ಮೇಲೆ ಎಲ್ಲಾದರೂ 'ಇವನನ್ನು ಬೈಯಿರೋ' ಎಂದು ಬರೆದಿದೆಯೋ ಏನೋ?' ಎಂದು ಹಣೆ ಚಚ್ಚಿಕೊಳ್ಳುತ್ತಾ ಅವನು ಸೊಸೈಟಿ ಕಟ್ಟಡದ ಒಂದು ಮೂಲೆಯಲ್ಲಿದ್ದ ಹನುಮಂತನ ಕುರ್ಚಿಯಲ್ಲಿ ಕುಳಿತನು....ಎದುರಿಗೆ ಹನುಮಂತನ ಮೇಜು....ಬಿಕ್ಕಿಬಿಕ್ಕಿ ಅಳುತ್ತಾ, ಆ ದಿನ ಶೀನ 'ಇಂದಾ'ನೂ ಬರೆಯಲಿಲ್ಲ; 'ಗೆ'ನೂ ಬರೆಯಲಿಲ್ಲ......

* * * *

ಕತ್ತಲು ತುಂಬಿದ ಒಂಟಿ ಗಾಡಿಯಲ್ಲಿ ಒಬ್ಬನೇ ಕುಳಿತು ಬೇಸರಿಕೆಯಾಗಿ, ಹನುಮಂತನ ಕಣ್ಣಿಗೆ ನಿದ್ದೆ ಹತ್ತಿತು. ಅವನು ನಿದ್ದೆ ಮಾಡುತ್ತಿದ್ದಾಗಲೇ ಆ ಗಾಡಿಯನ್ನು ರೆಯಿಲಿನವರು ತಿಂಗಳೂರು ಮೆಯಿಲ್ ಟ್ರೈಯಿನ್‌ಗೆ ಸಿಕ್ಕಿಸಿಬಿಟ್ಟರು. ಒಂದೆರಡು ಸ್ಟೇಷನ್ ಮುಂದೆ ಹೋದಾಗ, ಅದರೊಳಕ್ಕೆ ನಾಲ್ಕೈದು ಜನರು ನುಗ್ಗಿ ಅಲ್ಲಲ್ಲಿ ಕುಳಿತುಕೊಂಡರು. ಬೆಳಗ್ಗೆ ಎಚ್ಚರವಾದಾಗ ತನ್ನ ಗಾಡಿ ಮುಂದಕ್ಕೆ ಹೋಗುತ್ತಿದ್ದುದನ್ನು ಕಂಡು ಹನುಮಂತ ಬೆರಗಾದನು. ಎದುರಿಗಿದ್ದ ಇಬ್ಬರು ಗೌಡರನ್ನು ವಿಚಾರಿಸಿದಾಗ, ಒಂದೆರಡು ಗಳಿಗೆಗಳಲ್ಲಿ ರೆಯಿಲು ತಿಂಗಳೂರು ತಲಪುತ್ತದೆ ಎಂದು ತಿಳಿಯಿತು.

ತಿಂಗಳೂರೆಲ್ಲಿ? ವಿಚಿತ್ರದುರ್ಗವೆಲ್ಲಿ? ಎಲ್ಲಿಂದೆಲ್ಲಿಗೆ? ತಾಯಿ, ತಂದೆ, ಶೀನ, ಗುಂಡ, ಭೀಮರಾಯರು, ಲಕ್ಷ್ಮಣರಾಯರು....ಹನುಮಂತನಿಗೆ ವ್ಯಸನವೂ ಅಧೈರ್ಯವೂ ಒಟ್ಟಿಗೆ ಉಕ್ಕಿ ಬಂತು. ಮನೆಗೆ ಹಿಂತಿರುಗಿ, ಅಳುವ ವರ ಕಣ್ಣೊರಸಿ, ತಂದೆ-ತಾಯಿಗಳಿಗೆ ಅಲ್ಪಸ್ವಲ್ಪ ಸಹಾಯಮಾಡುತ್ತಾ ಹಾಯಾಗಿ 'ಇಂದಾ-ಗೆ' ಕೆಲಸ ಮಾಡಿಕೊಂಡು ಸದ್ಗೃಹಸ್ಥನಾಗಿರೋಣ ಎನಿಸಿತು. ಆದರೆ, ಈಗ ಅವನಿಗೆ ಆ ಸೊಸೈಟಿಯೇ ಒಂದು ಬಂದಿಖಾನೆ ಯಂತೆ ತೋರಿತು; ಅಲ್ಲದೆ, ಜಯಲಕ್ಷ್ಮಮ್ಮನವರು ತನ್ನ ತಂದೆಯವರನ್ನು ಆ ಮಾತು ಅಂದ ಮೇಲೆ ಅವರ ಮಗಳನ್ನು ಮದುವೆಯಾದ ಹೆಂಡತಿ ಎಂದು ಸ್ವೀಕರಿಸುವುದೂ ಕೂಡ ತಪ್ಪೆಂದು ತೋರಿತು. 'ಹೇಗಿದ್ದರೂ, ಪುರೋ ಹಿತರು ಯದ್ವಾತದ್ವಾ ಮಂತ್ರ ಹೇಳಿದ್ದಾರೆ. ಇನ್ನೊಂದು ಮದುವೆ ಮಾಡಿ ಯಾರಿಗಾದರೂ ಕೊಡಲಿ! ಈಗ ನಾನು ಊರಿಗೆ ಹೋದರೆ, ಅದೇ ಉಂಡೇನು ಕದ ತೆಗಿ ಅಂತ ಹಲ್ಲು ಕಿಸಿಯುತ್ತಾ ಬಂದಿದಾನೆ, ಅಂತ ಎಲ್ಲರೂ ಹಾಸ್ಯ ಮಾಡುತ್ತಾರೆ' ಎಂದು ಯೋಚಿಸಿ, ವಿಚಿತ್ರದುರ್ಗಕ್ಕೆ ಹಿಂತಿರುಗುವುದಿಲ್ಲ ವೆಂದು ನಿರ್ಧರಿಸಿದ....

ಹನುಮಂತನ ಕಿಸೆಯೊಳಗಿದ್ದ ಟಿಕೀಟು ತಿಪ್ಟೂರಿಗೆ; ತಿಂಗಳೂರಿಗಲ್ಲ! ಆದ್ದರಿಂದ, ರೆಯಿಲಿಂದ ಇಳಿದ ಕೂಡಲೇ ಟಿಕೀಟಿಗಿಂತ ಹೆಚ್ಚು ದೂರ ಪ್ರಯಾಣ ಮಾಡಿದ್ದಕ್ಕೆ ರೆಯಿಲಿನವರು ದಂಡ ಕೇಳಿದರೆ, ಹೇಗೆ ಕೊಡುವುದು ಎಂಬುದೇ ಹನುಮಂತನ ಸದ್ಯದ ಕಷ್ಟ! ನಿದ್ದೆ ಹತ್ತದೆ ಇದ್ದರೆ ತಿಪ್ಟೂರಲ್ಲೇ ಇಳಿದುಬಿಡಬಹುದಾಗಿತ್ತು. 'ಈಗ ತಿಪ್ಟೂರಿಂದ ಈಚೆಗೆ ಪ್ರಯಾಣ ಮಾಡಿ ದ್ದಕ್ಕೆ ದಂಡ ತೆರಲೇಬೇಕಾಗುತ್ತದೆ,' ಎಂದು ಯೋಚಿಸುತ್ತಾ ಅವನು ಜೋಬಿನೊಳಕ್ಕೆ ಕೈ ಹಾಕಿದ......

ಆಗ ಅಲ್ಲಿ ಒಂದು ಕಾಗದ! ಇನ್ನೂ ಅವನು ಒಡೆದು ನೋಡದೆ ಇದ್ದದ್ದು! ಸುಮಾರು ಎರಡು ತಿಂಗಳ ಹಿಂದೆ, ಜೇಳಿನ ಚಿಕಿತ್ಸೆ ಬೋರ್ಡು ತಗುಲಿ ಹಾಕಿದ ದಿನ, ಅವನು ಬರೆದು ಕಳುಹಿಸಿದ ಕಾಗದಕ್ಕೆ ಉತ್ತರವಾಗಿ ಬಂದದ್ದು. ಬೆಳಗಾಂವಿ ಕಡೆ ಪ್ರಖ್ಯಾತರಾದ ಒಬ್ಬರು ಹೋರಾವಜ್ರರಿಗೆ ತನ್ನ ಜಾತಕ ಫಲ ತಿಳಿಸುವಂತೆ ಅವನು ಬರೆದಿದ್ದ. ಅದನ್ನು ಈಗ ತುಂಬಾ ಕಾತುರತೆಯಿಂದ ಅವಸರವಸರವಾಗಿ ಓದಿ ನೋಡಿದ: 'ಕೊಟ್ಟವನು

ಕೆಟ್ಟ; ಇಟ್ಟವನು ಬಿಟ್ಟ; ಎಂಬಂತೆ ಸಿಟ್ಟಿನಿಂದ ಸಿಡುಗುಟ್ಟಬೇಡಿ! ನಿಮ್ಮ ಬುದ್ಧಿ ಕುಂಠಿತವಾಗುತ್ತಿದೆ; ಪತ್ನೀರಾಣಿಗೆ ಮೂಗಿನ ತುದಿಯಲ್ಲೇ ಕೋಪ ಕುಳಿತಿದೆ, ಹುಷಾರಿ! ಆಹಾ! ಚಮತ್ಕಾರದ ವಾತಾವರಣದಿಂದ ನೀವು ಕ್ಷುಲ್ಲಕ ಮಹತ್ವಾಕಾಂಕ್ಷೆಯನ್ನು ಹಚ್ಚಿಕೊಳ್ಳುತ್ತೀರಿ! ಪರಮಹುಷಾರಿ!' ಹನುಮಂತನಿಗೆ ಸುತರಾಂ ಗೊತ್ತಾಗಲಿಲ್ಲ......ಮುಂದಿನ ಪುಟವನ್ನು ನೋಡಿದ. ಅಲ್ಲೂ ಇದೇ ಪಥವಾದ ಕಗ್ಗ....'ಸೂರ್ಯ ಏಳು ಕುದುರೆ ಗಳ ಮೇಲೆ ಕುಂಟನಾಗಿ ಕುಳಿತಿದಾನೆ! ಸಾಲದ್ದಕ್ಕೆ ಅವನ ಮೇಲೆ ಶನಿಯೂ ವಕ್ರಿಸಿದಾನೆ! ನೀವು ಬಿಸಿಲಲ್ಲಿ ಮಾತ್ರ ಅಲೆಯಬೇಡಿ. ಅಂಗಲಾಚಿ ಬೇಡಿ ಕೊಳ್ಳುತ್ತೇನೆ..ಕತ್ತಲಲ್ಲೇ ಓಡಾಡಿ. ಚಂದ್ರ ಏನೋ ಇದ್ದಲ್ಲೇ ಇದಾನೆ. ಕಳಚಿ ಬೀಳಲಿಲ್ಲ. ಉತ್ತಿಷ್ಠ; ಪರಂತಪ! ಈಗಲೇ ನಿಮಗೆ ಬುದ್ಧಿಭ್ರಮೆ ಬರುವುದಿಲ್ಲ....ಎದ್ದೇಳಿ! ಎದ್ದರೆ ಆಳಲ್ಲ, ಅನ್ನಿ. ಬಡವಂ ಬಲ್ಲಿದನಾಗನೇ! ಹರಹರಾ? ನೀವು ಹುಟ್ಟಿದ್ದಕ್ಕೆ ನಿಮ್ಮ ತಾಯ ತಾರುಣ್ಯನಾಶವೇ ಪ್ರಯೋಜನವೋ?....ಧೈರ್ಯವಾಗಿರಿ...ನಿಮ್ಮ ಮೆದುಳನ್ನಿಟ್ಟಿರುವ ಕರಂಡಕ ವನ್ನು ಧೈರ್ಯವೆಂಬ ಕೀಲಿಯಿಂದ ತೆರೆಯಿರಿ!'

ಎದುರಿಗಿದ್ದ ಗೌಡ ಒಬ್ಬ ಆಗ ಹನುಮಂತನ ಮುಂಡಿಯನ್ನಲುಗಾಡಿಸಿ, 'ಸ್ವಾಮಿ! ಈ ರೆಯಿಲಿನವರು ಇಸುಕೊಂಡ ಕಾಸನ್ನು ಹಿಂದಕ್ಕೆ ಕೊಡು ತ್ತಾರೋ?' ಎಂದ. ಮೆದುಳನ್ನಿಟ್ಟಿರುವ ಕರಂಡಕವನ್ನು ಧೈರ್ಯವೆಂಬ ಕೀಲಿಯಿಂದ ತೆರೆದು, ಹನುಮಂತ, 'ಕೊಡುತ್ತಾರೆ, ಕೆಲವು ವೇಳೆ. ನಿನಗೇ ನಾಗಬೇಕು?' ಅಂದ.

'ನೋಡಿ, ಸ್ವಾಮಿ! ರಾತ್ರೋ ರಾತ್ರಿ ಹನ್ನೆರಡು ಮೈಲಿ ಹಳ್ಳಿ ಯಿಂದ ನಡೆದು ಬಂದೆವು ಮೂರು ಜನ. ಕಾಲೆಲ್ಲಾ ತೇದು ಹೋಯಿತು. ತಿಂಗಳೂರಿಗೆ ಹೋಗೋಣ ಅಂತ ತಿಪ್ಟೂರು ಸ್ಟೇಷನ ತನಕ ಬಂದೆವು. ಅಲ್ಲಿಗೆ ಬಂದು ಸೇರುತ್ತಲೂ ನಮ್ಮ ಜೊತೆಯಲ್ಲೇ ಬಂದ ಕೆಂಚ, 'ಲ್ರೋ! ನನ ಗೂನೂ ಟಿಕೀಟು ತೆಗಿ; ಕೊಂಚ ಅತ್ತಲಾಗೆ ಹೋಗಿ ಬೇಗ ಬರುತ್ತೇನೆ' ಅಂತ ಹೇಳಿ ಹೋದವನು ರೆಯಿಲು ಇನ್ನೇನು ಹೊರಡಬೇಕು ಅನ್ನುವಾಗ ಬಂದ....'ನಿಮ್ಮ ಸಂಗಡ ನಾನು ಬರುವುದಿಲ್ಲ; ನೀವು ಹಾಳಾಗಿ ಹೋಗಿ;

ನಾನು ಇಲ್ಲೇ ಇರುತ್ತೇನೆ' ಅಂತ ಸಿಂತೇ ಬಿಟ್ಟ. ರೆಯಿಲು ಹತ್ತಲೇ ಇಲ್ಲ. ಈಗ ಅವನ ಟಿಕೀಟು ನನ್ನ ಕೈಯಲ್ಲಿ ಉಳಿದಿದೆ.'

'ಅದು ಸರಿ, ಗೌಡರೇ! ಅಲ್ಲಿಯ ತನಕ ಬಂದವನು ಅಷ್ಟರೊಳಗೆ ಯಾಕೆ ನಿಮ್ಮೊಂದಿಗೆ ಜಗಳ ಕಾದ?'

ಆಗ, ಅಲ್ಲೇ ಇದ್ದ ಎರಡನೆಯ ಗೌಡರು ಹನುಮಂತನ ಎದುರು ಬಂದು ಕುಳಿತರು. 'ನಾನು ಹೇಳುತ್ತೇನೆ, ಸ್ವಾಮಿ, ವಿಷಯವನ್ನ.... ಇನ್ನೇನೂ ಇಲ್ಲ. ಕೆಂಚನಿಗೆ ಬೆಕ್ಕಿನ ಕಣ್ಣು, ನಿಜವಾಗಿಯೂ. ಆದರೂ ಕೂಡ, ಯಾರಾದರೂ ಆವನನ್ನ ಬೆಕ್ಕೇ ಅಂದರೆ ಅವನಿಗೆ ವಿಪರೀತ ಕೋಪ.. ತಿಪ್ಟೂರು ಸ್ಟೇಷನ್‌ಸಲ್ಲಿ ಕೆಂಚ ಇನ್ನೇನು ರೆಯಿಲು ಹತ್ತಲು ಮೆಟ್ಟಲು ಮೇಲೆ ಕಾಲಿಟ್ಟಾಗ ನಾನು ಎಲ್ಲೋ ಜ್ಞಾನದಲ್ಲಿ 'ಬಾರ್ಲಾ, ಬೆಕ್ಕೇ, ನೆಗೆಯೋ ಒಳಕ್ಕೆ' ಅಂದೆ....ಅಂದಿದ್ದನ್ನ ಯಾಕೆ ಇಲ್ಲಾ ಅನ್ನಲಿ? ಸರಿ, ಅವನು ನಮ್ಮ ಸಂಗ ಬಿಟ್ಟು ಅಲ್ಲೇ ಕುಳಿತಿದಾನೆ!'

ಹನುಮಂತ ಅವರ ಕೈಯಿಂದ ಮೂರು ತಿಕೀಟುಗಳನ್ನು ತೆಗಿದು ಕೊಂಡು, ತಿರುವಿ ಹಾಕುತ್ತಾ, 'ಅಯ್ಯೋ!' ಅಂದ.

'ಯಾಕೆ, ಸ್ವಾಮಿ? ಮೋಸವಾಯಿತೆ?'

'ಗೌಡರೇ! ನಿಮಗೆ ಇದನ್ನ ಯಾರು ಮಾರಿದರು?'

'ಅದೇ! ಆ ಬೋನಿನೊಳಗೆ ಕೂಡಿಹಾಕಿದಾರಲ್ಲಾ, ಸ್ಟೇಷನ್ ಮೇಷ್ಟ್ರು—ಅವರೇ?'

'ಅಲ್ಲಾ! ಹಳ್ಳಿಗಮಾರರು ಅಂತ ತಿಳಿದುಕೊಂಡು ಹೀಗೆ ನಿಮಗೆ ಮೋಸ ಮಾಡುವುದೇ? ನನ್ನ ಟಿಕೀಟು ನೋಡಿ—ಮಧ್ಯ ಒಂದು ಕೆಂಪು ಅಡ್ಡಗೆರೆ ಇದೆ! ನಿಮ್ಮದು, ಬರೀ ಹಳದಿ......ಅಡ್ಡಗೆರೆ ಇದ್ದರೆ, ಹಣ ವಾಪಸ್ಸು, ಅಂತ ಅರ್ಥ. ಈಗ ಒಂದು ವೇಳೆ ನಾನು ತಿಂಗಳೂರಿಗೆ ಹೊರ ಟಿಲ್ಲ ಅಂತ ಇಟ್ಕೊ—ಈ ಟಿಕೀಟನ್ನ ತೋರಿಸಿದರೆ, ಹಣ ಹಿಂದಕ್ಕೆ ಕೊಡು ತ್ತಾನೆ.'

'ಅದು ನಮಗೆ ಹೇಗೆ ತಿಳಿಯಬೇಕು, ಸ್ವಾಮಿ!'

'ನೀವು ನಂಬಿಕೆಯಿಂದಲೇ ಕೆಟ್ಟುಹೋಗುವುದು. ಹೇಳಿದ್ದೆಲ್ಲಾ ನಂಬಿ ಬಿಡುತ್ತೀರಿ. ಬೆಳ್ಳಗಿರುವುದೆಲ್ಲಾ ಹಾಲು, ಕುಳ್ಳಗಿರುವುದೆಲ್ಲಾ ಕಳ್ಳ,

ಬೋನಿನೊಳಗಿರುವವರೆಲ್ಲಾ ಸಿಂಹಗಳು, ಸಿಂಬಿ ಸುತ್ತಿದವರೆಲ್ಲಾ ಯೋಗ್ಯರು-ಅಂತ.'

'ಹಾಗಾದರೆ ನಮಗೆ ನೀವು ಒಂದು ಉಪಕಾರ ಮಾಡುತ್ತೀರಾ? ನಿಮ್ಮ ಕೈಯಲ್ಲಿರುವ ಅಡ್ಡಗೆರೆ ಟಿಕೀಟನ್ನು ನಮಗೆ ಕೊಡಿ; ಕೆಂಚನ ಟಿಕೀಟನ್ನು ನೀವು ಇಟ್ಟುಕೊಳ್ಳಿ....'

'ಆಗಬಹುದು....ಆದರೆ, ಮೆಲ್ಲಗೆ ಮಾತನಾಡು..ಯಾರಿಗಾದರೂ ಕೇಳಿಸಿಬಿಟ್ಟೀತು..ಗ್ರಹಚಾರ..ಈಕಡೆ ಬಾ....ಈ ಬೆಂಚಿನ ಕೆಳಗಿಂದ ನನ್ನ ಕೈಗೆ ಕೊಡು......ನನ್ನ ಟಿಕೀಟನ್ನ ಹುಷಾರಾಗಿ ಇಟ್ಕೊಕೊ.. ಯಾರಿಗೂ ತೋರಿಸಬೇಡ.'

'ಸ್ವಾಮಿ! ನಿಮ್ಮಿಂದ ಕೆಂಚನ ಕಾಸು ಉಳಿಯಿತು ನಮಗೆ.'

'ಅಯ್ಯೋ! ಅಯ್ಯೋ! ಅಷ್ಟು ಉಪಕಾರ ಮಾಡದೆ ಇದ್ದರೆ ನಾವು ಮನುಷ್ಯರಾಗಿ ಹುಟ್ಟಿ ಏನಯ್ಯಾ ಪ್ರಯೋಜನ? ನಮ್ಮ ತಾಯಿ ತಾರುಣ್ಯಾ ನಾಶವೇ ಪ್ರಯೋಜನವಲ್ಲವೆ?'

'ಅದೇನೋ ಸ್ವಾಮಿ, ನಮಗೆ ಹೇಳುವುದಕ್ಕಾಗುವುದಿಲ್ಲ....ಈಗ ಈ ಅಡ್ಡಗೆರೆ ಟಿಕೀಟನ್ನ ಎಲ್ಲಿ ಕೊಟ್ಟರೆ ಹಣ ವಾಪಸ್ಸು ಬರುತ್ತದೆ?'

'ಅದಕ್ಕೇನಯ್ಯಾ? ಯಾವ ಪೋಸ್ಟಾಪೀಸಿಗಾದರೂ ಹೋಗಿ ತೋರಿಸು, ಸಾಕು, ಅವಸರವೇನೂ ಇಲ್ಲ..ಮೂರು ತಿಂಗಳುಗಳ ವರೆಗೂ ಹಣಕ್ಕೇನೂ ಮೋಸವಿಲ್ಲ....ಆದರೆ ನಿನ್ನ ಹೆಸರೇನು?..'

'ತಿ ತಿ ತಿ ತಿ ತಿಮ್ಮ....'

'ನಿನಗೇನು ಬಿಕ್ಕಲೋ? ಇದು ವರೆಗೂ ಚೆನ್ನಾಗಿಯೇ ಮಾತನಾಡುತ್ತಿದ್ದಿ?'

'ಬಿಕ್ಕಲೂ ಇಲ್ಲ, ಮುಕ್ಕಲೂ ಇಲ್ಲ, ಸ್ವಾಮಿ! ನನ್ನ ತಾತನಿಗೆ ಬಿಕ್ಕಲು..ನಾನು ಹುಟ್ಟಿದಾಗ ಸಣ್ಣ ಕೂಸಾಗಿದ್ದೆನಂತೆ..ತೆಗೆದುಕೊಂಡು ಹೋಗಿ ಅವನ ಮಡಿಲಿನಲ್ಲಿಟ್ಟು, ಇದಕ್ಕೆ ಒಂದು ಹೆಸರು ಹೇಳು, ಅಂದರಂತೆ. ಅವನು ಏನು ಹೇಳಿಯಾನು? ತಿ ತಿ ತಿ ತಿ ತಿಮ್ಮ ಅಂದನಂತೆ. ಸರಿ. ದೊಡ್ಡವರು ಇಟ್ಟ ಹೆಸರು ಇಟ್ಟಹಾಗೆ ಇರಬೇಕು ಅಂತ ನಾನೂ ಕೂಡ ತಿ ತಿ ತಿ ತಿ ತಿಮ್ಮ ಅಂತ ಅಂದುಕೊಳ್ಳುತ್ತಿದೇನೆ..ಸ್ವಾಮಿ, ನಿಮ್ಮ ಪಾದ.'

'ಹಾಗಾದರೆ, ಒಂದು ತೊಂದರೆ ಇದೆ! ನೀನು ಪೋಸ್ಟಾಪೀಸಿಗೆ ಹೋಗಿ ತಿ ತಿ ತಿ ತಿ ತಿಮ್ಮ ಅಂದರೆ, ಅವರಿಗೆ ಅರ್ಥವಾಗುವುದಿಲ್ಲ. .ಬ್ರಿಟೀಷಿನವರಲ್ಲವೆ ಅವರು ?. . . . ನೀನು ಬ್ರಿಟಿಷಲ್ಲೇ ಮಾತನಾಡಬೇಕು. . ಅಂದರೆ, ಇಂಗ್ಲೀಷು. . . . '

'ಅದು ಹೇಗೆ, ಸ್ವಾಮಿ! ನನ್ನ ಹೆಸರಿಗೆ ಇಂಗ್ಲೀಷಿನಲ್ಲಿ ಏನು ಹೇಳುತ್ತಾರೆ?. . . . ' ಹನುಮಂತನಿಗೆ ಏನೂ ತೋಚಲಿಲ್ಲ. ಒಂದು ಒಂದೂಕಾಲು ರೂಪಾಯಿಯಷ್ಟು ಮೋಸ ಮಾಡಿ ಇವರಿಂದ ಒಂದು ತಿಂಗಳೂರು ಟಿಕೀಟು ಹೊಡಿಯುವುದಕ್ಕೂ ಇಷ್ಟೊಂದು ದ್ರಾವಿಡಪ್ರಾಣಾಯಾಮ ಬೇಕಾಗುತ್ತದೆ ಅಂತ ಅವನು ಯೋಚಿಸಿರಲಿಲ್ಲ. ನಿಷ್ಕಪಟಿಗಳಾದ ಈ ಗೌಡರನ್ನು ಅನ್ಯಾಯವಾಗಿ ವಂಚಿಸಬೇಕಾಗಿ ಬಂತಲ್ಲಾ ಅಂತ ಅವನು ತುಂಬಾ ವ್ಯಥೆಪಟ್ಟನು. . . .

'ನಿನ್ನ ಹೆಸರು ಇಂಗ್ಲೀಷಿನಲ್ಲಿ 'ಟಿಹೆಚ್ಐ ಟಿಹೆಚ್ಐ ಟಿಹೆಚ್ಐ ಟಿಹೆಚ್ಐ ಟಿಹೆಚ್ಐ ಎಂಎಂಎ' ಎಂದಾಗುತ್ತದೆ. . . . '

'ಅಬ್ಬಬ್ಬಾ! ಎಂತಹ ಭಾಷೆ ಸ್ವಾಮಿ ಅದು? ಅದನ್ನೆಲ್ಲಾ ಹೇಗೆ ಸ್ವಾಮಿ ನಾನು ಹೇಳಲಿ?'

'ಬೇಡ, ಅದಷ್ಟನ್ನೂ ಹೇಳದೆ ಹೋದರೂ, ಎಮ್ಮೆಮ್ಮೆ ಅಂದಾದರೂ ಹೇಳುವುದಕ್ಕೆ ಬರುವುದಿಲ್ಲವೋ?'

'ಎಮ್ಮೆಮ್ಮೆ ಅಂತ ಹೇಳಿ ರೂಢಿಯಿದೆ, ಸ್ವಾಮಿ!'

'ಹಾಗಾದರೆ, ತಿಂಗಳೂರಲ್ಲಿ ಇಳಿದ ಕೂಡಲೇ ನಿನ್ನದೂ ಅವನದೂ ಟಿಕೀಟನ್ನ ಬಾಗಿಲಲ್ಲಿರುವವನಿಗೆ ಕೊಟ್ಟುಬಿಡಿ. . . . ನಾನು ಕೊಟ್ಟ ಅರ್ಧ್ದಗೆರೆ ಟಿಕೀಟನ್ನ ನಿಧಾನವಾಗಿ ಯಾವುದಾದರೂ ಪೋಸ್ಟಾಫೀಸಿಗೆ ತೆಗಿದುಕೊಂಡು ಹೋಗಿ, 'ಎಮ್ಮೆಮ್ಮೆ' ಅನ್ನಿ. . . . . . ಹಣ ವಾಪಸು ಕೊಡದೆ ಹೋದರೆ, ನನ್ನನ್ನು ಕೇಳಿ.'

ತಿಂಗಳೂರು ಬಂತು. . . . 'ನಮಸ್ಕಾರ, ಸ್ವಾಮಿ!' 'ಹೋಗಿ ಬಿಟ್ಟು ಬರುತ್ತೇವೆ ಸ್ವಾಮಿ!' 'ಹುಷಾರಾಗಿ ಹೋಗಿ, ಅಪ್ಪಾ! ದೊಡ್ಡ ಪಟ್ಟಣ! ಮೋಸ ಬಹಳ. . . . ಗೌಡರೇ. . . . ಜ್ಞಾಪಕವಿರಲಿ!'

—

## ಹನ್ನೆರಡನೆಯ ಅಧ್ಯಾಯ

### ಹನುಮಂತನ ಹಾರಾಟ



ಆಡುವುದು ಕಡು ಸುಲಭವೆದ್ದು ಪ್ರೊಸೀಡುಗೈವುದೆ ಕಷ್ಟ —ಪುರುಷಸರಸ್ವತಿ

ಅಕಟಕಟ ಮಾನವನ ಬಾಳುವೆಯ ಗುರಿಯೊಂದು
ಬೇರೊಂದು ಕಾಣಿಸುತ ನಿಂತಿಹುದು ವಿಧಿಯು —ವಿನಾಯಕ

ಕಂಡ ಕಲ್ಲಿಗೆ ಕೈಯ ಮುಗಿಯುತೆ
ಇಂದು ಬಾಗುತೆ ಬೀಳ್ವುದೇನು? —ವಿ. ಸೀ.



ತಿಂಗಳೂರು ದೊಡ್ಡಪೇಟೆಯ ಒಂದು ಗಲ್ಲಿಯಲ್ಲಿದ್ದ 'ಅವಧಾನಿ ಹೋಟೆಲ್'ನಲ್ಲಿ ಹನುಮಂತ ಒಂದು ಕೋಣೆ ಗೊತ್ತುಮಾಡಿ, ಚಾಕರಿ ಷಿಕಾರಿಗೆ ಹೊರಟ.

ಹತ್ತು ಹನ್ನೆರಡು ಹೆಜ್ಜೆ ಮುಂದಿಡುವುದರೊಳಗೆ, ಹಿಂದೆ ತನ್ನ ಜೊತೆಯಲ್ಲೇ ಫೆಯಿಲಾಗುತ್ತಿದ್ದ ಎಮ್‌ಡನ್ ಶರ್ಮ ಸಿಕ್ಕಿದ. ಅಜ್ಜಿ ಸತ್ತಳು ಅಂತ ಹೇಳಿ ಆತ ಆ ದಿನ ಕೆಲಸಕ್ಕೆ ರಜ ತೆಗೆದುಕೊಂಡಿದ್ದನಂತೆ....ಆಗಲೇ ಆ ಮುದುಕಿ ಹತ್ತುಸಾರಿ ಕಾಗದದ ಮೇಲೆ ಪ್ರಾಣಬಿಟ್ಟಿದ್ದಳಂತೆ, ಎಮ್‌ಡನ್ ಹೇಳಿದ....

ತನ್ನ ಚಾಕರಿಯ ವಿಷಯವಾಗಿ ಎಮ್‌ಡನ್ ತುಂಬಾ ಹೆಮ್ಮೆಯಿಂದ ಮಾತನಾಡಿದ: ಸದಾ ಜೋಬು ತುಂಬ ಹಣ; ಬೆಳಗ್ಗಿಂದ ಸಂಜೆ ತನಕ ಮೋಟಾರು ಸವಾರಿ—ಎಂದ. ಹನುಮಂತನಿಗೆ ಬಾಯಲ್ಲಿ ನೀರೂರಿತು...

ಆದರೆ, ಶರ್ಮನನ್ನು ಒಂದು ಪ್ರಶ್ನೆ ಕೇಳಿಬಿಡೋಣವೆನ್ನಿಸಿತು. 'ಏನು! ಸಿಟಿ ಸರ್ವಿಸಿನಲ್ಲಿ ಬಸ್ಸು ಕಂಡಕ್ಟರೋ?' ಎಂದ. ಹೌದು, ಎಂದು ಶರ್ಮ ಉತ್ತರ ಕೊಟ್ಟಾಗ ಹನುಮಂತನ ನಾಲಿಗೆ ಒಣಗಿತು.

ಹನುಮಂತನನ್ನೂ ಎಳೆದುಕೊಂಡು ಹಿಂದಿನ ಆಟ-ಪಾಟಗಳನ್ನು ನೆನೆದುಕೊಳ್ಳುತ್ತಾ ಶರ್ಮ ಅಲ್ಲೇ ಸಂದಿಯಲ್ಲಿದ್ದ ಒಂದು ಬ್ರಹ್ಮಾನಂದ ಭುವನಕ್ಕೆ ಕರೆದುಕೊಂಡು ಹೋಗಿ ಉಪಚರಿಸಿದ. 'ಒಂದೊಂದು ಇಡ್ಲಿ, ಚಟ್ನಿ' ಎಂದ. ಇಡ್ಲಿಯ ಸಣ್ಣ ಆಕಾರವನ್ನು ನೋಡಿ ಹನುಮಂತನಿಗೆ ಆಶ್ಚರ್ಯವಾಯಿತು. 'ಏನಯ್ಯಾ ಇದು; ಒಂದು ತೊಲ ಹಿಟ್ಟು ಕೂಡ ಒಂದು ಇಡ್ಲಿಗೆ ಖರ್ಚು ಹಾಕುವುದಿಲ್ಲವೋ ನೀವು?' ಅಂದ. ಆಗ ಅಲ್ಲಿದ್ದ ಮಾಣಿ, 'ಅದನ್ನೂ ಕೂಡ ನೀವು ತಿನ್ನಲಾರಿರಿ!' ಎಂದು ಉತ್ತರ ಕೊಟ್ಟ. ನಿಜ, ಅವನು ಹೇಳಿದ್ದು....ಹನುಮಂತನಿಗೆ ತನ್ನ ಮುಂದಿನ ನಗರವಾಸವನ್ನು ನೆನೆದಾಗ, ಗಾಬರಿ ಆಯಿತು. ಅದೇ ಹೋಟೆಲ್‌ನಲ್ಲಿ ಬೇರೊಂದು ಮೇಜಿನ ಹತ್ತಿರ ಕುಳಿತು ಒಂದು ಡನ್‌ಲಪ್ ದೋಸೆಯನ್ನು ಚೂರು ಮಾಡಲು ಪ್ರಯತ್ನಿಸುತ್ತಿದ್ದ ಒಬ್ಬರು ಮೇಷ್ಟರನ್ನು ಶರ್ಮ ಹನುಮಂತನಿಗೆ ಪರಿಚಯ ಮಾಡಿಸಿದ. ಅವರೊಂದಿಗೆ ಕೊಂಚಹೊತ್ತು ಮಾತನಾಡುವುದರೊಳಗೆ ಅವರು ಕೆಲಸ ಮಾಡುತ್ತಿದ್ದ ಪಾಪರ್ ಪಾಳಯಂ ಸ್ಕೂಲಿಗೆ ತುರುತ್ತಾಗಿ ಒಬ್ಬರು ಮೇಷ್ಟ್ರು ಬೇಕಾಗಿದೆ ಎಂದು ಹನುಮಂತನಿಗೆ ತಿಳಿಯಿತು. 'ಹೊರಟ ಘಳಿಗೆ ಚೆನ್ನಾಗಿರುವ ಹಾಗೆ ಕಾಣುತ್ತದೆ' ಎಂದು ಹನುಮಂತ ಹಿಗ್ಗಿದ; 'ನರಿ ಮುಖ ನೋಡಿದೀಯಾ, ಲೋ, ಹನೂ' ಎಂದು ಶರ್ಮನೂ ಹೇಳಿದ.

ಹನುಮಂತ ಕಾಲುನಡಿಗೆಯಲ್ಲೇ ಪಾಪರ್ ಪಾಳಯಂ ಕಡೆ ಹೊರಟ. ಶಾಲೆ ಬಾಗಿಲಲ್ಲೇ ಅವನಂತಹ ಬಡಪಾಯಿಗಳನ್ನು ಹಿಂದಕ್ಕಟ್ಟಿಸುವುದಕ್ಕಾಗಿ 'ಕೆಲಸ ಖಾಲಿ ಇಲ್ಲ' ಎಂದು ಬರೆದು ಅಂಟಿಸಿದ್ದರು. ಹನುಮಂತ ಎದೆಗೆಡಲಿಲ್ಲ. ಅಲ್ಲೇ ಇದ್ದ ಜವಾನನಿಗೆ ಆರು ಕಾಸು ಬಕ್ಷೀಷ್ ಕೊಟ್ಟು, 'ಆ ಬೋರ್ಡು ನೋಡಿ ಬೆದರಬೇಕಾಗಿಲ್ಲ, ಕೆಲಸ ಖಾಲಿ ಇದೆ, ಹೆಡ್ಮೇಷ್ಟರ ಮನೆ ಲಲಿತಾದ್ರಿಪುರದಲ್ಲಿದೆ, ಮೂರನೆಯ ಕ್ರಾಸಿನಲ್ಲಿ ಬಲಗಡೆ ಆರನೆಯ ಮನೆ, ಬೇವಿನಮರವಿದೆ ಬಾಗಿಲಲ್ಲಿ.' ಇತ್ಯಾದಿ ಸಮಾಚಾರಗಳನ್ನು ಪತ್ತೆ

ಹಚ್ಚಿದ. ಬುದ್ಧಿವಂತ, ಹನುಮಂತ! ....ಲಲಿತಾದ್ರಿಪುರಕ್ಕೆ ನಡೆದ.. 'ಹೆಡ್ಮೇಷ್ಟರು ಮನೆಯಲ್ಲಿರಲಿಲ್ಲ' ಆದ್ದರಿಂದ, ಅವರ ಹುಡುಗನಿಗೆ ಮೂರು ಕಾಸಿನ ಪೆಪ್ಪರ್ಮಿಂಟು ಕೊಡಬೇಕಾಗಿ ಬಂತು. ಅವನು ಮೆಲ್ಲಗೆ ಮನೆ-ಯೊಳಕ್ಕೆ ಹೋಗಿ, 'ಅಪ್ಪಾ, ಯಾರೋ ದಪ್ಪ ರುಮಾಲು, ಷರಾಯಿ, ಹ್ಯಾಟು, ಜರಿಪಂಚೆ ಎಲ್ಲಾ ಹಾಕಿಕೊಂಡು ಬಂದಿದಾರೆ; ಇನ್‌ಸ್ಪೆಕ್ಟರೋ, ಕಮಿಟಿ ಮೆಂಬರೋ, ಏನೋ?' ಎಂದು ಹೇಳಿ, ಹೆಡ್ಮೇಷ್ಟರನ್ನು ಹೊರಕ್ಕೆ ಹೊರಡಿಸದ,—ಜಾಣ ಅವರ ಕೈಗೆ ಒಂದು ಅರ್ಜಿಯನ್ನು ಬರೆದುಕೊಟ್ಟು, ಹನುಮಂತ ಹಿಂದಕ್ಕೆ ಬಂದ....ಬಿಸಿಲು; ಹಸಿವು....ಸುಸ್ತಾಗಿ ತುಳಸಿ ತೋಟದ ಪಾರ್ಕಿನಲ್ಲಿ ಕೊಂಚಹೊತ್ತು ಕುಳಿತುಕೊಂಡ.

'ಇಲ್ಲಿ ಬನ್ನಿ ಇಲ್ಲಿ..ಈ ಕಡೆ ತಣ್ಣಗೆ ಗಾಳಿ ಬೀಸುತ್ತಿದೆ..' ಎಂದು ಹನುಮಂತನನ್ನು ಯಾರೋ ಕರೆದರು. ಅಪರಿಚಿತರು ಕೂಡ ಅವನ ಮೇಲೆ ಇಷ್ಟು ಕನಿಕರ ತೋರಿಸಬೇಕಾದರೆ ಅವನ ಮುಖದಲ್ಲಿ ಏನೋ ಒಂದು ವಿಶೇಷ ಕಳೆ ಇರಬೇಕು!

ಮುದುಕರು; ಅರವತ್ತು ಅರವತ್ತೈದು ವರ್ಷಗಳ ಭೂವಾಸ ಮುಗಿದಿದೆ. ಹಣೆಯಲ್ಲಿ ಪಟ್ಟೆನಾಮ, ತೆಂಗಲೆ, ಮೇಲುಕೋಟೆ ಕೆಂಪಂಚಿನ ಪಂಚೆ, ಗುಂಡಂಚು, ಹಸುರು ಶಾಲು ಹೊದ್ದಿದಾರೆ, ಹಳೆಯ ಶಾಲು; ಮಡ್ಡಿ ನಶ್ಯಕ್ಕೆ ಸುಣ್ಣ ಬೆರೆಸಿ ಎಡದ ಅಂಗೈಯಲ್ಲಿಟ್ಟು ಬಲಗೈ ತರ್ಜನಿಯಿಂದ ತೀಡುತ್ತಿದಾರೆ....ನೋಡಿದರೆ ರಿಟೈರ್ಡ್ ಸಬ್‌ರೆಜಿಸ್ಟ್ರಾರಿರಬೇಕೆಂದು ಎಂತಹ ದಡ್ಡನೂ ಹೇಳಿಬಿಡುವನು.

'ಸ್ವಾಮಿ! ಇಲ್ಲಿಗೆ ಬನ್ನಿ! ನಿಮ್ಮನ್ನೇ..ಸ್ವಾಮಿ!'..ಹನುಮಂತ ಎದ್ದು ಅವರ ಪಕ್ಕದಲ್ಲೇ ಕುಳಿತ. ನಶ್ಯದ ಆಸೆಯಿಂದ, ಮತ್ತು, ಅವರ ಉಪಚಾರೋಕ್ತಿಯ ಬಲದಿಂದ.

'ಯಾವ ಊರು? ಏನು ಕೆಲಸ? ಮಕ್ಕಳೆಷ್ಟು? ಮದುವೆ ಆಗಿದೆಯೇ? ತಂದೆ ಹೆಸರೇನು? ಎಷ್ಟುತನಕ ಓದಿದೀರಿ?' ಇತ್ಯಾದಿ ಪ್ರಶ್ನೆಗಳು ಪುಂಖಾನುಪುಂಖವಾಗಿ ಬಂದುವು. ಹನುಮಂತ ವಿಚಿತ್ರದುರ್ಗ ಎಂದು ಹೇಳಲಿಲ್ಲ; ಚಿತ್ರದುರ್ಗ ಎಂದ. ಬರಿಯ ಆನಂದರಾಯರು ಎಂದ; ಬಿರುದಿನ ವಿಷಯಕ್ಕೆ ಹೋಗಲೇ ಇಲ್ಲ. ಭಾಷಿಂಗ ಬದಲಾದದ್ದನ್ನೇ ಬಲವಾಗಿ

ಭಾವಿಸಿ, ಮದುವೆ ಆಗಿಲ್ಲವೆಂದೇ ಧೈರ್ಯವಾಗಿ ಹೇಳಿದ. ಬಿ. ಎ. ಗೆ ಮೂರು ಬಾರಿ ಕೂತು ಸೋತಿದೇನೆ, ಅಂದ. ಆಗ ಅವರು, 'ನ್ಯಾಯ! ಶಾಸ್ತ್ರವೇ ಇದೆ: ಮುಟ್ಟಿದ್ದಕ್ಕೆ ಮೂರು ಸಲ ಅಂತ.' ಎಂದರು.

'ಚಾಕರಿ ಹುಡುಕುವುದಕ್ಕಾಗಿ ತಿಂಗಳೂರಿಗೆ ಬಂದಿದೇನೆ; ಬೆಳಗ್ಗಿಂದ ಅಲೆದು ಅಲೆದು ಸಾಕಾಯಿತು, ಇಲ್ಲಿ ಕೊಂಚ ವಿಶ್ರಮಿಸಿಕೊಂಡು 'ಅವಧಾನಿ ಹೋಟಲ್'ಗೆ ಹೋಗೋಣ ಅಂತಿದ್ದೆ—ನನಗೆ ಯಾರ ಶಿಪಾರ್ಸೂ ಇಲ್ಲ; ಕೇವಲ ನನ್ನ ಕಾಲಿನ ಮೇಲೆ ನಾನು ಓಡಾಡಬೇಕಾಗಿದೆ....'

'ಅರೇರೇರೇರೇ! ಹಾಗಾದರೆ ನಾನು ಸಿಕ್ಕಿದ್ದು ನಿಮ್ಮ ಪುಣ್ಯ ಅಂತ ಇಟ್ಟುಕೊಳ್ಳಿ. ನನ್ನ ಹತ್ತಿರಕ್ಕೆ ಬೆಳಗ್ಗೆಯೇ ಬರಬಹುದಾಗಿತ್ತಲ್ಲಾ.... ಬಂದಿದ್ದರೆ ಇಷ್ಟು ಹೊತ್ತಿಗೆ ಎಲ್ಲಾದರೂ ಒಂದು ಚಾಕರಿ ಗಿಟ್ಟಿಸಿ ಕೊಟ್ಟಿರುವೆ! ತಿಂಗಳೂರಲ್ಲಿ ವರದಯ್ಯಂಗಾರರಿಗೆ ಗೊತ್ತಿಲ್ಲದ ಅಧಿಕಾರಿಗಳೂ ಇಲ್ಲ, ದೊಡ್ಡಮನುಷ್ಯರೂ ಇಲ್ಲ..'ಪಚ್ಚೆ ಶಾಲು' ಅಂದರೆ ಎಲ್ಲೆಲ್ಲೂ ಪ್ರಸಿದ್ಧಿ. ಬನ್ನಿ, ಬನ್ನಿ ಅಂತ ನನ್ನನ್ನ ಗೇಟಿನಿಂದಲೇ ಎದುರುಗೊಳ್ಳುತ್ತಾರೆ, ಜನ!'

'ಈ ಊರಲ್ಲಿ ನಿಮ್ಮಂತಹವರು ಇರುತ್ತಾರೆ ಅಂತ ನಾನು ನಂಬಿರಲಿಲ್ಲ.'

'ಒಪ್ಪಿದೆ; ನೀನು ಹೇಳುವುದೇನೋ ನಿಜ. ಆದರೆ, ನೀನೇನು ಹೆದರಬೇಡ....ಎಲ್ಲಿ ಕೆಲಸ ಖಾಲಿ ಇದೆ ಅಂತ ನನಗೆ ಬಂದು ಹೇಳು, ನಾನು ಕೊಡಿಸಿಕೊಡುತ್ತೇನೆ....'

ಹನುಮಂತ ಅವರಿಗೆ ಪಾಪರ್ ಪಾಳಯಂ ಸ್ಕೂಲ್ ಸಮಾಚಾರ ಹೇಳಿದ. ರೆಯಿಲು ಸ್ಟೇಷನಿಂದ ಎರಡು ಮೈಲಿ ಆಚೆ ಇರುವ ಮೂಲೆಯಲ್ಲಿ ಸೇರಿಕೊಂಡರೆ, ವಿಚಿತ್ರದುರ್ಗದವರು ಯಾರೂ ತನ್ನನ್ನು ಪತ್ತೆ ಮಾಡುವುದಿಲ್ಲ ಎಂಬ ಭರವಸೆ ಅವನಿಗೆ.

'ಅಲ್ಲೇ? ಮತ್ತೂ ಅನುಕೂಲವೇ ಆಯಿತು. ಅದರೆದುರಿಗೆ ಆ ಕೆಂಪು ಬಂಗಲಿಯಲ್ಲಿ ಬಾಡಿಗೆಗಿದಾರಲ್ಲಾ, ದಿವಾನ್ ಬಹದ್ದೂರ್ ಸುಲೋಚನರಾಯರು, ಅವರಿಗೆ ಹೇಳಿಬಿಡುತ್ತೇನೆ..'

'ಸುಲೋಚನರಾಯರೇ ಆ ಸ್ಕೂಲ್ ಕಮಿಟಿಗೆ ಅಧ್ಯಕ್ಷರಂತೆ!'

'ನೋಡಿದೆಯಾ? ನನಗೆ ಗೊತ್ತಿಲ್ಲವೆ? ಅದಕ್ಕೋಸ್ಕರವೇ ಅವರು ಅಲ್ಲಿ ಮನೆ ಬಾಡಿಗೆಗೆ ತೆಗೆದಿರಬೇಕು, ಅಂತೀನಿ! ರಿಟೈರಾದ ಮೇಲೆ ನನ್ನಂತಹ ಮುದುಕರಿಗೆ ಯಾವುದಾದರೂ ಒಂದು ಕೆಲಸ ಇಲ್ಲದಿದ್ದರೆ ಈ ಗೂಡಿನೊಳಗೆ ಪ್ರಾಣ ನಿಲ್ಲುವುದಿಲ್ಲ..ಅಯ್ಯೋ! ಅಯ್ಯೋ! ಪಚ್ಚೆ ಶಾಲು ಅಂದರೆ ಪಾಪರ್ ಪಾಳಯುಂದಲ್ಲಿ ತುಂಬಾ ಪ್ರಖ್ಯಾತಿ..'

'ನೀವು ಹೇಳಿದರೆ ನಿಜವಾಗಿಯೂ..'

'ಅನುಮಾನವೇನು? ನನ್ನ ಮಾತು ಕೇಳದೆ ಇರೋ ದೊಡ್ಡ ಮನುಷ್ಯ ಯಾರಯ್ಯಾ ಇದಾರೆ ಈ ತಿಂಗಳೂರಲ್ಲಿ? ಕರೆದುಕೊಂಡು ಬಾ, ನೋಡೋಣ, ಅವರನ್ನ! ಅಪ್ಪಿತಪ್ಪಿ ಯಾವನಾದರೂ ಇದ್ದರೆ, ಅವನೆಂತಹ ದೊಡ್ಡ ಮನುಷ್ಯನಯ್ಯ?..'

'ಹಾಗಾದರೆ,..'

'ಹಾಗಾದರೆ . . . . ಏನು? ಅನುಮಾನವೇ ಬೇಡ ಅಂತ ಹೇಳಿದೆನಲ್ಲಾ . . . . ಚಾಕರಿ ಸಿಕ್ಕಿತು ಅಂತ ಇಟ್ಟುಕೊಂಡು ಬಿಡು ಈಗಲೇ . . ಒಂದು ವೇಳೆ ಸುಲೋಚನರಾಯರು ಊರಲ್ಲಿಲ್ಲ ಅಂತ ಇಟ್ಟುಕೊ, ಅಥವಾ ಇದ್ದರೂ, ಜ್ವರ ಅಂತ ಹಾಸಿಗೆ ಹಿಡಿದಿದ್ದರೆ, ಅಥವಾ, ನೆಟ್ಟಗೆ ಓಡಾಡುತ್ತಿದ್ದರೂ ಕೂಡ, ಇಂತಹ ಸಣ್ಣ ಚಾಕರಿ ಮಾಡಿಸಿಕೊಡುವುದಕ್ಕೆ ಕೈಯಲ್ಲಾಗುವುದಿಲ್ಲಾ ಅಂತ ಅವನು ನಾಚಿಕೆಯಿಲ್ಲದೆ ಬಾಯಿಬಿಟ್ಟು ಹೇಳಿದರೆ, ಅವನನ್ನು ಬಿಟ್ಟೇ ಬಿಡೋಣ. ರಾವುಸಾಹೇಬ್ ಮಾತೃಭೂತಂ ಇದಾನಲ್ಲಾ, ಅವನಿಗೇನು ಬಂತು ಕೇಡು!'

'ಅವರು ಯಾರು, ಸ್ವಾಮಿ, ಮಾತೃಭೂತಂ?'

'ಗೊತ್ತಿಲ್ಲವೆ? ರಾವುಸಾಹೇಬ್ ಮಾತೃಭೂತಂ ಮುದಲಿಯಾರ್! ಪರಾರಿ ಬ್ಯಾಂಕ್ ಮ್ಯಾನೇಜರ್! . . ನಾನೂ ಅವನೂ ಕೇವಲ ಲಂಗೋಟಿ ಗೆಳೆಯರು. ಹಲಸೂರು ಪ್ರೈಮರಿ ಸ್ಕೂಲಿನಲ್ಲಿ ನಾನೂ ಅವನೂ ಏ ಕ್ಲಾಸ್ ಬಿ ಕ್ಲಾಸ್ ಒಟ್ಟಿಗೆ ಓದಿದೆವು. 'ಮೂರ ಮೂರಲ-ಎಷ್ಟೋ, ಭೂತಂ?' ಅಂತ ಮೇಷ್ಟರು ಕೇಳಿದರೆ, 'ಆರು' ಅನ್ನುವನು. ಮೇಷ್ಟರು ಭೂತಸ್ಯ ದೊಣ್ಣೆ ಔಷಧಂ ಎಂದು ಹೇಳುತ್ತಾ ಅವನ ಚರ್ಮವನ್ನು ಸುಲಿದು ಹಾಕುತ್ತಿದ್ದರು. ಅನೇಕ ವೇಳೆ ನಾನು ಅವನ ಕಿವಿಯಲ್ಲಿ ಸರಿಯಾದ ಉತ್ತರ

ಹೇಳಿ ಹೊಡೆತ ತಪ್ಪಿಸಿದ್ದೇನೆ . . . . . . ಈಗ ಅವನು ದೊಡ್ಡ ಬ್ಯಾಂಕಿಗೆ ಮ್ಯಾನೇಜರ್; ಮಹಡಿ ಮನೆ; ಮೂರು ಮೋಟಾರು; ಮನೆತುಂಬ ಮಕ್ಕಳು; ಅಂಗಡಿ ತುಂಬ ಸಾಲ! ಯಾರಿಗೂ ಹೇಳಬೇಡಿ . . . ನೀನೇನೂ ಯೋಚನೆ ಮಾಡಬೇಡ. ನಾನು ಮಾಡಿಸಿಕೊಡುತ್ತೇನೆ . . . .'

'ಎಲ್ಲವೂ ತಮ್ಮ ಆಶೀರ್ವಾದ . . . .'

'ಅಲ್ಲಯ್ಯಾ! ಈ ದರಿದ್ರ ಕೆಲಸಗಳೆಲ್ಲಾ ನಿನಗೆ ಯಾಕೆ? ಕುರಿ ಕಾಯುವುದೊಂದು, ಹಣ ಕಾಯುವುದಿನ್ನೊಂದು—ಎರಡೂ ಬೇಡ. ಸ್ವಸ್ಥ ವಾಗಿ ಸರ್ಕಾರಿ ಚಾಕರಿಗೆ ಸೇರಿಬಿಡು . . . . ಸರ್ ಪಿ. ರಾಮಲಿಂಗಂರವರ ಕಿವಿಯಲ್ಲಿ ನಿನ್ನ ವಿಷಯ ಒಂದು ಮಾತು ಬಿದ್ದರಾಯಿತು, ೩೫ ರೂಪಾಯಿ ಗೇನೂ ಮೋಸವಿಲ್ಲ. ನಾನೂ ಅವರೂ ಬಹಳ ಬಹಳ. ನಾನು ಸಬ್ ರೆಜಿಸ್ಟ್ರಾರಾಗಿದ್ದಾಗ, ದಿನವೂ ತಪ್ಪದೆ ೧೩ ವರ್ಷ, ನನ್ನ ಆಫೀಸಿನ ಮುಂದಿನ ರಸ್ತೆಯಲ್ಲೇ ಅವರು ವಾಕಿಂಗ್ ಹೋಗುವರು! ಈಗಲೂ ಕೂಡ ಅವರ ಸೋದರಳಿಯನ ಮಗನೂ ನನ್ನ ಸೋದರಳಿಯನ ಮಗನೂ ಒಂದೇ ಸ್ಕೂಲು, ಒಂದೇ ತರಗತಿ, ಒಂದೇ ಬೆಂಚು! . . . ಸ್ನೇಹ ಅಂದರೆ ಅದು!'

'ತಾವು ಅಷ್ಟುಮಟ್ಟಿಗೆ ನನಗೋಸ್ಕರ . . . . . ; ನನ್ನನ್ನು ತಮ್ಮ ಮಗನಂತೆ ಭಾವಿಸಿ . . . .'

'ನೋಡಿಲ್ಲಿ. ಒಂದು ಸಲ ಮಾತು ಕೊಟ್ಟ ಮೇಲೆ ನೀನು ಹೀಗೆಲ್ಲಾ ಮುಖಸ್ತುತಿ ಮಾಡಿದರೆ, ನನಗೆ ರೇಗುತ್ತದೆ. ಪದೇಪದೇ ನನ್ನನ್ನ ಪೀಡಿಸ ಬಾರದು. ನಿನ್ನ ವಿಳಾಸ, ವಯಸ್ಸು, ಕುಲ, ಗೋತ್ರ, ಡಿಗ್ರಿ-ಪಗ್ರಿ, ಎಲ್ಲಾನೂ ಈ ಚೀಟಿಯಲ್ಲಿ ಬರೆದುಕೊಡು; ಈಗಲೇ ಇಲ್ಲಿಂದ ಹೊರಟು, ಮೊದಲು ರಾಮಲಿಂಗಂ ಹತ್ತಿರ ಹೋಗುತ್ತೇನೆ. . . .' ಏನಯ್ಯಾ, ನಮ್ಮ ಹುಡುಗ ಒಬ್ಬ ಇದಾನೆ; ಸುಟಿಯಾಗಿದಾನೆ; ಏನು ಕೆಲಸ ಬೇಕಾದರೂ ಮಾಡಬಲ್ಲ.' ಅಂತೀನಿ. . . .' ನಾಸ್ತಿ ' ಅಂದನೇ, ಅಲ್ಲಿಂದ ಗಾಡಿಬಿಡುತ್ತೇನೆ. . . . ಊಟ ಕೂಡ ಮಾಡುವುದಿಲ್ಲ. . ಮಾತೃಭೂತಂನ್ನ ಬ್ಯಾಂಕಲ್ಲೇ ಹಿಡಿಯುತ್ತೇನೆ. . ಅವನೂ ಇಲ್ಲ ಅಂದನೇ, ಹಾಗಾಗಿ ಹೋಗು, ಅಂತ ಸುಲೋಚನರಾಯನ ಮೇಲೆ ಕುಳಿತೇಬಿಡುತ್ತೇನೆ. . . . . . ಅವನು ನಿನಗೆ ಕೆಲಸ ಕೊಡುತ್ತೇನೆ ಅನ್ನುವ ತನಕ ಏಳುವುದೇ ಇಲ್ಲ. . ಇನ್ನೇನಯ್ಯಾ ಮುದುಕರಾಗಿ ಹೋದ

ಮೇಲೆ ನಿಮ್ಮಂತಹ ವರ್ಧಿಷ್ಣುಗಳನ್ನು ಮುಂದಕ್ಕೆ ತರುವುದೇ ನಮ್ಮಗಳ ಕೆಲಸ......ಇದರಲ್ಲಿ ನಾಚಿಕೆ ಏನು? ನನ್ನ ಮಗನಿಗಾಗಿ ನಾನು ಹಲ್ಲು ಕಿರಿಯುತ್ತಿಲ್ಲವಲ್ಲಾ....'

ಆಗ ಒಬ್ಬ 'ಬಾದಾಮಿ ಮಾವಿನ ಹಣ್ಣು' ಎಂದು ಕೂಗಿಕೊಂಡೇ ಅವರಿಬ್ಬರೂ ಕುಳಿತಿದ್ದ ಬೆಂಚಿನ ಸಮೀಪಕ್ಕೆ ಬಂದ. ಅವನನ್ನು ಅಯ್ಯಂಗಾರರು ಕರೆದರು. ಡಜನ್ನಿಗೆ ಎಂಟಾಣೆಯಂತೆ ಬೆಲೆ ತೀರ್ಮಾನಿಸಿ, ಎರಡು ಡಜನ್ ಹಣ್ಣುಗಳು ಮೇಲೊಂದು ಹಣ್ಣು ಕೊಸರು ಒಟ್ಟು ೨೫ನ್ನು ಕೊಂಡುಕೊಂಡು, ಪಚ್ಚೆಶಾಲಿನಲ್ಲಿ ಸುತ್ತಿ ಕಟ್ಟಿದರು. ರೂಪಾಯಿಗಾಗಿ ಸೊಂಟದ ಸುತ್ತಲೂ ಹುಡುಕಿದರು....ಇಲ್ಲ!

ಪೆಚ್ಚಾದರು......ಹಣ್ಣುಗಳೆಲ್ಲವನ್ನೂ ಹಿಂದಕ್ಕೆ ಕೊಡೋಣವೇ ಎಂದು ಯೋಚಿಸಿದರು......ಕಡೆಗೆ, ಏನಯ್ಯಾ! ನಿನ್ನ ಹತ್ತಿರವಿದ್ದರೆ ಕೊಟ್ಟಿರು! ನಾಳೆ ಇಷ್ಟು ಹೊತ್ತಿನಲ್ಲಿ ನಾನು ಇಲ್ಲಿಗೆ ಬಂದು ಹೇಗಿದ್ದರೂ ನಿನಗೆ ಚಾಕರಿ ವಿಷಯ ತಿಳಿಸಬೇಕಲ್ಲಾ!......ಮನೆಯಿಂದ ಬಂದಾಗ ರೂಪಾಯಿ ತಂದಿದ್ದೆ ಎಂಬ ಜ್ಞಾಪಕದ ಮೇಲೆ ಹಾಳು ಹಣ್ಣನ್ನು ತೆಗೆದು-ಕೊಂಡೆ....ಎಂದರು. ಹನುಮಂತ ಉದಾರಶಿರೋಮಣಿಗಳ ಮಗ, ಪಚ್ಚೆಶಾಲಿನ ಕೈಯಲ್ಲಿ ಒಂದು ರೂಪಾಯಿ ಇಟ್ಟ....

ಹೊಟಲ್ ಬಾಗಿಲಲ್ಲೇ, ಕುಂಟಾವಧಾನಿಗಳು, 'ಏನು ಸಾರ್, ಕೆಲಸ ಸಿಕ್ಕಿರುವ ಹಾಗೆ ಕಾಣುತ್ತದಲ್ಲಾ, ನಿಮ್ಮನ್ನು ನೋಡಿದರೆ?' ಎಂದು ಕೇಳಿದರು.

'ಇನ್ನೂ ಇಲ್ಲ! ನಾಳೆ ಗೊತ್ತಾಗುತ್ತದೆ'

'ಎಲ್ಲಿ?'

'ಎಲ್ಲೋ, ಅಂತೂ ನಾಳೆ ತಿಳಿಯುತ್ತದೆ; ಪಚ್ಚೆಶಾಲು ಅಂತ ಒಬ್ಬರು ಅಯ್ಯಂಗಾರರು....'

'ಓಹೋ, ಅವರು ಸಿಕ್ಕಿದ್ದರೆ? ನಿಮ್ಮ ಅದೃಷ್ಟ ಚೆನ್ನಾಗಿದೆ ಹಾಗಾದರೆ....ಎಷ್ಟು ಸುಲಿದುಕೊಂಡರು? ನಿಮ್ಮಿಂದ?'

'ಸುಲಿಗೆಯೇನೂ ಇಲ್ಲ....ಒಂದು ರೂಪಾಯಿ ಸಾಲ ತೆಗೆದು-

ಕೊಂಡು ಹೋಗಿದಾರೆ, ಪಾಪ, ಯಾರು ಯಾರೋ ದೊಡ್ಡ ಮನುಷ್ಯರನ್ನ ನೋಡಿಕೊಂಡು ನಾಳೆ ಬಂದು ಹೇಳುತ್ತೇನೆ ಅಂತ ಹೇಳಿದಾರೆ. '

'ಚಿಂತೆ ಇಲ್ಲ; ಇವತ್ತು ದಿನ ಚೆನ್ನಾಗಿದೆ; ಆದ್ದರಿಂದ ಬ್ರಾಹ್ಮಣರೊಬ್ಬರಿಗೆ ಒಂದು ರೂಪಾಯಿ ಕೊಟ್ಟರೆ, ಅದರಿಂದ ಏನೂ ಮೋಸವಿಲ್ಲ, ಅನ್ನಿ. . . . ನೀವು ಅವರನ್ನ ಒಂದು ಮಾತು ಕೇಳಿಬಿಡಬೇಕಾಯಿತು. . . . . ಅವರ ಮಗ ಬಿ. ಎ. ಪಾಸಾಗಿ ಮನೆಯಲ್ಲೇ ದಂಡ ಪಿಂಡ ಹೊಡೆಯುತ್ತಿದಾನಲ್ಲಾ, ಅವನಿಗೇಕೆ ಇನ್ನೂ ಐದು ವರ್ಷದಿಂದ, ಒಂದು ಚಾಕರಿ ಸಿಗಲಿಲ್ಲವಂತೆ ? '

ಹನುಮಂತ ಬೇಗಬೇಗನೆ ಮೆಟ್ಟಲು ಹತ್ತಿ ತನ್ನ ಕೋಣೆಯೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡ.

ಟಕ್ ! ಟಕ್ ! ಟಕ್ !!

ಯಾರೋ ಬಾಗಿಲನ್ನು ತಟ್ಟಿದರು ! ಸುಖವಾಗಿ ಒಂದು ಚಿಟಿಕಿ ನಶ್ಯ ಹಾಕಿಕೊಂಡು ಅರೆಗಳಿಗೆ ಅಳುವುದಕ್ಕೂ ಅವಕಾಶ ಕೊಡುವುದಿಲ್ಲ, ದೇವರು,—ಎಂದು ಶಪಿಸುತ್ತಾ ಹನುಮಂತ ಮಂಚದಿಂದಿಳಿದು ಬಾಗಿಲ ಹತ್ತಿರ ಹೋಗಿ, ಚಿಲುಕ ತೆಗೆದ. . . .

ಅಪರಿಚಿತರು ! ತೆಳ್ಳನೆಯ ದೇಹ. ಕ್ಷಯಾಸ್ಪತ್ರೆಗೆ ತೆಗೆದುಕೊಂಡು ಹೋಗುತ್ತಿದ್ದಾಗ ತಪ್ಪಿಸಿಕೊಂಡು ಬಂದ ಹಾಗಿದೆ. ಸುತ್ತಳತೆ ಸುತರಾಂ ಇಲ್ಲ. ಗಿಡ್ಡ. ಆಗಾಗ ಕೆಮ್ಮಲು ಬೇರೆ. . ಹಳೇ ಸೂಟು; ತೂತು ಬಿದ್ದ ಬೂಟ್ಸುಗಳು. ಹರಿದು ಹಂಚಾದ ಒಂದು ಬಣ್ಣದ ಬಟ್ಟೆಯನ್ನು ಕೊರಳಿಗೆ ಸುತ್ತಿದಾನೆ. ಜಿಡ್ಡು ಹಿಡಿದ ಪರಂಗಿ ಟೋಪಿ—ಹೊಸದರಲ್ಲಿ ಹದಿನಾಲ್ಕಾಣೆ ಬೆಲೆ ಇದ್ದಿರಬೇಕು. ಆದರೂ, ಅದನ್ನು ಹಾಕಿಕೊಂಡ ಕೂಡಲೇ ಪರಂಗಿಯವರಿಗಿರುವ ಪಾದಷಾಹಿ ಪಟ್ಟವೆಲ್ಲವೂ ತಲೆಯ ಮೇಲೆ ಬಿದ್ದಹಾಗಿನ ಠೀವಿ, ಬೇರೆ !

ಕೋಣೆಯೊಳಕ್ಕೆ ಬಂದಾಗಲೂ ಆತ ಪಾದಷಾಹಿ ಗುರುತನ್ನು ತೆಗೆಯಲೇ ಇಲ್ಲ. ಈ ರೀತಿಯ ವರ್ತನೆ ಪಾಶ್ಚಾತ್ಯ ವಸ್ತ್ರಶಾಸ್ತ್ರಕ್ಕೆ ತೀರ ವಿರೋಧವಾದರೂ, ಅವರಿಗೆ ಬೋಳು ತಲೆ ಇದ್ದದ್ದರಿಂದ ಹಾಗೆ ಮಾಡಿದರೋ, ಏನೋ ?

' ರಾಮರಾಮಾ! ತಾವು ಕುಳಿತುಕೊಳ್ಳಿ ಅಂದರೆ! ನನ್ನಿಂದ ತಮಗೆ ಎಳ್ಳಷ್ಟೂ ತೊಂದರೆ ಆಗಬಾರದು....ಛೆ-ಛೆ. ನಾನು ಬಾಗಿಲು ತಟ್ಟಬಾರದಾಗಿತ್ತು. ಹೊರಗಡೆ ನಿಂತು ತುಂಬಾ ಹೊತ್ತು ಅನುಮಾನಿಸಿದೆ; ತಾವು ಮುಂಗೋಪಿಯೋ, ಹಿಂಗೋಪಿಯೋ, ಸಾಧುಪ್ರಾಣಿಯೋ, ಅಂತ ಅನುಮಾನಿಸಿದೆ. ಕಡೆಗೂ ಎದೆ ಗಟ್ಟಿಮಾಡಿಕೊಂಡು ತಟ್ಟಿಯೇ ಬಿಟ್ಟೆ!...... ಛೆ. ಛೆ..ತಾವು ಕುಳಿತುಕೊಳ್ಳಿ. ಕೆಲಸ ಕಾರ್ಯಗಳು ಏನಿದ್ದರೂ ಮಾಡಿಕೊಂಡೇ ಮಾತನಾಡಿ. ಪಾಪ, ತಮ್ಮ ಕೆಲಸಗಳು ಎಷ್ಟು ಘನತರವಾದದ್ದೋ ಎಂಬುದನ್ನರಿಯದೆ ಕೇವಲ ನನ್ನ ಸ್ವಾರ್ಥವನ್ನೇ ದೊಡ್ಡದಾಗಿ......'

' ಇಲ್ಲ, ಇಲ್ಲ,....ನಾನು ಸುಮ್ಮನೆ....'

' ರಾಮರಾಮಾ! ತಾವು ಹಾಗೆ ಅನ್ನಬೇಕಾದದ್ದೇ..ದೊಡ್ಡ ಮನೆತನ....ದೊಡ್ಡ ಗುಣ....ನಮ್ರತೆ, ವಿನಯ, ಮರ್ಯಾದೆ, ಇವೆಲ್ಲಾ ತಮ್ಮಿಂದ ನಾವು ಕಲಿತುಕೊಳ್ಳಬೇಕಾದದ್ದೇ..ತುಂಬಿದ ಕೊಡ! ಕ್ಷಮಿಸಬೇಕು....ನಾನು ಬಾಗಿಲು ತಟ್ಟಬಾರದಾಗಿತ್ತು....'

' ಚೆನ್ನಾಗಿದೆ ನೀವು ಹೇಳುವುದು. ಬಾಗಿಲು ತಟ್ಟಿ ಅದನ್ನು ತೆಗೆಸಿದ ಮೇಲೆ ತಾನೆ ಒಳಗೆ ಬರಬೇಕಾದದ್ದು. ಮತ್ತೆ ಕಿಟಿಕಿ ಕಂಬಿ ಕಿತ್ತು ಒಳಗೆ ನುಗ್ಗಬೇಕಾಯಿತೇನು ನೀವು?....ಬಾಗಿಲಿಂದ ಬಂದದ್ದೇ ಸರಿ!'

' ರಾಮರಾಮಾ! ತಾವು ನಕಲಿ ಮಾಡಬೇಡಿ...ಹಹ್ಹಹ್ಹ... ಹಿ...ಹ್ಹಿ...ಹ್ಹಿ...ಬಹಳ ಚೆನ್ನಾಗಿ ಹೇಳಿದಿರಿ..ಕಿಟಿಕಿ ಕಂಬಿ ಕಿತ್ತು! ...ಹಹ್ಹ...ಹಿ...ಹ್ಹಿ...ಒಳ್ಳೆ ತಮಾಷೆ ಮಾಡುತ್ತಾ ಇದೀರಿ..'

' ಆದಿರಲಿ ನೀವು ಈಗ ಬಂದದ್ದೇನು?...'

' ರಾಮರಾಮಾ! ಅದಕ್ಕೇ ನಾನು ತಮ್ಮ ಕ್ಷಮೆ ಬೇಡುತ್ತಾ ಇದೇನೆ. ನಾನು ಬರಲೇಬಾರದಾಗಿತ್ತು. ಅಂತಹ ತಲೆ ಹೋಗುವ ಕೆಲಸ ಯಾವುದೂ ಇಲ್ಲದಿದ್ದರೂ, ಸುಮ್ಮನೆ ನಿಮಗೆ ತೊಂದರೆ ಕೊಟ್ಟೆನಲ್ಲಾ ಎಂಬುದೇ ನನಗೆ ವ್ಯಥೆ—ಮನಸ್ತಾಪ....ಏನೂ ಇಲ್ಲ, ಸುಮ್ಮನೆ ಬಂದೆ! ಬರಬಾರದೇನು? ತಮ್ಮನ್ನ ಪರಿಚಯ ಮಾಡಿಕೊಂಡು ಹೋಗೋಣ ಅಂತ.... ನಾನೂ ಇದೇ ಅವಧಾನಿ ಹೋಟಲ್‌ನಲ್ಲಿ ಮೂರು ತಿಂಗಳಿಂದ ವಾಸ....... ಪಕ್ಕದ ಕೋಣೆ! ತಮ್ಮನ್ನ ಒಂದ ಸಲ ಪರಿಚಯ ಮಾಡಿಕೊಂಡು ಬಿಟ್ಟರೆ

ಆ ಮೇಲೆ ನಾನು ಬಿಡುವುದೇ ಇಲ್ಲ, ಅನ್ನಿ........ಜಿಗಣೆ ಅಂತ ನನ್ನ ಅಡ್ಡ ಹೆಸರು, ನೋಡಿಕೊಳ್ಳಿ! ಪದೇ ಪದೇ ಬಂದು ತಮ್ಮನ್ನು ಮಾತಿಗೆಳೆಯುತ್ತಾ ಇರುತ್ತೇನೆ....ತಮ್ಮ ಭೋಜನವಾಯಿತೋ?....ಇನ್ನೂ ಇಲ್ಲ ಅಂತ ಕಾಣು ತ್ತಿದೆ?........'

'ಆಯಿತು. ಆಯಿತು...'

'ಏಕೆಂದರೆ, ಹಸಿದ ಹಾರವನನ್ನು ಕೆಣಕಬೇಡ ಅಂತ ಹಿರಿಯರು ಹೇಳುತ್ತಾರೆ; ರೇಗಬೇಡಿ. ತಾವು ತಮಾಷೆ ಮಾಡಿದಿರಿ; ನಾನೂ ಮಾಡುತ್ತಾ ಇದೇನೆ ಅಷ್ಟೆ! ಇದೇನು ಹೀಗೆ ಆಡುತ್ತಾನೆ ಅಂತ ನೊಂದುಕೊಳ್ಳಬೇಡಿ! ಹ...ಹ್ಹ....ಹ್ಹ....'

ಅವರನ್ನು ನೋಡುತ್ತಾ ನೋಡುತ್ತಾ, ಹನುಮಂತನ ಮನಸ್ಸಿನಲ್ಲಿ ವಿಧವಿಧವಾದ ಯೋಚನೆಗಳು ಮೂಡಿದುವು : 'ಮೂರು ತಿಂಗಳ ವರೆಗೆ ನಾನೂ ಈ ಹೋಟಲ್‌ನಲ್ಲಿ ಊಟ ಮಾಡಿದರೆ ಈತನ ಹಾಗೆ ನನಗೂ ಕ್ಷಯ ಬರುತ್ತದೋ ಏನೋ? ಚಾಕರಿ ಸಿಕ್ಕಿದ ತಕ್ಷಣ ಬೇರೆ ಹೋಟಲಿಗೆ ಹೊರಟು ಬಿಡಬೇಕು; ಎರಡೋ ಮೂರೋ ಹೆಚ್ಚಾಗಿ ಕೊಟ್ಟರೂ ಚಿಂತೆ ಇಲ್ಲ........ ಈಗ ನಾನು ಡಬ್ಬಿ ತೆಗೆದು ನಶ್ಯ ಹಾಕಿಕೊಂಡರೆ, ಈತನ ದೃಷ್ಟಿಯಲ್ಲಿ ನನ್ನ ಗೌರವ ಕಡಿಮೆಯಾಗುತ್ತದೆಯೇ? ಈತ ನಶ್ಯ ಹಾಕುವುದಿಲ್ಲ; ಸಿಗರೇಟು ಕುಡಿಯುವುದಿಲ್ಲ....ಎಲ್ಲಿಂದ ಬರಬೇಕು....ಅಹನ್ಯ ಹನಿ ಕಾಲಕ್ಷೇಪ ಇದ್ದ ಹಾಗೆ ಕಾಣುತ್ತದೆ........ಅಂತು ಆ ಹಾಳು ಟೋಪಿಯನ್ನ ತೆಗಿಯುವುದಿಲ್ಲ ವಲ್ಲಾ ಮಹರಾಯ....ಅಂತಹ ಅಸಹ್ಯ ಪದಾರ್ಥ ಏನಿದೆ ತಲೆಯ ಮೇಲೆ, ಈ ಟೋಪಿಗಿಂತ ಅಸಹ್ಯವಾದದ್ದು?........'

'ರಾಮರಾಮಾ! ನಾನು ಹೇಳುತ್ತಾ ಇರುವುದನ್ನ ಕೊಂಚ ಕಿವಿಗೆ ಹಾಕಿಕೊಳ್ಳಬಾರದೆ? ಬೆಳಗ್ಗೆ ತಮ್ಮನ್ನ ಒಂದು ಬಾರಿ ನೋಡಿದೆ. ತಮ್ಮ ಠೀವಿ, ತಮ್ಮ ಠೇಂಕಾರ, ತಮ್ಮ ಆ ಠಾಕ್ಕೋ-ಠಾಕ್ಕು ಎಲ್ಲಾನೂ ನೋಡಿದೆ........ಓಹೋ....ಯಾರೋ ಅಜಾತಶತ್ರುಗಳಿರಬೇಕು, ಯಾರೋ ಆಗರ್ಭಶ್ರೀಮಂತರಿರಬೇಕು ಅಂತ ಮನಸ್ಸಿನಲ್ಲಿ ನಿರ್ಧರಿಸಿದೆ....ಸರಿ....ಮನು ಷ್ಯತ್ವಂ ಮುಮುಕ್ಷುತ್ವಂ ಮಹಾಪುರುಷ ಸಂಶ್ರಯಃ ಅಂತಾರಲ್ಲಾ, ಆ ಪೈಕಿ ಮೂರನೆಯದಕ್ಕಾಗಿಯೇ ಬಾಗಿಲು ತಟ್ಟಿದೆ........'

'ಆದು ಸರಿ! ಈಗ ಇನ್ನೇನೂ ವಿಶೇಷವಿಲ್ಲವಲ್ಲಾ?' ಎಂದು ಕೇಳುತ್ತಾ ಹನುಮಂತ ಮಂಚದಿಂದಿಳಿದ....

'ರಾಮರಾಮಾ! ಭೋಜನವಾದ ಮೇಲೆ ಹಾಗೆಯೇ ಕೊಂಚ ಒರಗಿಕೊಳ್ಳುವ ಅಭ್ಯಾಸವಿದ್ದರೆ, ಒರಗೋಣವಾಗಲಿ! ನನ್ನಿಂದ ಅಡಚಣೆಯಾಗಬಾರದು. ತಾವು ಮಲಗಿಕೊಂಡೇ ಮಾತನಾಡಬಹುದಲ್ಲಾ?....ಲೋಕಾಭಿರಾಮವಾಗಿ ಯಾವುದಾದರೂ ಮಾತು ತೆಗೆಯೋಣ........ವಿಷ್ಣುದೇವರು ಕೂಡ ಮಲಗಿಕೊಂಡೇ ಮೂರು ಲೋಕಗಳನ್ನೂ ನಡೆಸುತ್ತಿಲ್ಲವೇ?........'

'ಎಲ್ಲಿಂದೆಲ್ಲಿಗೆ?. .ಚೆನ್ನಾಗಿದೆ ನಿಮ್ಮ ಮಾತು!....'

'ರಾಮರಾಮಾ! ತಾವು ಮಲಗಿಬಿಡಿ ಅಂದರೆ........ತಮ್ಮಂತಹ ಶ್ರೀಮಂತರಿಗೆ ಮಧ್ಯಾಹ್ನ ಮಲಗದೆ ಇದ್ದರೆ ಲವಲವಿಕೆಯೇ ಇರುವುದಿಲ್ಲ.... ನನಗೆ ಗೊತ್ತಿಲ್ಲವೆ?....ಕಳೇಬರಕ್ಕೆ ಕೊಂಚ ವಿರಾಮ, ವಿಶ್ರಾಂತಿ ಕೊಡಿ....'

ವಿಧಿ ಇಲ್ಲ. ಹನುಮಂತ ಮಲಗಲೇಬೇಕಾಯಿತು.. .ಐದು ನಿಮಿಷಗಳ ತನಕ ಆಗಂತುಕ ಮಾತನಾಡಲಿಲ್ಲ; ಆರೇಳು ಸಲ ಕೆಮ್ಮಿದ, ಅಷ್ಟೆ....ಹನುಮಂತನೂ ಕೂಡ ಮಲಗಿದ್ದಾಗಲೇ ಗೋಡೆ ಪಕ್ಕಕ್ಕೆ ತಿರುಗಿಕೊಂಡು ಅರ್ಧ ಚಿಟಿಕಿ ನಶ್ಯವನ್ನು ಉಪಾಯದಲ್ಲಿ ಮೂಗಿಗೇರಿಸಿದ.......ಪಕ್ಕದ ಕೋಣೆಯವರು ಎಡಗಾಲನ್ನು ನೆಲದ ಮೇಲೆ ಊರಿ ಬಲಗಾಲನ್ನು ಮಡಿಸಿ ಅದರ ಮೇಲಿರಿಸಿಗರು; ಗಂಟಲು ಸರಿಪಡಿಸಿಕೊಂಡರು; ಆಮೇಲೆ ಮೆಲ್ಲಗೆ ಬಲಗಾಲನ್ನು ನೆಲದ ಮೇಲೆ ಊರಿ ಎಡಗಾಲನ್ನು ಮಡಿಸಿ ಅದರ ಮೇಲಿರಿಸಿದರು. ಕೈಗಳೆರಡನ್ನೂ ಹಿಸುಕಿದರು; ಕೆಮ್ಮಿದರು.

'ಸ್ವಾಮಿ! ತಮ್ಮನ್ನ....ಒಂದು ಮಾತು ಕೇಳಬೇಕು ಅಂತ . ಅಷ್ಟು ಹೊತ್ತಿನಿಂದ ... '

ಹನುಮಂತನಿಗೆ ಅರ್ಥವಾಯಿತು. ಯಾವುದೋ ಒಂದು ಸಂಸ್ಥೆಗೋ, ಸ್ಮಾರಕನಿಧಿಗೋ, ಸಂಘಕ್ಕೊ, ಗ್ರಂಥಮಾಲೆಗೋ, ಉತ್ಸವಕ್ಕೊ, ಚಂದ!...: ಹಣ• •ಹಣ....ಹಣ....

. 'ಬಹಳ ದಿವಸದಿಂದ ನನ್ನ ಮನಸ್ಸನ್ನು ಪೀಡಿಸುತ್ತಾ ಇದೆ ಒಂದು ಪ್ರಶ್ನೆ!'

ಹನುಮಂತ ಎದ್ದು ಕುಳಿತ. ವಿಷಯ ಅಷ್ಟೇನೂ ಆಭಾಸವಾಗಿ ಕಾಣಿಸಲಿಲ್ಲ. ಮುಂದಕ್ಕೆ ಕೇಳೋಣವೆನಿಸಿತು.

' ಯಾರು ಯಾರನ್ನೋ ಕೇಳಿದೆ; ಒಬ್ಬರೂ ಸಮಂಜಸವಾದ ಉತ್ತರ ಹೇಳಲಿಲ್ಲ....'

' ಅದಕ್ಕೇನು ? ಕೇಳಿ ...ನನಗೆ ತೋಚಿದ್ದನ್ನ ನಾನೂ ಹೇಳುತ್ತೇನೆ.. ನಾನೇನು ಅಂತಹ ಅನುಭವಸ್ಥ ಏನೂ ಅಲ್ಲ. .ದೊಡ್ಡ ಮೇಧಾವಿ ಅಲ್ಲ....'

' ರಾಮರಾಮಾ ! ಅಂತಹ ಕೊಳ್ಳೆ ಹೋಗುವ ಪ್ರಮೇಯವೇನೂ ಇಲ್ಲ...ತಮ್ಮನ್ನ ಪರೀಕ್ಷಿಸುತ್ತಾ ಇದೇನೆ; ಒರೆ ಹಚ್ಚಿ ನೋಡುತ್ತಿದೇನೆ; ಪುಟಕ್ಕೆ ಹಾಕುತ್ತಿದೇನೆ. .ಅಂತ ಅಪಾರ್ಥ ಮಾಡಿಕೊಳ್ಳಬೇಡಿ........ತಾವು ಮಲಗಿಕೊಂಡೇ ಉತ್ತರ ಹೇಳಬಹುದು...ಮಲಗಿ, ಅಂದರೆ !....ಇನ್ನೇನೂ ಇಲ್ಲ. . . . ಈ. . . . ಈ. . . .ವಿಮೆ ಅಂತಾರಲ್ಲಾ, ವಿಮೆ ಅಂತ. . ಇನ್ ಷೂರನ್ ಸು. . ಇದನ್ನು ಮಾಡಿಕೊಳ್ಳುವುದು ಒಳ್ಳೆಯದೋ ಕೆಟ್ಟದ್ದೋ, ಅದರಲ್ಲಿ ಮೋಸ-ಗೀಸ ಏನಾದರೂ ಇದೆಯೋ, ಅಂತ. . . .'

' ವಿಮೆ ಬಹಳ ಒಳ್ಳೆಯದು, ಅನುಮಾನವೇನು ? ಅದರ ತತ್ವ ಇಷ್ಟೆ. ಹೆಚ್ಚು ವರ್ಷ ಬದುಕುವವರು ಅಲ್ಪಾಯುಸ್ಸಿನವರ ಕುಟುಂಬಗಳಿಗೆ ಸಹಾಯಮಾಡುತ್ತಾರೆ....ಬೇಗ ಸತ್ತರೆ, ಅವರವರ ಮನೆಯವರಿಗನುಕೂಲ, ನಿಧಾನವಾಗಿ ಸತ್ತರೆ ಅವರಿವರ ಮನೆಯವರಿಗನುಕೂಲ, ಅಷ್ಟೆ ! '

'ಬಹಳ ಚೆನ್ನಾಗಿ ಹೇಳಿದಿರಿ ! ಬಹಳ ಚೆನ್ನಾಗಿ ಹೇಳಿದಿರಿ ! ' ಎಂದು ಆಗಂತುಕರು ಎದ್ದುಹೋಗಿ ಮಲಗಿದ್ದ ಹನುಮಂತನ ಕೈಹಿಡಿದು ಕುಲುಕಿದರು ! ಆಮೇಲೆ ಸ್ವಸ್ಥಾನದಲ್ಲೇ ಹೋಗಿ ಕುಳಿತು ಹನುಮಂತನನ್ನೇ ತುಂಬಾ ಹೊತ್ತು ದುರುದುರನೆ ನೋಡುತ್ತಾ, ' ರಾಮರಾಮಾ ! ಅದೆಂತಹ ಬುದ್ಧಿ ತಮ್ಮದು ! ತಮ್ಮ ಬುರುಡೆಯನ್ನ ಸುಮ್ಮನೆ ಸುಟ್ಟು ಬೂದಿ ಮಾಡಬಾರದು, ಲಂಡನ್ನಿನಲ್ಲಿ ಯಾವುದೋ ಒಂದು ಜಾಗ ಇದೆಯಂತೆ, ಬುದ್ಧಿವಂತರ ಮೆದುಳುಗಳನ್ನೆಲ್ಲಾ ಅಲ್ಲಿ ಸೀಸೆಗಳಲ್ಲಿ ತುಂಬಿಡುತ್ತಾರಂತೆ, ಅಲ್ಲಿಗೆ ಕಳುಹಿಸಿ ಕೊಡಿ. . ಎಲ್ಲಿ....ಮತ್ತೊಂದು ಸಲ ಅಪ್ಪಣೆಯಾಗಲಿ........ಬೇಗ ಸತ್ತರೆ ಅವರವರ ಮನೆಯವರಿಗನುಕೂಲ. . ಆಮೇಲೆ. .'

' ನಿಧಾನವಾಗಿ ಪ್ರಾಣ ಬಿಟ್ಟರೆ, ಅವರಿವರ ಮನೆಯವರಿಗನುಕೂಲ..'

ಹನುಮಂತನಿಗೆ ಕೊಂಚ ಅನುಮಾನವಾಯಿತು; ಅನುಮಾನ ಬಲವಾಯಿತು; ಯಾರು ಯಾರೋ ಹೇಳಿದ್ದದ್ದೆಲ್ಲಾ ಜ್ಞಾಪಕಕ್ಕೆ ಬಂತು; ಹೆದ

ರಿಕೆ ಹತ್ತಿತು; ಏನು ಬಂತಪ್ಪಾ, ಗ್ರಹಚಾರ? ಅನ್ನಿಸಿತು; ಕೇಳೇ ಬಿಡೋಣ ಅಂತ ಅವನು ತೀರ್ಮಾನಿಸಿದ.

'ನೀವು ಇನ್‌ಷೂರನ್ಸ್ ಕಂಪನಿ ಏಜಂಟರೋ?'

'ಹಾಗಲ್ಲ..ಹಾಗಲ್ಲ. ಅದರಿಂದಲ್ಲ ನಾನು ಕೇಳಿದ್ದು..ಅಂದರೆ, ನಾನು ಏಜಂಟರು ಅಂತ ಅಲ್ಲ..ಅಲ್ಲ ಅಂತಲೂ ಇಲ್ಲ..ಯಾರಾದರೂ ತಮ್ಮಂತಹ-ವರು ತೀರ ಹತ್ತಿರದ ಸ್ನೇಹಿತರು ಸಿಕ್ಕಿದ್ದರೆ, ನಮ್ಮ 'ಯಮಾಲಯ ವಿಮೆ ಕಂಪನಿಯ'ಯ ಪ್ರಸ್ತಾಪ ಮಾಡುತ್ತೇನೆ....ಅಲ್ಪ ಸ್ವಲ್ಪ..ಕಡೆಯ ಪಕ್ಷ..ಐನೂರು ರೂಪಾಯಿ....'

ಹನುಮಂತನಿಗೆ ತುಂಬಾ ಕೋಪ ಬಂತು. ಮೆಲ್ಲನೆ ಮೂಲೆಯಲ್ಲಿದ್ದ ಮುರುಕಲು ಕುರ್ಚಿಯನ್ನೆತ್ತಿದ...ಆತ ಕುಳಿತಿದ್ದ ಕಡೆಗೆ ಎಸೆಯಲು ತೆಗೆದ.. 'ಹೊರಡುತ್ತೀಯೋ, ಇಲ್ಲವೋ?' ಎಂದು ಅರಚಿದ....

ಆಸಾಮಿ .... ಓಟ !

ಹನುಮಂತ ಮಂಚದ ಮೇಲೆ ಮತ್ತೆ ಪವಡಿಸಿದ. 'ನಾನೂ ಹೀಗಾಗುತ್ತಿದ್ದೆನೇ, ಭಗವಂತಾ' ಎಂದ. ಇನ್‌ಷೂರನ್ಸ್ ಏಜಂಟೆಂದರೆ ಈ ರೀತಿಯಾದ ಪ್ರಾಣಿಗಳೆಂದು ಅವನು ಕನಸಿನಲ್ಲೂ ನೆನೆಸಿರಲಿಲ್ಲ. ಯಾವುದಾದರೂ ಸರಿಯಾದ ಚಾಕರಿ ಸಿಗದಿದ್ದರೆ, ಕಡೆಗೆ ಒಂದು ವಿಮೆ ಕಂಪನಿ ಏಜಂಟಾಗಿ, ದೊಡ್ಡದೊಂದು ಬೋರ್ಡನ್ನು ಬಾಗಿಲ ಮುಂದೆ ಹಾಕಿ, ನಾಲ್ಕು ಮನೆ ಹತ್ತಿ ಇಳಿದು, ಒಂದೆರಡು ಲಕ್ಷದಷ್ಟು ಪಾಲಿಸಿಗಳನ್ನು ಕಂಪನಿಗೆ ಸಂಪಾದಿಸಿ ಕೊಟ್ಟು, ಹಾಯಾಗಿ ಕುಳಿತು, ತಿಂದು ತೇಗೋಣವೆಂದು ಅವನು ಕನಸು ಕಂಡಿದ್ದ. ಹಾಗೆ ಮಾಡಬಹುದೆಂದು ಅವನು ಒಂದು ಪುಸ್ತಕದಲ್ಲಿ ಓದಿದ್ದ. ಈ ಹದಿನಾಲ್ಕಾಣೆ ಟೋಪಿಯವನಿಂದ ಆ ಕನಸು ಪುಡಿಪುಡಿ ಆಯಿತು.

ಮರುದಿನ ಬೆಳಗ್ಗೆ ಹತ್ತುಗಂಟೆಗೆ ಸರಿಯಾಗಿ ಹನುಮಂತ ತುಳಸಿ ತೋಟದ ಕಡೆ ಹೊರಟನು. ಕುಂಟಾವಧಾನಿಗಳು ಮುಂದಿನ ಬಾಗಿಲ ಹತ್ತಿರ ಇಲ್ಲದೆ ಇದ್ದ ಸಮಯ ಕಾದು ಅವನು ಅಲ್ಲಿಂದ ಹೊರಬಿದ್ದನು. ಹೊಸಲು ದಾಟುವಾಗ ಆತ ಕೆಟ್ಟದ್ದು ನುಡಿದರೆ ಕೆಲಸ ಹಾಳಾಗುವದಲ್ಲಾ ಎಂಬ ಭಯ ಅವನಿಗೆ. 'ಅವಧಾನಿ ಹೇಳುವಷ್ಟು ದರೋಡೆ ಇಸಂ ಇರಲಾರರು

ಅವರು. ಅವರ ಮಗ ಬಿ. ಎ. ಪಾಸುಮಾಡಿರಬಹುದು. ಆದರೆ, ಸ್ವಾರ್ಥಕ್ಕಾಗಿ ಸ್ನೇಹಿತರನ್ನು ಕಾಡುವ ಸ್ವಭಾವದವರಲ್ಲದಿರಬಹುದು. ಯಾವಾಗಲೂ ಇತರರಿಗಾಗಿ ಯಾಚಕ ಮಾಡುವಾಗಿನಷ್ಟು ಉತ್ಸಾಹ ತನಗಾಗಿ ತಿರುಪೆ ಎತ್ತುವಾಗ ಇರುವುದಿಲ್ಲ. ಅವಧಾನಿಗೆ ಕಿಲುಬು ಮನಸ್ಸು; ಅಂಗವಿಹೀನರಿಗೆ ಯಾವಾಗಲೂ ಅಷ್ಟೆ. ದೇಹ ನೆಟ್ಟಗಿದ್ದರೆ, ಮನಸ್ಸೂ ನೆಟ್ಟಗೆ. . . . . . . .ಮಾವಿನ ಹಣ್ಣಿನ ರೂಪಾಯನ್ನು ಅವರು ತಂದೇ ತರುತ್ತಾರೆ. . . . ಬ್ರಾಹ್ಮಣ. .ಶ್ರೀವೈಷ್ಣವ. .ವೃದ್ಧ. .ಸೊಗಸಾದ ಮಡ್ಡಿ ನಶ್ಯ. .ಮಹಾಮಹಾ ದೊಡ್ಡಮನುಷ್ಯರ ಸ್ನೇಹಿತ. .ಸನಾತನಿ. .ಕಾಸು ಕೊಡದೆ ಮೋಸ ಮಾಡಿದರೆ ಹೊಟ್ಟೆನೋವು, ಆಮಶಂಕೆ, ಕಾಲರಾ ಮುಂತಾದವು ಬರುತ್ತದೆ ಎಂಬ ಹೆದರಿಕೆ ಇದ್ದೇ ಇರುತ್ತದೆ. .'ಮಾಫಲೇಷು ಕದಾಚನ' ಅಂತ ಗೀತೆಯಲ್ಲೂ 'ಮಾಫಲ'ದ ವಿಷಯ ಹೇಳಿದೆ. .ಅಷ್ಟು ಸಂಸ್ಕೃತ ಅವರಿಗೆ ಬರುತ್ತದೆ ಅಂತ ಕಾಣುತ್ತದೆ. . . .' ಹೀಗೆ ಯೋಚನೆ ಮಾಡುತ್ತಾ ಹನುಮಂತ ಹೆಜ್ಜೆ ಹಾಕುತ್ತಿದ್ದ.

ಕಡೆಗೆ ದೂರದ ಕಲ್ಲು-ಬೆಂಚಿನ ಮೇಲೆ, ಹನುಮಂತ ಕುಳಿತು ಅವರ ಜೊತೆಗೆ ತಾನೂ ನಶ್ಯ ಏರಿಸಿದ ಬೆಂಚಿನ ಮೇಲೆ, ಒಂದು ಹಸುರು ಬಣ್ಣ ಕುಳಿತಿತ್ತು.

'ಛೆ! ಅನ್ಯಾಯವಾಗಿ ಆ ಮಹಾನುಭಾವರ ವಿಷಯದಲ್ಲಿ ಕೆಟ್ಟ ಆಪಾದನೆಗಳನ್ನು ಮಾಡಿದೆನಲ್ಲಾ! ಶುದ್ಧ ಪಾಪಿ, ನಾನು!' ಎಂದು ಹನುಮಂತ ಕೊರಗಿದನು. ಹತ್ತಿಪ್ಪತ್ತು ಗಜ ದೂರದಿಂದಲೇ ಗಟ್ಟಿಯಾಗಿ, 'ನಮಸ್ಕಾರ' ಅಂತ ಕೂಗಿದ. . . .ಹಸುರು ಬಣ್ಣ ಹಿಂತಿರುಗಿ ನೋಡಿತು. . . .ಯಾರೋ ಒಬ್ಬಾಕೆ, ಗಾಣಿಗಿತ್ತಿ, ಎಣ್ಣೆ ಗಡಿಗೆಯನ್ನೂ ಪಕ್ಕದಲ್ಲಿರಿಸಿಕೊಂಡು ಎಲೆ ಅಡಿಕೆ ಮೆಲ್ಲುತ್ತಿದ್ದಳು!. . . . . . . . . .

ಹನುಮಂತ ಚೇತರಿಸಿಕೊಂಡ.

ಕೊಂಚ ದೂರದಲ್ಲೇ ಒಂದು ಹಲಸಿನ ಮರದಡಿಯಲ್ಲಿ ಯಾವುದೋ ಒಂದು ದೊಡ್ಡ ಗುಂಪು ಜನ ಏನನ್ನೋ ನೋಡುತ್ತಿದ್ದರು . . ಮುಂದಾಗಿ ಬಂದ ಪಚ್ಚೆಶಾಲಿನ ಅಯ್ಯಂಗಾರರು ತನಗಾಗಿ ಕಾದು ಬೇಸರಿಕೆಯಾಗಿ, ಒಂದು ವೇಳೆ, ಅಲ್ಲಿ ತಮಾಷೆ ನೋಡುತ್ತಿರಬಹುದೋ ಏನೋ ಎಂದು

ಶಂಕಿಸಿ, ಆ ಗುಂಪನ್ನು ನಯವಿನಯಗಳಿಂದ ಭೇದಿಸಿ, ಹನುಮಂತ ಒಳ-ಸುಗ್ಗಿದನು. ಅಯ್ಯಂಗಾರರು ಅಲ್ಲಿರಲಿಲ್ಲ. ಆದರೂ, ಅವನಿಗೆ ಅಲ್ಲಿಂದ ಹೊರಬರಲು ಮನ ಬರಲಿಲ್ಲ; ಮಂದಿಯೊಳಗೊಬ್ಬನಾಗಿ ತಾನೂ ನಿಂತ.

ಆ ಮರದಡಿಯಲ್ಲಿ ಒಬ್ಬರು ಯೋಗಿಗಳು ಕುಳಿತಿದ್ದರು. ಮನ-ಮೋಹಿಸುವ ಆಕಾರ. ಒಂದು ಬಟ್ಟಲು ಹಾಲಿಗೆ ಮೂರು ತೊಟ್ಟು ಕಾಫಿ ಕಷಾಯ ಬಿದ್ದಹಾಗಿನ ಮೈಬಣ್ಣ. ಪೈಲ್‌ವಾನ್. ಮುಖದಲ್ಲಿ ವರ್ಚಸ್ಸು ತುಸು ಕಡಿಮೆ ಅಂತ ತೋರಿದರೂ, ಕಣ್ಣಿಗೆ ಹೊಳಪು ಇನ್ನೂ ಕೊಂಚ ಇರಬಹುದಾಗಿತ್ತು ಅಂತ ಅನ್ನಿಸಿದರೂ, ಒಟ್ಟಿನಲ್ಲಿ ಋಷಿ! ಸಂದೇಹವಿಲ್ಲ. ಇಂತಹ ವ್ಯಕ್ತಿಗಳನ್ನು ಕಂಡರೆ ಹನುಮಂತನಿಗೆ ಮೊದಲಿಂದಲೂ ಒಂದು ಬಗೆಯ ಶಂಕೆ. ಏಕೆಂದರೆ ನಿಜವಾದ ಮಹಾತ್ಮರೊಬ್ಬರನ್ನು ನೋಡಿ ಅವ ರಂತೆ ಪುಕ್ಕ ತೆರೆದುಕೊಳ್ಳುವ ಖೋಟಾಗಳು ಸಾವಿರಾರು ನಮ್ಮ ದೇಶದ-ಲ್ಲಿವೆ. ತಿರಿದುಂಡು ತುಂಡಾಂಡಿಗಳಾಗಿರುವ, ಈ ಆಷಾಢಭೂತಿಗಳನ್ನೆಲ್ಲಾ ಅರಬ್ಬೀಸಮುದ್ರದಲ್ಲಿ ಮುಳುಗಿಸಬೇಕೆಂದು ಅವನು ಆಗಲೇ ಮೃತ್ಯುವಿಗೆ ಸಲಹೆ ಕೊಟ್ಟಿದ್ದನು. ಆದ್ದರಿಂದ ಅರ್ಧ ಕುತೂಹಲ, ಅರ್ಧ ಅಸಹ್ಯತೆ, ಇವುಗಳಿಂದ ಪ್ರೇರಿತನಾಗಿ ಹನುಮಂತ ಯೋಗಿಗಳೆದುರು ಕುಳಿತುಕೊಂಡ. ಅಯ್ಯಂಗಾರರು ತಡಮಾಡಿ ಬಂದರೂ ಕೂಡ ಗುಂಪನ್ನು ನೋಡಿ ಅಲ್ಲಿಗೆ ತಲೆಹಾಕುವರೆಂದೂ, ತಾನು ಕುಳಿತಿದ್ದ ಕಡೆಯಿಂದ ಅವರ ಪಚ್ಚೆಶಾಲನ್ನು ಸುಲಭದಲ್ಲಿ ಪತ್ತೆಹಚ್ಚಬಹುದೆಂದೂ ಅವನು ಯೋಚಿಸಿದ.

ಯೋಗಿಯ ಸುತ್ತಲೂ ನಿಂತಿದ್ದವರಲ್ಲಿ ಕೆಲವರು ಪ್ರಶ್ನೆ ಕೇಳುತ್ತಿದ್ದರು. ಉಳಿದವರು ಕಿವಿ ತೆರೆದು ಲಾಲಿಸುತ್ತಿದ್ದರು. ಆದರೆ ಯೋಗಿ ಮಾತ್ರ ಬಾಯಿ ಬಿಟ್ಟು ಮಾತನಾಡುತ್ತಿರಲಿಲ್ಲ. ನಮ್ಮ ಭಾರತವರ್ಷದಲ್ಲಿ ಈಗ ಬಳಕೆಯಲ್ಲಿರುವ ಮುನ್ನೂರ ಅರವತ್ತಮೂರು ಭಾಷೆಗಳನ್ನೂ ಅರ್ಥಮಾಡಿ-ಕೊಂಡು ಅವರು ಆಡಬಲ್ಲರಂತೆ. ಆದರೆ, ಪ್ರಶ್ನೆ ಯಾವ ಭಾಷೆಯಲ್ಲಿದ್ದರೂ ಉತ್ತರ ಮಾತ್ರ ಹಿಂದೂಸ್ತಾನಿಯಲ್ಲೇ ಕೊಡುವರು. ಅಂದರೆ ಅದನ್ನು ಅವರು ಬಾಯಿಯಲ್ಲಿ ಆಡುವುದಿಲ್ಲ. ನಾಲಗೆಯ ಅಭಾವದಿಂದಲ್ಲ. ಅನು-ಮಾನಿಸಬೇಡಿ. ಅಷ್ಟುಹೊತ್ತಿನಿಂದಲೂ ಅವರು ನಾಲಗೆಯನ್ನು ನೀಡಿ ಮಹಾಜನಗಳಿಗೆ ತೋರಿಸುತ್ತಾ ಇದ್ದಾರೆ. ನಾಲಗೆಯಿದ್ದರೂ ಮಾತನಾಡ

ದಿರುವುದು ಅಪರದೊಂದು ವ್ರತ, ತಪಸ್ಸು. ಹನ್ನೆರಡು ವರ್ಷಗಳಿಂದಲೂ ಈ ವ್ರತವನ್ನು ಕಾಪಾಡಿಕೊಂಡು ಬಂದಿದಾರಂತೆ. . . . ಒಮ್ಮೆ ಆರಾವಲೀ ದುರ್ಗದ ಕಾಡಿನಲ್ಲಿ ಅವರು ಒಂಟಿಯಾಗಿ ಹೋಗುತ್ತಿದ್ದಾಗ ನಡುರಾತ್ರಿ, ಅವರ ಮೇಲೆ ಒಂದು ಸಿಂಹಿ ಹಾರಿ ಕುಳಿತು ಬಲಕಿವಿಯನ್ನು ಕಚ್ಚಿ ಎಳೆದಾಗಲೂ ಕೂಡ ಯೋಗಿಗಳು, ‘ ಬಾಪ್ರೇ ಬಾಪ್ ’ ಎಂದು ಕೂಗಿಕೊಳ್ಳಲಿಲ್ಲವಂತೆ. ಅವರೇ ಹೇಳಿದರಂತೆ ಶಿಷ್ಯನಿಗೆ.

ಬಾಯಿ ಬಿಡದಿದ್ದರೂ ಭಕ್ತರೊಂದಿಗೆ ಮಾತುಕತೆ ನಡೆಸಲು ಯೋಗಿಗಳು ಒಂದು ಉಪಾಯವನ್ನು ಕಂಡುಹಿಡಿದಿದ್ದಾರೆ. ಅದೇ ಅವರಲ್ಲಿನ ಹೆಚ್ಚುಗಾರಿಕೆ. ವಿಶಾಲವಾದ ತಮ್ಮ ವಕ್ಷಸ್ಥಳದಲ್ಲಿ ದೇವನಾಗರಿ ಅಕ್ಷರಮಾಲೆಯ ವ್ಯಂಜನಗಳನ್ನೂ ಬಲಭುಜದಲ್ಲಿ ಸ್ವರಗಳನ್ನೂ, ಎಡಭುಜದಲ್ಲಿ ಒತ್ತಕ್ಷರಗಳನ್ನೂ ಹಣೆಯ ಮೇಲೆ ಒಂದರಿಂದ ಹತ್ತರ ವರೆಗಿನ ಅಂಕಿಗಳನ್ನೂ ಅವರು ಹಚ್ಚೆ ಚುಚ್ಚಿಸಿಕೊಂಡಿದ್ದರು. ಎಂತಹ ತಪಸ್ಸು !

ಯಾರಾದರೂ ಒಬ್ಬರು ಕೇಳಿದ ಪ್ರಶ್ನೆಗೆ ಯೋಗಿ, ‘ ಅಚ್ಛಾ ! ಯೇ ಸಬ್ ಹಮಾರೀ ಹೀ ಸೃಷ್ಟೀ ಹೈ ! ’ ಎಂಬ ಉತ್ತರ ಕೊಡಬೇಕು ಅಂತ ಅನ್ನಿಸಿದರೆ, ಅವರು ತಮ್ಮ ಕೈಯಲ್ಲಿದ್ದ ಬೆಳ್ಳಿಕಟ್ಟು ಹಾಕಿಸಿದ ಕಣೆಹಂದಿ ಮುಳ್ಳನ್ನು ಕ್ರಮವಾಗಿ: ಅ (ಬಲಭುಜ) ಚ (ಎದೆ) ಛ (ಎಡಭುಜ) ಆ (ಬಲಭುಜ) ಯ (ಎದೆ) ಏ (ಬಲಭುಜ) ಸ (ಎದೆ) ಬ (ಎದೆ) ಹ (ಎದೆ) ಮ (ಎದೆ) ಆ (ಬಲಭುಜ) ರ (ಎದೆ) ಈ (ಬಲಭುಜ) ಹ (ಎದೆ) ಈ (ಬಲಭುಜ) ಸ (ಎದೆ) ಋ (ಬಲಭುಜ) ಷ (ಎದೆ) ಟ (ಎಡಭುಜ) ಈ (ಬಲಭುಜ) ಹ (ಎದೆ) ಐ (ಬಲಭುಜ). . . . ಹೀಗೆ ಕ್ರಮವಾಗಿ ತೋರಿಸುತ್ತಾ ಬರುವರು ! ಅನೇಕ ವರ್ಷಗಳ ಅಭ್ಯಾಸವಿರುವುದರಿಂದ ಹಳಬರಾದ ಟೈಪಿಸ್ಟುಗಳಂತೆ ಯೋಗಿಗಳು ಸರಸರನೆ ಮುಳ್ಳೋಡಿಸುವರು. ಆದರೆ ಓದಿಕೊಳ್ಳುವವರಿಗೆ ಬಹು ಕಷ್ಟ. . . . ಅವರ ಉಪಕಾರಕ್ಕಾಗಿ ಗುರುಗಳು ಒಬ್ಬರು ಶಿಷ್ಯರನ್ನು ಸದಾ ಹತ್ತಿರದಲ್ಲೇ ನಿಲ್ಲಿಸಿಕೊಂಡಿದಾರೆ. ಆತನಿಗೆ ಎರಡಾಣೆ ಕೊಟ್ಟು ಪ್ರತಿಯೊಬ್ಬರೂ ಯೋಗಿಗಳು ತಮ್ಮ ಪ್ರಶ್ನೆಗೆ ಕೊಡುವ ಉತ್ತರಗಳನ್ನು ತಿಳಿದುಕೊಳ್ಳಬಹುದು.

ಇದೊಂದು ಬಕಸಂನ್ಯಾಸವಿರಬೇಕು. ಈ ವಿಚಿತ್ರ ವ್ರತವನ್ನು ನೋಡಿ ಮೋಸ ಹೋಗಬಾರದು. ಹೀಗೆ ಮೈಮೇಲೆಲ್ಲಾ ಚುಚ್ಚಿಕೊಂಡು ಮುಳ್ಳು

ಹಂದಿ ಮುಳ್ಳಿಗೆ ಬೆಳ್ಳಿಕಟ್ಟು ಹಾಕಿ ಎದೆ, ತೋಳು ಬಿಚ್ಚಿ ತೋರಿಸಿ ಋಷಿ ಅನ್ನಿಸಿಕೊಂಡಿರುವುದು ಬೂಟಾಟಿಕೆ ಎಂದು ಹನುಮಂತ ನಿಶ್ಚಯಿಸಿದ. ಇಷ್ಟು ಒದ್ದಾಡುವುದಕ್ಕಿಂತ ಚಪ್ಪಗೆ ಬಾಯಿ ತೆರೆದು ಮಾತನಾಡಿಬಿಡು-ವುದೇ ಮೇಲಲ್ಲವೇ ಎಂದು ಅವನಿಗೆ ತೋರಿತು. ಆದರೆ, ಅವನಿಗೆ ತೋರಿ ಏನು ಪ್ರಯೋಜನ. ಆ ಯೋಗಿಯ ಬುರುಡೆ ಒಳಗೆ ಬೆಳಕು ಬಂದರೆ ತಾನೆ, ಮೋಕ್ಷ ?

ತನ್ನೆದುರು ವಿಚಾರಮಗ್ನನಾಗಿ ಕುಳಿತಿದ್ದ ವೀರ ತರುಣನನ್ನು ಕಂಡು ಯೋಗಿಗಳು ನಾಲಗೆಯನ್ನೊಳಕ್ಕೆಳೆದು, ದೃಷ್ಟಿಯನ್ನಿಳಿಸಿ, ಮುಳ್ಳನ್ನು ಎಡ ಗೈಗೆ ಬದಲಾಯಿಸಿ, ತಮ್ಮ ದಕ್ಷಿಣ ಹಸ್ತವನ್ನು ನೀಡಿ ಹನುಮಂತನನ್ನು ತಮ್ಮ ಕಡೆಗೆ ಕೊಂಚ ಸೆಳೆದರು . . . . ಹತ್ತಿರವೇ ನಿಂತಿದ್ದ ಶಿಷ್ಯ, 'ಬನ್ನಿ, ಸ್ವಾಮಿ, ಹತ್ತಿರ' ಎಂದ. ಹೌದು. ಮಹಾತ್ಮರ ಕರುಣಾಕಟಾಕ್ಷವು ಹನುಮಂತನ ಮೇಲೂ ಬಿತ್ತು. ಹನುಮಂತನಿಗೆ ಏಕೋ ಎದೆ ನಡುಗಿತು; ಕುಳಿತಲ್ಲೇ ಕುಳಿತಿದ್ದ. . ಆದರೂ ಸುತ್ತಲೂ ನಿಂತಿದ್ದ ಜನರು, 'ಹೋಗಿ, ಸ್ವಾಮಿ! ಹತ್ತಿರಕ್ಕೆ'—'ರೊಂಬ ಪೆರಿಯವರ್ ಸಾರ್! ಪೋಂಗೊ'—'ಏನು ಮಾಡುವುದಿಲ್ಲ, ಹೆದರಬೇಡಿ'—'ನೀವು ಉದ್ಧಾರವಾದಿರಿ, ಸ್ವಾಮಿ! ಹರ ಹರಾ! ಇನ್ನು ನಿಮ್ಮ ಇಷ್ಟಾರ್ಥ ಕೈಗೂಡುತ್ತದೆ'—'ನಮ್ಮದೆಲ್ಲಾ ಪಾಪಿ ಜನ್ಮ . . ಇಷ್ಟುಹೊತ್ತಿನಿಂದ ಇಲ್ಲಿ ನಿಂತಿದೇವೆ . . ನಮ್ಮನ್ನ ಕರೆದರಾ?' —'ಅವರ ನಶೀಬು'—'ಹೋಗಿ ಬುದ್ದಿ'—'ಪೊಂಗೊ ಸಾರ್' . . . . ಈ ಜನವೋ ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು ಅಂತ ನೂಕು ತ್ತಿತ್ತು. 'ಆವೋ, ಮಹರಾಜ್' ಅಂತ ಶಿಷ್ಯನೂ ಮುಂದಕ್ಕೆಳೆದ . . . .

ಆಗ, 'ಹನುಮಂತರಾವ್! ಬನ್ನಿ ಇಲ್ಲಿ! ಹನುಮಂತರಾವ್!' ಅಂತ ಯಾರೋ ಗಟ್ಟಿಯಾಗಿ ಕೂಗಿಕೊಂಡರು. ಸಬ್‌ರೆಜಿಸ್ಟ್ರಾರವರ ಧ್ವನಿ! . . ಹನುಮಂತ ಥಟಕ್ಕನೆ ತಪ್ಪಿಸಿಕೊಂಡು ಪಚ್ಚೆಶಾಲಿನ ಕಡೆಗೆ ಓಡಿದ . . . ಜನರು ಬೆರಗಾದರು. ಸ್ವರ್ಗದಿಂದ ತಪ್ಪಿಸಿಕೊಂಡು ನರಕಕ್ಕೆ ಓಡಿಹೋದ ಯಾವನೋ ಪಾಪಿ ಎಂದು ನಿಶ್ಚಯಿಸಿದರು !

'ನನ್ನ ಹತ್ತಿರ ಬಂದದ್ದರಿಂದ ಬದುಕಿದೆ, ನೀನು?' ಎಂದು ಅಯ್ಯಂ ಗಾರರು ಹನುಮಂತನ ಎರಡು ಕೈಗಳನ್ನೂ ಹಿಡಿದರು. 'ಭಕ್ತರೆಲ್ಲರಿಗೂ

ಅವನು ಒಂದು ತೆರನ ಪ್ರಸಾದ ಕೊಡುತ್ತಾನೆ, ಅಫೀಮು ಬೆರಸಿದ್ದು. ತಿಂದ ಕೂಡಲೇ ಅಮಲು ಹತ್ತಿ ಸ್ವರ್ಗ, ನರಕ, ಅಪ್ಸರ ಸ್ತ್ರೀಯರು, ಯಮಘಾತು ಕರು ಎಲ್ಲರೂ ಕಾಣಿಸುತ್ತಾರೆ. ದಿನವೂ ತಿನ್ನಬೇಕು ಅನ್ನಿಸುತ್ತದೆ. ಹಾಗೆಯೇ, ಯೋಗಿಗಳೂ ಕೂಡ ಹತ್ತು ಹನ್ನೆರಡು ದಿನ ಒಟ್ಟಿಗೆ ಪ್ರಸಾದ ಕೊಡುತ್ತಾರೆ. ಅಷ್ಟರೊಳಗೆ ಅಫೀಮು ತಿಂಬುವ ಆಸೆ ಬಲವಾಗಿ, ಅವರು ಊರು ಬಿಟ್ಟು ಹೋದ ಮೇಲೂ ಕೂಡ ಅಂಗಡಿಯಿಂದ ತಂದು ತಿನ್ನುವ ಗುಂಪಿಗೆ ನಾವೂ ಸೇರಿಬಿಡುತ್ತೇವೆ! ಇಂತಹವರು ನೂರಾರು ಜನ ಇದಾ-ರಂತೆ. ಅಫೀಮು ಕಂಟ್ರ್ಯಾಕ್ಟರ ಆಳುಗಳಂತೆ ಇವರು!' ಎಂದು ಅಯ್ಯಂ ಗಾರರು ವಿವರಿಸಿದರು.

ಹಾಗೆಯೇ, ಹನುಮಂತನನ್ನೆಳೆದುಕೊಂಡು ರೆಯಿಲು ಸ್ಟೇಷನ್ ಕಡೆ ನಡೆದರು. ದಾರಿ ಉದ್ದಕ್ಕೂ ಅವರದೇ ಮಾತು. 'ಸರ್ ಪಿ. ರಾಮಲಿಂಗಂ ಊರಲ್ಲಿಲ್ಲ··ಎಲ್ಲಿಗೋ ತಪ್ಪಿಸಿಕೊಂಡು ಹೋಗಿಬಿಟ್ಟಿದಾನೆ..ಆದರೂ ಅವ ನನ್ನು ಬಿಡುವುದಿಲ್ಲ, ಅನ್ನು..ಮಾತೃಭೂತಂಮಿಗೆ ಹೇಳುತ್ತೇನೆ..ಅದೆಷ್ಟು ಹೊತ್ತಿನ ಕೆಲಸ ಮಹಾ?....ನಾನು ಮಾತಿಗೆ ತಪ್ಪುತ್ತೇನೆ ಅಂತ ಹೆದರಿ ದಿರೋ ನೀವು?' ಎಂದರು. ಹನುಮಂತ ನಾಚಿಕೆಯಿಂದ ತಲೆ ತಗ್ಗಿಸಿದ. 'ಛೆ. ಇಂತಹ ದಯಾಮೂರ್ತಿಯ ಮೇಲೂ ಸಗಿಣಿ ಎಸೆಯುತ್ತಿದಾರಲ್ಲಾ ಜನ?' ಎಂದು ಮರುಗಿದ. ಕುಂಟಾವಧಾನಿಯನ್ನು ಶಪಿಸಿದ. 'ಇಲ್ಲ, ಇಲ್ಲ, ತಾವು ಬರುತ್ತೀರಿ ಅಂತ ನನಗೆ ಗೊತ್ತಿತ್ತು' ಎಂದ. 'ಸದ್ಯಃ, ಆ ಮಾರ್ಜಾ ಲನ ಅಪೀಮು ಗುಳಿಗೆ ನುಂಗಲಿಲ್ಲವಲ್ಲಾ ನೀವು! ದೇವರೇ ನನ್ನನ್ನ ಸಮ ಯಕ್ಕೆ ಸರಿಯಾಗಿ ಕರೆದುಕೊಂಡು ಬಂದ....ಬೇಗ ಬೇಗ ಕಾಲು ಹಾಕಿ. ಹಸಿವಾಗುತ್ತಾ ಇದೆ......ನಿಮಗೂ ಹಸಿವು ಅಂತ ಕಾಣುತ್ತದೆ ಮುಖ ಜೋಲು ಬಿದ್ದಿರುವುದನ್ನು ಕಂಡರೆ....ಬನ್ನಿ..ಬನ್ನಿ....ಈ ಹೋಟಲಿಗೆ ನುಗ್ಗೋಣ..ನನ್ನ ಆಚಾರ-ಗೀಚಾರ ಎಲ್ಲಾ ಬೆಳಗ್ಗೆ ಪೂಜೆ ಮುಗಿಯುವ ತನಕ, ಅಷ್ಟೆ....' ಎಂದು ಹೇಳುತ್ತಾ, ಅಯ್ಯಂಗಾರರು ಹಸುರು ಶಾಲು ಪಟ್ಟೆನಾಮ ಸಹಿತ ರೆಯಿಲು ಸ್ಟೇಷನ್ ಬಳಿ ಇದ್ದ 'ಸುಖವಿನಾಶ್ ಫಲಾಹಾರ ಮಂದಿರ'ಕ್ಕೆ ನುಗ್ಗಿದರು; ದಡದಡನೆ ಹನುಮಂತನನ್ನು ತಮ್ಮ ಹಿಂದೆಯೇ ಎಳೆದುಕೊಂಡು ಹೋಗಿ ಕೂರಿಸಿದರು.

'ಯಾರೋ ಅಲ್ಲಿ....ಬಿಸಿಬಿಸಿಯಾಗಿ ಎರಡೆರಡು ತುಪ್ಪದ ದೋಸೆ ತೆಗೆದುಕೊಂಡು ಬಾ' ಎಂದರು ಅಯ್ಯಂಗಾರರು! ಹನುಮಂತ 'ಹಾ' ಎಂದು ಬಾಯಿ ತೆರೆದ. ಎರಡೆರಡು? 'ನನಗೆ ಬೇಡಿ, ಸ್ವಾಮಿ' ಅಂದ. ಕೇಳುವವರು ಯಾರು? 'ತಿನ್ನಿರಿ, ಮೈಗೆ ಒಳ್ಳೆಯದು. ನಾಳೆ ನಿಮ್ಮನ್ನ ಮಾತೃಭೂತಂ ಎದುರಿಗೆ ನಿಲ್ಲಿಸಬೇಕಾದರೆ ಆಳು ಕೊಂಚ ಕಟ್ಟುಮಟ್ಟಾಗಿ ಇರಬೇಡವೆ? ತಯಾರಿ ತೆಗೆದುಕೊಳ್ಳಿ' ಎಂದರು. ವಿಧಿಯಿಲ್ಲ, ಧೋರಣೆ ಎಲ್ಲವೂ ಅಯ್ಯಂಗಾರರದೇ; ಹೋಟಲ್‌ನಲ್ಲಿದ್ದ ಮಾಣಿಗಳಿಗೆಲ್ಲಾ ಆಶ್ಚರ್ಯ, ಅವಾಂತರ, ಗಡಿಬಿಡಿ. 'ಒಂದೊಂದು ವಡೆ ತೆಗೆದುಕೊಂಡು ಬಾ!'—'ಇನ್ನೂ ಒಂದೊಂದು!'–'ಸಾಂಬಾರ್ ಸಾಲದು'–'ತಿನ್ನಿರಿ! ವರ್ಧಿಷ್ಣುಗಳಾದ ನೀವು ತಿನ್ನಬೇಕೇ ಹೊರತು, ನಮ್ಮಂತಹ ಮುದಿ ದನಗಳು ಏನು ತಿಂದಾವು? ಹಾಕೋ, ಅಲ್ಲಿಗೆರಡು ಪೂರಿ, ಇಲ್ಲಿ ಎರಡು ಪೂರಿ..ಪಲ್ಯ ಎಲ್ಲಿ?..ಬೇಗ, ಬೇಗ..ಹೊತ್ತಾಗಿ ಹೋಯಿತು....ಮಾತೃಭೂತಂ ಮನೆ ನಮ್ಮ ಮನೆ ದಾರಿಯಲ್ಲೇ ಇದೆ....' ಹನುಮಂತನಿಗೆ ಸಾಕುಸಾಕೆನಿಸಿತು. ಆಹಾರ ಕಂಡರೆ ವಾಕರಿಕೆ ಆಗುವಷ್ಟು ಅವನ ಹೊಟ್ಟೆ ಭರ್ತಿಯಾಗಿಬಿಟ್ಟಿತ್ತು.... ಅವನ ಯೋಚನೆ ಎಲ್ಲವೂ: ಹೋಟಲ್‌ನವನಿಗೆ ಒಟ್ಟು ಹಣ ಎಷ್ಟು ಕೊಡ ಬೇಕಾಗುತ್ತದೆ, ಅಯ್ಯಂಗಾರರೇ ಎಲ್ಲವನ್ನೂ ಕೊಡಬಹುದು, ಅವರ ಆರ್ಭಟ ನೋಡಿದರೆ ತನಗೆ ಉಪಚಾರ ಮಾಡುವ ಹಾಗೆ ಕಾಣುತ್ತದೆ, ತನ್ನಿಂದ ಕಾಸು ಕೇಳುವುದಿಲ್ಲ; ಎಂಬ ರೀತಿಯಲ್ಲಿ ಮುಂದಕ್ಕೆ ಹರಿಯುತ್ತಿತ್ತು. ಹನುಮಂತನ ಕಿಸೆಯೊಳಗಿದ್ದದ್ದು ಮೂರು ರೂಪಾಯಿಗಳು ಮಾತ್ರ.... ಇನ್ನೆರಡು ದಿನಗಳೊಳಗೆ ಯಾವುದೂ ಸಂಪಾದನೆಯಾಗದಿದ್ದರೆ, ಉಪವಾಸ ವ್ರತ ಪ್ರಾರಂಭ ಮಾಡಿ ವೃತ್ತಪತ್ರಿಕೆಗಳಲ್ಲಿ ಹೆಸರು ಹಾಕಿಸಿಕೊಳ್ಳುವುದಲ್ಲದೆ ಗತ್ಯಂತರವಿರಲಿಲ್ಲ!

'ಕಾಫಿ ತೆಗೆದುಕೊಂಡು ಬಾರೊ ಬೇಗ, ಎಲ್ಲಿ ನೋಡುತ್ತಾ ನಿಂತಿದ್ದೀಯಾ? ಸುಡಸುಡಾ ಕಾಫಿ—ಎರಡೆರಡು ಕಪ್ಪು....ತಿಂದದ್ದು ಅರಗ ಬೇಡವೆ? ಚಿಕ್ಕವರಿಗೆ ಎರಡು ಕಪ್ಪು ಬೇಕೇಬೇಕು....'

'ಅಯ್ಯೋ, ಅಯ್ಯೋ! ನನಗೆ ಕಾಫಿಯೇ ಬೇಡ....ಬರೀ ನೀರು ಒಂದು ಲೋಟ....'

'ಹಾಗಾದರೆ, ಲೋ, ರಾಯರಿಗೆ ಒಂದು ಕಪ್ಪು ಸಾಕು; ಸುಮ್ಮನೆ ಪೀಡಿಸಬೇಡ..ನನಗೆರಡಿರಲಿ ಮುದುಕಯ್ಯನಿಗೆ.'

ಅಬ್ಬಾ! ಅದೆಂತಹ ಗಂಟಲು ಅವರದು? ಮರಳುವ ಕಾಫಿಯನ್ನು ಗಳಗಳನೆ ಕುಡಿದುಬಿಟ್ಟಿರಲ್ಲಾ!··ಹನುಮಂತ ತನ್ನ ಕಾಫಿಯನ್ನ ಆರಿಸುತ್ತಿರುವಾಗಲೇ ಅವರು ತಮ್ಮ ಪಾತ್ರೆಯನ್ನು ಖಾಲಿ ಮಾಡಿ. ಕೈ ತೊಳೆದು ಕೊಂಡು, ಹೋಟಲ್ ಬಾಗಿಲಲ್ಲಿ ನಿಂತು, 'ಬನ್ನಿ, ರಾಯರೇ! ಬೇಗ ಬನ್ನಿ ಅವರ ಕೈಲಿ ದುಡ್ಡು ಕೊಟ್ಟುಬಿಟ್ಟು ಬೇಗ ಬನ್ನಿ . . . ಎಷ್ಟಾಯಿತು ದುಡ್ಡು . . . .ಅವರ ಕೈಯಲ್ಲಿ ಕೊಡೋ ಚೀಟಿಯನ್ನ . . ಇಸುಕೊಳ್ಳಿ, ರಾಯರೇ. . ಬೇಗ ಕೊಟ್ಟುಬಿಡಿ . . .' ಅಂತ ಗಲಾಟೆ ಮಾಡಿದರು.

ಹನುಮಂತನಿಗೆ ಒಂದು ಕಡೆ ವಿಪರೀತ ಸಿಟ್ಟು; ಒಂದು ಕಡೆ ವಿಪರೀತ ಆಸೆ. ಸದ್ದಿಲ್ಲದೆ, ಒಂದು ರೂಪಾಯಿ ಆರೂವರೆ ಆಣೆಯನ್ನು ಮಾಲೀಕರ ಮೇಜಿನ ಮೇಲಿಟ್ಟು, ಅಯ್ಯಂಗಾರರ ಸಂಗಡ ಮಲ್ಲೇಶ್ವರಪುರದ ಕಡೆ, ಮಾತೃಭೂತಂರವರ ಮನೆಗೆ, ನಡೆದ . . . . ದಾರಿಯಲ್ಲೇ ಎದೆ ಗಟ್ಟಿಮಾಡಿ ಕೊಂಡು ಮಾವಿನ ಹಣ್ಣಿನ ರೂಪಾಯಿ ವಿಷಯ ಎತ್ತಿದ. ವಿಂತವಾಗಿ, ಹಿತ ವಾಗಿ, ನಯವಾಗಿ, ನಾಜೋಕಾಗಿ, ಸಾಲದ ವಸೂಲಿ ಮಾತನ್ನು ಎತ್ತಿದ. ಎಲ್ಲಿ ಅಯ್ಯಂಗಾರರಿಗೆ ಕೋಪ ಬಂದುಬಿಡುವುದೋ ಎಂದು ಅವನಿಗೆ ಹೆದ ರಿಕೆ. 'ಮಾವಿನ ಹಣ್ಣು ಚೆನ್ನಾಗಿತ್ತೆ?' ಎಂದು ಮೆಲ್ಲಗೆ ವಿಷಯದ ಪ್ರಸ್ತಾಪ ತೆಗೆದ. 'ಯಾವ?' ಎಂದರು ಅವರು! ಘಾಟಿ! ಮೈಯೆಲ್ಲಾ ಕಣ್ಣಾಗಿ, ಎಚ್ಚರವಾಗಿ, ಇದಾರೆ. 'ಡಜನ್ ಎಂಟಾಣೆಯಂತೆ ನಿನ್ನೆ ತೆಗಿದುಕೊಂಡಿ ರಲ್ಲಾ, ಬಾದಾಮಿ' ಎಂದು ಹನುಮಂತ ಮತ್ತೆ ಪ್ರಾರಂಭಿಸಿದ. 'ಯಾವ ಬಾದಾಮಿ? ಏನು ಕಥೆ? ನೀವೇನು ಕನಸು ಕಾಣುತ್ತೀರೇನು? ಎಂಟಾ ಣೆಗೆ ಈ ತಿಂಗಳೂರಲ್ಲಿ ಈಗ ಬಾದಾಮಿ ಸಿಕ್ಕುವುದೇ ಇಲ್ಲವಲ್ಲಾ. ನಿಮಗೆ ಬಾದಾಮಿ ಹಣ್ಣು ತಿನ್ನಬೇಕಾದರೆ, ಬನ್ನಿ, ನನ್ನ ಜೊತೆಯಲ್ಲಿ . . . . ಮಾತೃ ಭೂತಂವನ್ನ ನೋಡಿ ಬ್ಯಾಂಕಿನಲ್ಲಿ ಒಂದು ಚಾಕರಿ ಸಂಪಾದಿಸಿ ಕೊಡಿಸು ತ್ತೀನೆ . . . ಬ್ಯಾಂಕಿಂದ ಬರುವಾಗ ದಿನವೂ ಸಾಯಂಕಾಲ ಎರಡೆರಡು ಹಣ್ಣು ತಿನ್ನಿ, ಯಾರು ಬೇಡ ಅನ್ನುತ್ತಾರೆ.' ಹನುಮಂತನೇ ಸೋಲಬೇಕಾ

ಯಿತು. 'ಅಷ್ಟು ಮಾಡಿಸಿ ಕೊಟ್ಟುಬಿಟ್ಟರೆ ನಾನು ಮಾವಿನ ಹಣ್ಣಿನ ಮಾತು ಎತ್ತುವುದೇ ಇಲ್ಲ' ಅಂದ. 'ಇದೀಗ ಒಳ್ಳೆಯವರ ಲಕ್ಷಣ' ಅಂತ ಅಯ್ಯಂಗಾರರು ಆಶೀರ್ವದಿಸಿದರು.

ಅಷ್ಟು ಹೊತ್ತಿಗೆ ಅವರಿಬ್ಬರೂ ಮಲ್ಲೇಶ್ವರಪುರಂ ಕೋ-ಆಪರೇಟಿವ್ ಬ್ಯಾಂಕ್ ಕಟ್ಟಡದೆದುರು ಬಂದುಬಿಟ್ಟಿದ್ದರು. 'ಸ್ವಲ್ಪ, ಇಲ್ಲಿ ನಿಂತಿರಿ. ನಾನು ಈ ತಿಂಗಳ ಸಾಲದ ಕಂತು ಕಟ್ಟಿಬಿಟ್ಟು ಬರುತ್ತೇನೆ.. ಮಾತೃಭೂತಂ ಹತ್ತಿರ ಹೋದರೆ ಅವನು ತನ್ನ ಸಂಸಾರಗ ತಾಪತ್ರಯಗಳನ್ನೆಲ್ಲಾ ಒದರುತ್ತಾ ತುಂಬಾ ಹೊತ್ತುಮಾಡಿಬಿಡುತ್ತಾನೆ.. ಇಲ್ಲಿ ಕಂತು ನಿನ್ನೆಯೇ ಕಟ್ಟಬೇಕಾಗಿತ್ತು' ಎಂದು ಹೇಳುತ್ತಾ, ಅಯ್ಯಂಗಾರರು ಬ್ಯಾಂಕಿನ ಕಟ್ಟಡದೊಳಕ್ಕೆ ನುಗ್ಗಿದರು..... ಹೊರಗಡೆ ಹನುಮಂತ ಕಾಲು ಘಂಟೆ ಕಾದ; ಅರ್ಧ ಘಂಟೆ ಆಯಿತು. 'ದೊಡ್ಡ ಊರು, ದೊಡ್ಡ ಬ್ಯಾಂಕು! ಪಚ್ಚೆ ಶಾಲಾದರೇನು? ಯಾರಾದರೇನು? ಕೊಂಚ ತಡವಾಗಿಯೇ ಆಗುತ್ತದೆ....ಅದೂ ಅಲ್ಲದೆ ನಾನಿಲ್ಲಿ ನಿಂತಿರುವುದು ಅವರಿಗೆ ಗೊತ್ತಿದೆಯಲ್ಲಾ..ಅಯ್ಯಂಗಾರರೂ ಕೂಡ ಬೇಗ ಬೇಗ ಅಂತ ಗುಮಾಸ್ತೆಯರನ್ನ ಗೋಳುಹೊಯ್ದುಕೊಳ್ಳುತ್ತಾರೆ....ಚಿತ್ರದುರ್ಗದಲ್ಲೇ ನಾವು ಮುಕ್ಕಾಲು ಘಂಟೆ ತಡ ಮಾಡುತ್ತಿದ್ದೆವು!....ಇಲ್ಲಿ ಕೇಳಬೇಕೆ? ದೊಡ್ಡ ಊರು....ನನಗೇನು ಅವಸರ? ....ಮಾತೃಭೂತಂ ಅವರು ಬ್ಯಾಂಕಿಗೆ ಬರಬೇಕಾದರೆ ೧½ ಘಂಟೆ ಆಗಿಯೇ ಆಗುತ್ತದೆ....ಯಾಕೆ ಇನ್ನೂ ಬರಲಿಲ್ಲ ಪುಣ್ಯಾತ್ಮ?' ಎಂದು ಯೋಚಿಸಿ, ಒಳಗೆ ಪ್ರವೇಶಿಸಿದ. ಆಸಾಮಿ ಪತ್ತೆಯೇ ಇಲ್ಲ..ಎಲ್ಲ ಕಡೆಯೂ ನೋಡಿದ. ರೂಮುಗಳೊಳಗೆಲ್ಲಾ ಇಣಿಕಿ ನೋಡಿದ. ಹಸುರು ಬಣ್ಣವೇ ಇರಲಿಲ್ಲ.. ಅಯ್ಯಂಗಾರರು ಎಲ್ಲಿಗೋ ಹಿತ್ತಲು-ಬಾಗಿಲಿಂದ ನುಸುಳಿರಬೇಕು..ಅಂತು ಆ ದಿನವೂ ಅವರು ಹನುಮಂತನಿಗೆ ಮೋಸ ಮಾಡಿದರು!

ಇನ್ನು ಇವರನ್ನ ನಂಬಿ ಪ್ರಯೋಜನವಿಲ್ಲವೆಂದು ನಿಶ್ಚಯಿಸಿ, ಹನುಮಂತ ಕುಂಟಾವಧಾನಿ ಹೋಟಲಿಗೆ ಬಂದ. ಅವಧಾನಿಗಳು ಬಾಗಿಲಲ್ಲೇ ನಿಂತಿದ್ದರು. 'ಏನು ಅಯ್ಯಂಗಾರರ ಆಶೀರ್ವಾದವಾಯಿತೋ?' ಎಂದು ಅವರು ಕೇಳಿದರು. 'ಇಲ್ಲ..ನೀವು ನಿನ್ನೆ ಅಷ್ಟು ಎಚ್ಚರಿಕೆ ಕೊಟ್ಟ ಮೇಲೆ ನಾನು

ಅವರನ್ನ ನೆಚ್ಚಿಕೊಂಡೇ ಇಲ್ಲ. .ಶುದ್ಧ ಅಯೋಗ್ಯರು ' ಎಂದು ಹನುಮಂತ ಉತ್ತರ ಕೊಟ್ಟ. 'ಹಗಲುಗಳ್ಳ, ಸ್ವಾಮಿ, ಅವನು; ಅವನ ನಾಮ, ಅವನ ಶಾಲು, ಅವನ ನಶ್ಯ, ಇವುಗಳನ್ನ ನೋಡಿ ಮೋಸಹೋಗಬೇಡಿ' ಎಂದು ಅವರು ಹನುಮಂತನಿಗೆ ಮತ್ತೊಮ್ಮೆ ಹೇಳಿದರು. 'ಇಲ್ಲ, ಇಲ್ಲ, ನನಗೂ ಗೊತ್ತಾಗಿ ಹೋಗಿದೆ' ಎಂದು ಆವನೂ ಆ ಮಾತಿಗೆ ಸೈ ಎಂದನು.

—

## ಹದಿಮೂರನೆಯ ಅಧ್ಯಾಯ

### “ ಹಳೆಯ ಗಂಟೆಲ ನಾದವೇ ಗತಿ ”



ಎಲ್ಲಿ ಹೋಗುವೆನೆಂಬ ತಿಳಿವಿಲ್ಲದೆಯೆ ನಡೆವ
ಕುರುಡನಿಗೆ ಕಣ್ಣುಗಳು ಬಂದುವಾಗ —**ತೀ. ನಂ. ಶ್ರೀ.**

ಅರಿಯದವ ನಾನು, ಅಲ್ಪನು, ಕಿರಿಯವನು, ನನಗೆ
ಇದು ಸಾಧ್ಯವೆ ಎಂದು ಸಂದೇಹ ಪಡಬೇಡ —**ಶ್ರೀನಿವಾಸ**

ಸರ್ವದಿಶೆಗಳಲ್ಲಿ ಗುಣಿಸು
ಮಂಥ ಘನನಿನಾದವು —**ವಿನಾಯಕ**



ಕೋಣೆ ಮುಂದುಗಡೆ ಹಲ್ಲುಕಿಸಿಯುತ್ತಾ ಯಮಾಲಯದ ಏಜಂಟರು ಸಿದ್ಧ! ‘ರಾಮರಾಮಾ! ಇಷ್ಟು ಹೊತ್ತಾಯಿತೇ ಬೆಳಗ್ಗಿನ ಸವಾರಿ ಮುಗಿಸಿಕೊಂಡು ಬರುವುದಕ್ಕೆ....ಬನ್ನಿ....ಬೇಗ ಸ್ನಾನಮಾಡಿ ಊಟ ಮಾಡಿ..ಆಮೇಲೆ ಮಾತನಾಡೋಣ..ಬೇಗ ತೆಗಿದುಕೊಡಲೇನು ?.... ನಿನ್ನೆ ಮಧ್ಯಾಹ್ನ ತಾವು ಆ ಮುರುಕಲು ಕುರ್ಚಿಯನ್ನ ಕೈಯಿಂದ ಎತ್ತುತ್ತಲೂ ನಾನು ಮೆಟ್ಟಲಿಳಿದು ಹೋಗಿ ಕುಂಟಾವಧಾನಿಗೆ ಹೇಳಿದೆ—‘ಏನ್ರೀ ಇದು ? ದೊಡ್ಡಮನುಷ್ಯರು, ದೊಡ್ಡ ಮನೆತನದವರು ಇರುವ ಜಾಗದಲ್ಲಾದರೂ ಕೈಕಾಲು ನೆಟ್ಟಗಿರುವ ಕುರ್ಚಿಗಳನ್ನ ಹಾಕಬಾರದೇನ್ರೀ ’ ಅಂದೆ. ಆತನೂ ಕುಂಟ; ಕುರ್ಚಿಯೂ ಕುಂಟು . . ಹ . . ಹ್ಹು . . ಹ್ಹು . . ಹಿ . . ಹ್ಹಿ . . . ಅಂತು, ನೀವು ನಿನ್ನೆ ಒಳ್ಳೆ ನಾಟಕ ಆಡಿದಿರಿ . . . . ಏಕೆ ಹಾಗೆ

ರೇಗಿ ಕುರ್ಚಿಯನ್ನೆತ್ತಿ ಕುಕ್ಕಿದಿರಿ . . . ಹ . . ಹ್ಹ . . ಹ್ಹ . . . ' ಎಂದು ಓಟಗುಟ್ಟುತ್ತಾ ಹನುಮಂತನ ಹಿಂದೆಯೇ ಕೋಣೆಯೊಳಕ್ಕೆ ಪ್ರವೇಶ ಮಾಡಿದರು. ಅವರ ಮಾತು ಯಾವುದೂ ಹನುಮಂತನ ಕಿವಿಗೆ ಬೀಳಲೇ ಇಲ್ಲ . . . ಪಾಪ . . . . ಅವನ ಸಂಕಟ ಅವನಿಗೆ; ಅದನ್ನು ಪರಿಹರಿಸಲು ಒಬ್ಬ ವೆಂಕಟರಮಣನೂ ಪ್ರತ್ಯಕ್ಷವಾಗುತ್ತಿಲ್ಲವಲ್ಲಾ ಎಂಬ ತವಕ ಅವನಿಗೆ. 'ದೊಡ್ಡ ಊರು; ಲಕ್ಷಾಂತರ ಜನ ಬಾಳಿ ಬದುಕಿ, ಬಿಂಕದಿಂದ ಬಳುಕಿ, ಬಡವರ ಕಣ್ಣು ಕುಕ್ಕುವ ಜಾಗ; ಒಬ್ಬನ ಗೇಣುದ್ದದ ಹೊಟ್ಟೆಗೆ ಇಷ್ಟು ಅನ್ನ ಸಿಕ್ಕೇ ಸಿಕ್ಕುತ್ತದೆ ಅಂತ ಭರವಸೆಯಿಂದ ಇಲ್ಲಿಗೆ ಬಂದರೆ, ಕಿತ್ತು ತಿನ್ನುವವರೇ ಇಲ್ಲೂ ಜಾಸ್ತಿ; ಇತ್ತು ತಿನ್ನಿಸುವವರೊಬ್ಬರೂ ಇಲ್ಲ. ಲಾಯರುಗಳು, ದಲ್ಲಾಳಿಗಳು, ಯೋಗಿಗಳು, ಪಚ್ಚಿ ಶಾಲುಗಳು—ಎಲ್ಲರೂ ಇತರರ ಗಂಟುಹಾರಿಸುವುದರಲ್ಲೇ ನಿರತರು ! ಪಾಪ—ಕೊಟ್ಟದ್ದು ನಮಗೆ, ಬಚ್ಚಿಟ್ಟದ್ದು ಪರರಿಗೆ, ಅಂತ ಕೂಗಿದ ಆ ಸರ್ವಜ್ಞನನ್ನೇ ಈ ಜನ ಪರಮ ಮುಟ್ಠಾಳ ಅಂತ ಹೇಳುತ್ತಿದಾರೆ . . . . . . ಇರುವುದೊಂದು ರೂಪಾಯಿ ಒಂಬತ್ತೂವರೆ ಆಣೆ . . . ಈ ದಿನದ ವೆಚ್ಚಕ್ಕೂ ಸಾಲದು . . . ' ಎಂದು ನೊಂದು ಬೇಯುತ್ತಿದ್ದ ಈ ಹನುಮಂತ ಏಜಂಟರನ್ನು ತಡೆಯಲೇ ಇಲ್ಲ; ಬಂದದ್ದೆಲ್ಲಾ ಬರಲಿ, ಅಂತ ಸುಮ್ಮನಾದ . . . . ಅವನ ಯೋಚನೆ ಅವನಿಗೆ; ಅವನ ಸಂಕಟ ಅವನಿಗೆ !

'ಸಂಜೆ ಹೊತ್ತಿಗೆ ಎಲ್ಲಾದರೂ ಒಂದು ಚಾಕರಿಗೆ ಸೇರಲೇಬೇಕು. ಲಲಿತಾದ್ರಿಪುರಕ್ಕೆ ಹೋಗಿ ಪಾಪರ್ ಪಾಳಯಂ ಹೆಡ್ಮೇಷ್ಟರನ್ನು ಮತ್ತೊಮ್ಮೆ ವಿಚಾರಿಸುವುದು; ಆಮೇಲೆ ಮುಂದಿನ ಕಾರ್ಯಕ್ರಮ ' ಎಂದು ನಿಶ್ಚಯಿಸಿದ. ಆಗ, ಏಜಂಟರು, 'ರಾಮರಾಮಾ ! ಮರೆತೇಬಿಟ್ಟೆ. ನಿಮ್ಮ ಹತ್ತಿರ ಒಂದು ವಿಷಯ ಮಾತನಾಡುವುದಕ್ಕಾಗಿ ಬಂದವನು ಅದನ್ನೇ ಮರೆಯುವುದರಲ್ಲಿದ್ದೆ ! ಲಲಿತಾದ್ರಿಪುರದಲ್ಲಿ . . . ಎಂದು ಮಾತು ತೆಗೆದರು. ಹನುಮಂತನಿಗೆ ರೋಮಾಂಚವಾಯಿತು; ಬಲಗಣ್ಣು ಮಿಡಿಯಿತು; ಕಿಟಿಕಿಯ ಹೊರಗಡೆ ಒಂದು ಕಾಗೆ ಬಲದಿಂದ ಎಡಕ್ಕೆ ಹಾರಿತು ! 'ಏನು ? ಲಲಿತಾದ್ರಿಪುರದಲ್ಲಿ ಏನು ? ' ಎಂದು ಕೇಳುತ್ತಾ ಹನುಮಂತ ಏಜಂಟರ ಹತ್ತಿರಕ್ಕೆ ಬಂದ.

‘ ರಾಮರಾಮಾ ! ಅಂತಹ ಪ್ರಮಾದವೇನೂ ಇಲ್ಲ, ಸ್ವಾಮಿ ! ಲಲಿತಾದ್ರಿಪುರದಲ್ಲಿ ಒಂದು ಸರ್ಕಸ್ ಕಂಪನಿ ಬಂದಿದೆ..‘ ಬಂದಿದೆ ’ ಏನು ?.. ಆಗಲೇ ಒಂದು ತಿಂಗಳಿಂದಾ ನಡಿಯುತ್ತಾ ಇದೆ..ಅವರ ಟಿಕೀಟುಗಳೆರಡು ನನ್ನ ಹತ್ತಿರಕ್ಕೆ ಬಂತು....ಇವತ್ತು ಸಾಯಂಕಾಲ ಒಂಬತ್ತು ಗಂಟೆಗೆ ಇಬ್ಬರೂ ಒಟ್ಟಿಗೆ....’

‘ ನನಗೆ ಯಾವ್ಯಾವುದೋ ಯೋಚನೆ..ಮನಸ್ಸಿನಲ್ಲಿ ಕಳವಳ..’

‘ ರಾಮರಾಮಾ ! ದೊಡ್ಡವರು ಶ್ರೀಮಂತರು ಅಂದರೆ ಹಾಗೆಯೇ, ಹವ್ಯಾಸಗಳು ಬಹಳ, ನೂರಾರು ಯೋಚನೆಗಳು......ಆದರೆ, ನಾನು ಹೇಳುವುದನ್ನೂ ಕೊಂಚ ಲಾಲಿಸಿ....ತಾವು ಸರ್ಕಸ್ಸಿಗೆ ಬಂದರೆ, ಕೊಂಚ ಆಯಾಸ ಪರಿಹಾರವಾಗುತ್ತದೆ, ಮನಸ್ಸಿಗೆ....’

‘ ಹೌದು, ಹೌದು. ನ್ಯಾಯ ನೀವು ಹೇಳಿದ್ದು....ಆಗಲಿ.... ಒಂಬತ್ತು ಗಂಟೆ ಹೊತ್ತಿಗೆ ಹಿಂದಕ್ಕೆ ಬಂದರೆ, ನಾನೂ ಬರುತ್ತೇನೆ....’

‘ ರಾಮರಾಮಾ ! ತಮ್ಮ ಪ್ರೋಗ್ರಾಂ ಮುಗಿಸಿಕೊಂಡು ತಾವು ಬನ್ನಿ..ಅನುಕೂಲವಿದ್ದರೆ ಹೋಗೋಣ..ಇಲ್ಲದೆ ಇದ್ದರೆ ಬೇಡ..ಬಿಟ್ಟಿ ಟಿಕೀಟು..ಇವತ್ತಿಗೆ ಅಂತ ಬರೆದಿದಾನೆ..ಹೋದರೆ ಹೋಯಿತು..ನಾಳೆಗೆ ಬೇಕಾದರೆ ನಾಳೆ ಸಂಪಾದಿಸಿಕೊಂಡು ಬರುತ್ತೇನೆ ಬೇರೆ ಇನ್ನೆರಡು.... ತಾವು ತಮ್ಮ ಕೆಲಸ..’

‘ ಅಂತಹ ಕೆಲಸವೇನೂ ಇಲ್ಲ ನನಗೆ..ನಾಲ್ಕೈದು ಜನರನ್ನ..’

‘ ರಾಮರಾಮಾ ! ನನಗೆ ಗೊತ್ತಿಲ್ಲವೆ ? ದೊಡ್ಡವರು ಅಂದಮೇಲೆ ಇದ್ದೇ ಇರುತ್ತದೆ ಪರಸ್ಪರ ಮಾತುಕತೆ, ಭೇಟಿ, ಸಂಭಾಷಣೆ, ಉಪಚಾರ..’

ಆ ದಿನ ಉರಿಬಿಸಿಲಿನಲ್ಲಿ ಹನುಮಂತ ಹನ್ನೆರಡು ಹದಿನೈದು ಮೈಲಿ ಸುತ್ತಿರಬೇಕು. ಬೆಳಗ್ಗೆ ಅಯ್ಯಂಗಾರರು ಕೊಡಿಸಿದ ಫಲಾಹಾರದ ಮಹತ್ವದಿಂದ ಅವನಿಗೆ ಊಟ ಬೇಕಿರಲಿಲ್ಲ; ಊಟಕ್ಕೆ ಮುಂಚೆಯೇ ಸವಾರಿ ಹೊರಟುಬಿಟ್ಟಿದ್ದ. ಪಾಪರ್ ಪಾಳಯಂ ಹೆಡ್ಮೇಷ್ಟ್ರ ಹತ್ತಿರದಿಂದ, ‘ ನೀವು ಇನ್ನು ಆಸೆ ಇಟ್ಟುಕೊಳ್ಳಬೇಕಾಗಿಲ್ಲ. ’ ಎಂಬ ಉತ್ತರವನ್ನು ಪಡೆದ. ಎಮ್‌ಡನ್ ಶರ್ಮನನ್ನು ಕಂಡು ಅವನಿಂದ ವಿವರಗಳನ್ನು ಪತ್ತೆ ಹಚ್ಚಿ, ಬಸ್ಸು ಮಾಲೀಕರು ಮೂರು ಜನಗಳ ಮನೆಗಳಿಗೆ ಹೋಗಿ ಕೆಲಸ ಖಾಲಿ

ಇಲ್ಲವೆಂದು ಗೊತ್ತುಮಾಡಿಕೊಂಡ; ಸಿನಿಮಾ ಕಂಪೆನಿ ಪ್ರೊಪ್ರೈಟರುಗಳಾದ ನಾಲ್ಕು ಜನ ದೊಡ್ಡಮನುಷ್ಯರನ್ನು ಕಂಡ. ಬಾಗಿಲು ಕಾಯುವ ಕೆಲಸವಾದರೂ ಕೊಡಿ ಎಂದು ಬೇಡಿದ; ಕಲ್ಲೆದೆ ಸಿನಿಮಾದವರದು!.... ಸಂಜೆ ೮-೩೦ಕ್ಕೆ ಹೋಟಲಿಗೆ ಹಿಂತಿರುಗಿದ ....

ಏಜೆಂಟರೂ, ಅವರ ಹಲ್ಲುಕಿರಿತವೂ ಸಿದ್ಧ, ಬಾಗಿಲಲ್ಲಿ! ಪ್ರಾಣ ಹೋಗುವಾಗ ವೀಣೆ ಬಾರಿಸಿದ ಎಂಬ ಹಾಗೆ, ಹನುಮಂತ ಅವರೊಂದಿಗೆ ಮತ್ತೆ ಲಲಿತಾದ್ರಿಪುರಕ್ಕೆ ಸರ್ಕಸ್ಸು ನೋಡಲು ಹೊರಟ! ಕಾಂಪ್ಲಿಮೆಂಟರಿ ತಿಕೀಟಾದ್ದರಿಂದ ಮುಂದಿನ ಸಾಲು ಕುರ್ಚಿಯಲ್ಲೇ,ದಿಂಬಿನ ಕುರ್ಚಿಯಲ್ಲೇ, ಇಬ್ಬರೂ ಕುಳಿತರು. ತಿಂದು ತೇಗಿದ, ಭಾಗ್ಯವಂತರಂತೆ ಅವರಿಬ್ಬರೂ ಕಾಲು ಮೇಲೆ ಕಾಲು ಹಾಕಿ ಕಾರ್ಯಕ್ರಮದ ಚೀಟಿಯನ್ನು ಓದಿಕೊಂಡರು. ಹೆಂಗಸರೂ ಮಕ್ಕಳೂ ತಂಡೋಪತಂಡವಾಗಿ ನೆರೆದಿದ್ದರು; ವಯಸ್ಸು ತುಂಬಿದ್ದರೂ ಮಗುತನವನ್ನ ಉಳಿಸಿಕೊಂಡ ಕೆಲವರು ಹಿರಿಯರೂ ಬಂದಿದ್ದರು.

ಒಂಬತ್ತೂವರೆ ಘಂಟೆಗೆ ಸರಿಯಾಗಿ ಆಟ ಪ್ರಾರಂಭವಾಯಿತು. ಆ ದಿನದ ಸರ್ಕಸ್ಸಿನಲ್ಲಿ ಹನುಮಂತರಾಯನ ಮೆಚ್ಚುಗೆಯನ್ನು ಪಡೆದದ್ದು ಕಂಪೆನಿಯವರ ಶಿಸ್ತು ಮತ್ತು ಕ್ರಮ. ತೊಪ್ಪೆ ಎತ್ತುವವರು, ತಿಪ್ಪೆ ಸಾರಿಸುವವರು, ಜಮಖಾನೆ ಹಾಕುವವರು, ಸುತ್ತುವವರು, ಪೀಪಾಯಿ ಉರುಳಿಸುವವರು, ಹಗ್ಗ ಬಿಗಿಯುವವರು, ನಕಲಿಯವರು, ಕುಣಿತದವರು, ಕತ್ತಿ ವರಿಸೆಯುವರು, ಮೃಗಗಳು, ಉಯ್ಯಾಲೆಯವರು, ಸವಾರರು,ಬಾಜಾಬಜಂತ್ರಿಯವರು, ಮಾಹುತರು, ಬೋನಿನವರು, ಬೆಂಕಿಯವರು, ಎಲ್ಲರೂ, ಎಲ್ಲವೂ, ಅವರವರ, ಅದರದರ, ಉಡಿಗೆತೊಡಿಗೆಗಳನ್ನು ಧರಿಸಿ ಬರಬೇಕಾದ ಕಾಲಕ್ಕೆ ಬಂದು ನಿಲ್ಲಬೇಕಾದ ಕಡೆ ನಿಂತು, ಮಾಡಬೇಕಾದುದನ್ನು ಮಾಡಿ ...........

ಆಗ ಸರ್ಕಸ್ ಕಂಪನಿಯ ಮಾಲೀಕರು ಪ್ರೊಫೆಸರ್ ಪಶುಪತಿಯವರು ಆಟದ ತಳದ ನಡುವೆ ಬಂದು ತಿಂಗಳೂರಿನ, ಮಾನ್ಯ ಮಹನೀಯರಿಗೂ ತಮ್ಮ ವಂದನೆಗಳನ್ನು ಸಲ್ಲಿಸಿದರು. ಅಲ್ಲದೆ, 'ನಮ್ಮ ಕಂಪನಿಯಲ್ಲಿ ತಾವು ಕಂಡ ಹಾಗೆ, ಅನಂತಶಯನದ ಆನೆ, ಬಂಗಾಳದ ಹುಲಿ, ಗುಜರಾತಿನ ಆಡು, ಹೈದರಾಬಾದಿನ ಹೋತ, ಮೊದಲಾಗಿ ನಾನಾ ದೇಶಿಗಳು ಇರುವ ಹಾಗೆ

ನಮ್ಮ ಆಟಗಾರರಲ್ಲೂ ಸಹ, ಸ್ವದೇಶಿಗಳೂ ಪರದೇಶಿಗಳೂ ಇದಾರೆ. ನಮ್ಮ ಸರ್ಕಸ್ ಕಂಪನಿಗೆ ಸೇರಿ ಯಾವುದಾದರೂ ಒಂದು ಆಟವನ್ನೋ ಮಾಟವನ್ನೋ ಮಾಡಲು ಶಕ್ತಿಯುಳ್ಳ ಮೃಗಗಳಾಗಲಿ, ಮನುಷ್ಯರಾಗಲಿ, ಈ ತಿಂಗಳೂರಲ್ಲಿ ಇದ್ದರೆ ಅವರು ನನ್ನಲ್ಲಿಗೆ ಬಂದು ಮಾತನಾಡಬಹುದು ' ಎಂದು ಮುಗಿಸಿದರು. ಕರತಾಡನಗಳೊಂದಿಗೆ ಅಂದಿನ ಆಟ ಮುಕ್ತಾಯಗೊಂಡಿತು ........ಹನ್ನೆರಡು ಘಂಟೆ........ನಡು ನಿಶಿ.......ಹನುಮಂತ ಯಾವುದೋ ಯೋಚನೆಯಲ್ಲಿ ಮುಳುಗಿದ್ದ. ಏಜಂಟರು ಅವನ ಭುಜವನ್ನು ಹಿಡಿದು ಕುಲುಕಿ ಎಬ್ಬಿಸಿದರು. 'ರಾಮರಾಮಾ, ಎಷ್ಟು ಹೊತ್ತು ಇಲ್ಲಿ ಕುಳಿತಿರುವುದು? ಮನೆಗೆ ಹೋಗಬೇಡವೇ?'

'ಇಲ್ಲ, ಇಲ್ಲ. ನಾನು ಈಗಲೇ ಬರುವುದಿಲ್ಲ; ನನಗೆ ಕೊಂಚ ಕೆಲಸ ಇದೆ. ರಾಮರಾಜ ಪೇಟೆಯಲ್ಲಿ ಒಬ್ಬರನ್ನು ಕಂಡು ಎರಡು ಮಾತು . . . .'

'ರಾಮರಾಮಾ, ಇಷ್ಟು ಹೊತ್ತಿನಲ್ಲಿ ರಾಮರಾಜ ಪೇಟೆಗೆ ಹೋಗಿ ಅವರನ್ನೆಬ್ಬಿಸಿ . . . .'

'ಇಲ್ಲ, ಇಲ್ಲ. ಅಗತ್ಯವಾದ ಕೆಲಸ . . . . ಹೋಗಲೇಬೇಕು.'

'ರಾಮರಾಮಾ, ನಾನೇನು ಬೇಡ ಅಂದೇನೇ? ಧಾರಾಳವಾಗಿ ಮಾತನಾಡಿಕೊಂಡು ಬನ್ನಿ. ನನಗೆ ಬೇಕಾದದ್ದು ಒಂದೇ. ಕೋಪಿಸಿಕೊಳ್ಳಬೇಡಿ. ಐನೂರು ರೂಪಾಯಿನ ಪಾಲಿಸಿ . . . .'

'ಇನ್‌ಷೂರೆನ್ಸ್ ಮಾತು ಮಾತ್ರ ಎತ್ತಬೇಡಿ ನನ್ನ ಹತ್ತಿರ ಈಗ.'

'ರಾಮರಾಮಾ, ಇನ್‌ಷೂರೆನ್ಸು ಅಂತ ಹೇಳಿದೆನೇ? . . . .'

'ಹೋಗಿ! ಹೋಗಿ! ಹೊತ್ತಾಯಿತು ಬೆಳಗ್ಗೆ ರೂಮ್ ಹತ್ತಿರ ಕಾಣುತ್ತೇನೆ.'

ಹನುಮಂತ ಸರ್ಕಸ್ ಗುಡಾರದ ಹಿಂದೆ ಹೋಗಿ ಪಶುಪತಿಯವರು ಎಲ್ಲಿದಾರೆ ಎಂದು ವಿಚಾರಿಸಿದ. ಅವರೊಂದಿಗೆ ಏಕಾಂತದಲ್ಲಿ ಮಾತನಾಡಿದ. ತನಗೆ ಏನಾದರೂ ಒಂದು ಚಾಕರಿ ಕೊಡಬೇಕೆಂದು ಅಂಗಲಾಚಿದ. ಗುಡಿಸುವುದು ಮೊದಲುಗೊಂಡು, ಮುದಿ ಸಿಂಹಗಳ ಮೀಸೆಗೆ ಬಣ್ಣ ಹಾಕುವ ಕೆಲಸದ ವರೆಗೂ ಯಾವುದಾದರೂ ಮಾಡುತ್ತೇನೆ ಎಂದು ಹೇಳಿದ. ಪಶುಪತಿಯವರು, 'ಆ ಕೆಲಸಕ್ಕೆಲ್ಲಾ ಆಳುಗಳು ಆಗಲೇ ಇದಾರೆ. ನಮ್ಮ ಪ್ರೋಗ್ರಾಮಿಗೆ

ಸೇರಿಸುವ ಹಾಗೆ ನಿಮ್ಮಲ್ಲಿ ಏನಾದರೂ ಒಂದು ಸಾಮರ್ಥ್ಯವಿದ್ದರೆ ಹೇಳಿ. ಆಗತ್ಯವಾಗಿ ಸಹಾಯಮಾಡುತ್ತೇನೆ.'

'ಅಂದರೆ ಉದಾಹರಣೆಗೆ?'

'ಯೋಗಾಸನ, ರೈತ ಜನರ ಹಾಡುಗಳು, ಹಳ್ಳಿ ಕುಣಿತ ಇವುಗಳನ್ನು ಬಲ್ಲಿರಾ? ಅಥವಾ, ನಮ್ಮ ಗುಡಾರದ ಮಧ್ಯೆ ಕುಳಿತುಕೊಂಡು ಬಹಿರಂಗ ವಾಗಿ ಒಂದೇ ಸಮನೆ ಐವತ್ತು ಲಾಡು ತಿನ್ನಬಲ್ಲಿರಾ?'

'ಹೇಳಿಕೊಳ್ಳುವುದಕ್ಕೆ ನಾಚಿಕೆಯಾಗುತ್ತದೆ. ನೀವು ಅನ್ಯಥಾ ಭಾವಿಸ ಬಾರದು. ನನಗೆ ಒಂದು ಅಣಕವಾಡು ಬರುತ್ತದೆ.'

'ಬಹಳ ಒಳ್ಳೆಯದು, ಯಾವುದರ ಅಣಕ?'

'ಹೇಳುವುದಕ್ಕೆ ನಾಲಗೆ ಬರದು. ಅದು ಒಂದು ಪ್ರಾಣಿ....ನಿಕೃಷ್ಟ ಪ್ರಾಣಿಯದು.'

'ನಾಯಿ....'

'ಅಲ್ಲ....ಕ..ತ್ತೆ.'

'ಭಲೆ! ಶಹಭಾಸ್! ಕತ್ತೆಯನ್ನು ಅನುಕರಿಸಬಲ್ಲವರು ಬಹಳ ಅಪರೂಪ. ನೀವು ನಿಜವಾಗಿಯೂ ಮೇಧಾವಿಗಳಿರಬೇಕು. ಧೀರರಿರಬೇಕು. ಅದರ ಕೂಗು ಇತರ ಪ್ರಾಣಿಗಳ ಹಾಗಲ್ಲ. ಹಠಾತ್ತಾಗಿ ಪ್ರಾರಂಭವಾಗಿ ತರಂಗತರಂಗವಾಗಿ ಹೊರಹೊಮ್ಮಿ ಹಿಗ್ಗುತಗ್ಗುಗಳನ್ನು ಹಾದು ದಿಗಂತವನ್ನೇ ಭೇದಿಸಿ ಅದು ಭೋಂಕರಿಸುತ್ತದೆ....ನಿಜವಾಗಿಯೂ ನಿಮ್ಮಲ್ಲಿ ಆ ಶಕ್ತಿ ಇದ್ದರೆ ನಿಮಗೆ ನಮ್ಮ ಕಂಪನಿಯಲ್ಲಿ ಚಾಕರಿ ಸಿದ್ಧ, ಏನೂ ಹೆದರಬೇಡಿ.'

ಹನುಮಂತನ ಕಣ್ಣಿಂದ ಒಂದು ತೊಟ್ಟು ನೀರು ಅವನ ಕೈಮೇಲೆ ಬಿತ್ತು.

'ಆದರೆ, ಕಾಲೇಜು, ಸ್ಕೂಲುಗಳಲ್ಲಿ ಆಗಲೇ ಅನೇಕ ಸಾರಿ ನೀವು ಕಿರಿಚಿದ್ದೀರೋ?'

'ಇಲ್ಲ ಇಲ್ಲ..... ಇಡೀ ಪ್ರಪಂಚದಲ್ಲಿ ಒಬ್ಬರು ಹೊರತು ಇನ್ನು ಯಾರೂ ನನ್ನ ಅನುಕರಣವನ್ನು ಕೇಳಿಲ್ಲ....'

'ಅವರು ಯಾರು? ನಿಮ್ಮ ಪತ್ನಿಯೋ?'

ಹನುಮಂತನ ಕಣ್ಣಿಂದ ಮತ್ತೊಂದು ತೊಟ್ಟು ನೀರು ಅವನ ಕೈ ಮೇಲೆ ಬಿತ್ತು.

'ಅಲ್ಲ ಅಲ್ಲ....ನನಗೆ ಮದುವೆಯೇ ಆಗಿಲ್ಲ. ನನ್ನ ಸ್ನೇಹಿತ.... ಮೃತ್ಯು....ಅವನು ಮಾತ್ರ ಅನೇಕ ಸಾರಿ ಕೇಳಿ ಕುಣಿದಾಡಿದಾನೆ.'

'ಒಳ್ಳೆದಾಯಿತು. ನಿಮಗೆ ಮದುವೆಯಾಗದೇ ಇರುವುದೂ ಒಂದು ದೊಡ್ಡ ಅನುಕೂಲ. ಏಕೆಂದರೆ, ನಾವು ಇಂಡಿಯಾ, ಬರ್ಮಾ, ಸಿಲೋನ್, ಸಿಂಗಪುರ್ ಹೀಗೆ ದೇಶದೇಶಗಳಲ್ಲಿ ಸುತ್ತುತ್ತಾ ಇರುತ್ತೇವೆ.' ಹನುಮಂತನ ಕಣ್ಣುಗಳು ಸಂತೋಷದಿಂದ ಮಿಣುಕಿದುವು.

'ನಾಳೆಯಿಂದಲೇ ಕೆಲಸ ಸಿಕ್ಕರೆ ನನಗೆ ಅನುಕೂಲ' ಎಂದು ಹನುಮಂತಗೋಗರೆದ. ಆದರೆ, ಪ್ರೊ. ಪಶುಪತಿಯವರು, 'ನೀವು ಕಿರಿಚುವುದನ್ನು ನಾನೊಂದು ಸಾರಿ ಕೇಳಬೇಡವೇನು ? ನಿಮ್ಮ ಸಾಮರ್ಥ್ಯದ ವಿಷಯ ನೀವು ಸಾವಿರ ಹೇಳುತ್ತೀರಿ, ಬಡತನದ ಆತುರದಿಂದ.... ಬನ್ನಿ.... ನನ್ನ ಕಾರಿನಲ್ಲಿ ಕುಳಿತುಕೊಳ್ಳಿ. ಸಂಪಿಗೆಕೆರೆ ಏರಿ ಮೇಲೆ ಹೋಗೋಣ. ಅಲ್ಲೇ ಒಂದೆರಡು ಸಾರಿ ಆಗಲಿ....' ಎಂದರು. ಮರುಮಾತನಾಡದೆ, ಹನುಮಂತ ಪಶುಪತಿಯವರ ಹಿಂದೆಯೇ ಕಾರಿನೊಳಕ್ಕೆ ಬಲಗಾಲು ಮುಂದಾಗಿ ಹತ್ತಿದ.. ಮೃತ್ಯುವಿನ ಸಂಗಡ ಕತ್ತೆದಿಬ್ಬಕ್ಕೆ ಹೋದ ದಿನಗಳ ನೆನಪುಗಳು ಒಂದೊಂದಾಗಿ ಅವನ ಅಂತರಂಗದಲ್ಲಿ ಮಿನುಗಿ ಮಾಯವಾದುವು..... ಸ್ನೇಹಿತನ ಮನಸ್ಸಂತೋಷಕ್ಕಾಗಿಯೂ, ಅವನೊಂದಿಗೆ ಮಾಡಿಕೊಂಡಿದ್ದ ಘೋರವಾದ ಒಡಂಬಡಿಕೆಯ ಸಲುವಾಗಿಯೂ ಇದು ವರೆಗೆ ಅವನು ಕಿರಿಚುತ್ತಿದ್ದ. ಈಗ ಕೆರೆ ಏರಿಯ ಮೇಲೆ ಭೂತ ಪ್ರೇತಗಳು ಮಾತ್ರ ತಿರುಗಾಡುವ ನಡುರಾತ್ರಿಯಲ್ಲಿ, ಹೊಟ್ಟೆಪಾಡಿಗೋಸ್ಕರ ಕಿರಿಚಿದರೆ, ಅಷ್ಟು ಸೊಗಸಾಗಿ ಕಳೆಕಟ್ಟುತ್ತದೋ ಇಲ್ಲೋ ಎಂದು ಅವನು ಹೆದರಿದನು.

'ಇದೇ ಸಂಪಿಗೆಕೆರೆ.... ಹೊರಗೆ ಬನ್ನಿ... ಒಳಗಿಂದ ಕಿರಿಚಿದರೆ, ನಿಮ್ಮ ಗಂಟಲ ಶಬ್ದಕ್ಕೆ ಹೆದರಿ ಇಂಜಿನ್ ಡಬ್ ಡಬ್ ಡಬ್ ಅಂತ ಹೊರಟು ಬಿಟ್ಟರೂ ಕಷ್ಟ....... ಕೊಂಚ ದೂರ ಹೋಗೋಣ' ಅಂತ ಪಶುಪತಿಯವರು ಮುಂದಕ್ಕೆ ಹೊರಟರು....

ಹನುಮಂತ ತನ್ನ ಕೆಲಸವನ್ನ ಸಾಂಗವಾಗಿ ನೆರವೇರಿಸಿದ . . . ದೇವರ ಕೃಪೆಯಿಂದ ಸಾಕ್ಷಾತ್ ಕತ್ತೆಗಿಂತ ಚೆನ್ನಾಗಿಯೇ ಇತ್ತು ಅವನು ಕಿರಿಚಿದ್ದು . . ತನ್ನ ಬಾಯಿಗಾರಿಕೆಯಿಂದ ಪಶುಪತಿಗೆ ಸಂತೋಷವಾಯಿತೆ, ಕೆಲಸ ಕೊಡುತ್ತಾರೆಯೇ, ಎಂದು ಅವರ ಮುಖಭಾವದಿಂದ ತಿಳಿದುಕೊಳ್ಳಲಾಗಲಿಲ್ಲ; ಕತ್ತಲೆ . . . . ಕೊಂಚ ಹೊತ್ತಾದ ಮೇಲೆ, 'ಬನ್ನಿ . . . ಹೊತ್ತಾಯಿತು' ಎಂದು ಹೇಳುತ್ತಾ, ಅವರು ಕಾರನ್ನು ಊರ ಕಡೆ ತಿರುಗಿಸಿದರು . . . . . . 'ಚೆನ್ನಾಗಿದೆ ಅಂತ ಇವರು ಹೇಳಲಿಲ್ಲವಲ್ಲಾ . . . . ಪ್ರೊಗ್ರಾಮುಲ್ಲಿ ಸೇರಿಸುವುದಕ್ಕೆ ಲಾಯಕ್ಕಿಲ್ಲವೋ, ಏನೋ? ಮೃತ್ಯು ಇದ್ದಿದ್ದರೆ ಎಷ್ಟು ಸಂತೋಷ ಪಡುತ್ತಿದ್ದನೋ? ಈತ ಮೃತ್ಯುವಿಗಿಂತ ಕೀಳು! 'ಬನ್ನಿ . . . . . ಹೊತ್ತಾಯಿತು' ಅಷ್ಟು ಮಾತ್ರ ಹೇಳಿದರಲ್ಲಾ, ಇದರ ತಾತ್ಪರ್ಯವೇನು? ಕೆಲಸಗಿಲಸ ಸಿಕ್ಕುವ ಹಾಗಿಲ್ಲ' ಅಂತ ನಡುಗುತ್ತಾ, ಹನುಮಂತ ಹೋಟಲ್ ಬಾಗಿಲಲ್ಲೇ ಕಾರಿಂದ ಇಳಿದ . . . . ಹೋಟಲ್ ಬಾಗಿಲಲ್ಲಿ ಆತನೂ ಕಾರಿಂದ ಇಳಿದು ಹನುಮಂತನ ಕೈಯನ್ನು ಕುಲುಕಿದ! 'ನಾಳೆ ಹತ್ತು ಘಂಟೆಗೆ, ಬೆಳಗ್ಗೆ ಹತ್ತು ಘಂಟೆಗೆ ನನ್ನನ್ನು ಬಂದು ಕಾಣಿ!' ಎಂದರು . . . . ಪ್ರೀತಿ ವಿಶ್ವಾಸಗಳಿಂದ ಅವರ ಕೈ ಬೆಚ್ಚಗಿತ್ತು . . . ಹನುಮಂತನ ಆಸೆ ಚಿಗುರಿತು.

ಹಗಲೆಲ್ಲಾ ದುಡಿದು ತ್ರಾಸ ಹತ್ತಿ ಹೆಣದಂತೆ ಮಲಗಿದ್ದ ಆಳುಗಳನ್ನು ಹೊರಗಿಂದ ಕೂಗಿ ಎಬ್ಬಿಸಿ, ಹನುಮಂತ ತನ್ನ ಕೋಣೆ ಬಾಗಿಲಿಗೆ ಹೋಗಿ, ಬೀಗ ತೆಗೆಯಲು ಪ್ರಯತ್ನಿಸಿದ. ಕತ್ತಲೆ . . . . . ಆಗ, 'ರಾಮರಾಮಾ! ಒಂದು ಇಲೆಕ್ಟ್ರಿಕ್ ದೀವಟಿಕೆ ತೆಗಿದುಕೊಳ್ಳಬೇಕು, ನೀವು. ರಾತ್ರಿಹೊತ್ತು ಅಲ್ಲಿ ಇಲ್ಲಿ ತಿರುಗುವವರ ಹತ್ತಿರಕ್ಕೆ ಅಂತಹದ್ದೊಂದು ಇದ್ದೇ ಇರಬೇಕು . . ಹ. . ಹ್ಹ. . ಹ್ಹ. . ಇನ್ನೇನೂ ತಿಳಿದುಕೊಳ್ಳಬೇಡಿ. . . .' ಅಂದರು, ಪಕ್ಕದ ಕೋಣೆಯವರು. ಅವರೇ ಬೀಗವನ್ನು ತೆಗಿದುಕೊಟ್ಟರು. ಹನುಮಂತ ಧಢಾರ್ ಅಂತ ಬಾಗಿಲು ಹಾಕಿಕೊಂಡ. . . .

ಸದ್ಯಃ ಏಜಂಟರ ಮಾತಿಗೆ ಬಡಿಯಲಿಲ್ಲ. ಅವರು ಹೊರಗಿಂದಲೇ, 'ರಾಮರಾಮಾ! ಇಷ್ಟು ಅವಸರವೇನು? ತಮಗೆ ನಿದ್ದೆ ಅಂತ ಹೇಳಿಬಿಟ್ಟಿದ್ದರೆ ನಾನೇ ಹೊರಟು ಹೋಗುವೆ. . . . ಸರ್ಕಸ್ ವಿಷಯ ಇಬ್ಬರೂ ಸೇರಿ ಮಾತನಾಡಲಿಲ್ಲವಲ್ಲಾ, ಕೊಂಚ ಹೊತ್ತು ಹರಟೆ ಹೊಡೆಯುತ್ತೀರೋ

ಅಂತ ಇದ್ದೆ..ಅದಕ್ಕೇನು? ಬೆಳಗ್ಗೆ ಕಾಣುತ್ತೇನೆ....ಗುಡ್ ನೈಟ್.. ಸ್ವಾಮಿ!..ಗುಡ್ ನೈಟ್..ರಾಮರಾಮಾ! ಗುಡ್ ನೈಟ್ ಅಂತ ನೀವು ಒಂದು ಸಾರಿ ಅಂದುಬಿಡಬಾರದೆ?..ಹಾಗೆ..ಹಾಗೆ..ಸಾಕು..ಇನ್ನು ನಾನು ಹೋಗುತ್ತೇನೆ..ಗುಡ್ ನೈಟ್.'

ಬೆಳಗಿನ ವರೆಗೂ ಹನುಮಂತನಿಗೆ ನಿದ್ದೆ ಬರಲೇ ಇಲ್ಲ. ತನ್ನ ಅದು ವರೆಗಿನ ಬದುಕನ್ನು ಮನದಲ್ಲೇ ಮೆಲುಕು ಹಾಕುತ್ತಾ ಮಲಗಿದ್ದ, ಅಷ್ಟೆ. ಕಡೆಗೆ, ಆರು ಆರೂವರೆ ಗಂಟೆ ಹೊತ್ತಿಗೆ, ಕೇವಲ ಆಲಸ್ಯದಿಂದ ರೆಪ್ಪೆಗಳು ಭಾರಗೊಂಡು ನಿದ್ದೆ ಮಾಡಲೇಬೇಕಾಯಿತು....

ಎಚ್ಚರವಾದಾಗ ಹೋಟಲ್ ಗಡಿಯಾರದಲ್ಲಿ ೯-೩೫ ಆಗಿಬಿಟ್ಟಿತ್ತು.. ಥಟಕ್ಕನೆದ್ದು, ಮುಖ ತೊಳೆದು, ಕಾಫಿ ಕುಡಿದು, ಅಂಗಿ ಟೋಪಿ ಹಾಕಿ ಕೊಂಡು ಅವಸು ಲಲಿತಾದ್ರಿಪುರಕ್ಕೆ ನಡೆದ. ಪಶುಪತಿಯುವರು ಅವನಿ ಗಾಗಿಯೇ ಕಾದು ನಿಂತಿದ್ದರು. 'ಬನ್ನಿ! ಒಳಗೆ ಕುಳಿತುಕೊಳ್ಳಿ..ಇಕೊ ಬಂದೆ' ಎಂದು ಹೇಳುತ್ತಾ ಅವರು ಮತ್ತೊಬ್ಬ ಅಧಿಕಾರಿಗಳನ್ನು ಕರೆಸಿ ದರು.... ಇಬ್ಬರೂ ಒಟ್ಟಿಗೆ ಒಳನುಗ್ಗಿದರು. 'ಇವರೇ ನಮ್ಮ ಕಂಪನಿ ಯಲ್ಲಿ ಮೃಗಗಳನ್ನು ಪಳಗಿಸುವುದು, ಆಡಿಸುವುದು ಮುಂತಾದ ಎಲ್ಲಾ ಕಾರ್ಯಗಳಿಗೂ ಅಧಿಕಾರಿಗಳು..ಇವರ ಹೆಸರು ಮಿಸ್ಟರ್ ಚಬುಕು.... ಇವರು ನಿಮ್ಮೊಂದಿಗೆ ಮಾತನಾಡುತ್ತಾರೆ' ಎಂದು ಹೇಳಿ ಪಶುಪತಿಯವರು ಹೊರಟು ಹೋದರು.

ಹನುಮಂತ ಎದ್ದು ನಿಂತು ಅವರಿಗೆ ನಮಸ್ಕಾರ ಮಾಡಿದನು.... 'ಬಡತನದ ದೆಸೆಯಿಂದ ತಾನೂ ಕೂಡ ಒಂದು ಮೃಗವಾಗಬೇಕಾಗಿ ಬಂತು' ಎಂದು ಒಳಗೆ ಕುದಿಯುತ್ತಿತ್ತು....ಆದರೂ, ಕೈಜೋಡಿಸಿ, ತಲೆ ತಗ್ಗಿಸಿ, ನಮಸ್ಕಾರ ಮಾಡಿದ.

'ಕುಳಿತುಕೊಳ್ಳಿ! ನಿಮ್ಮ ವಿಶಯವೆಲ್ಲಾ ಪಸುಪತಿಯುವರು ಹೇಳಿ ದಾರೆ..ಬಹಳ ಶೆನ್ನಾಗಿ ನೀವು ಕತ್ತೆ ತರಹ ಕಿರಿಚುತ್ತೀರಿ ಅಂತ ಕೇಳಿದೆ... ನಾವು ನಿಮ್ಮನ್ನು ಕೆಲಶಕ್ಕೆ ಶೇರಿಶಿಕೊಳ್ಳುತ್ತೇವೆ..... ಆಟಕ್ಕೆ ಏಳೂವರೆ ರೂಪಾಯಿ ಕೊಡುತ್ತೇವೆ ನಿಮಗೆ..... ದಿನಕ್ಕೆರಡು ಆಟವಿದೆ ನಮ್ಮಲ್ಲಿ; ಏನು? ಆಗಬಹುದೋ?'

ಹನುಮಂತನಿಗೆ ಪರಮ ಸಂತೋಷ . ತಿಂಗಳಿಗೆ ಆರು ದಿನ ಸರ್ಕಸ್ ನಡೆದರೂ ಕೂಡ ತನಗೆ ೯೦ ರೂಪಾಯಿ ವರಮಾನ! ಅಯ್ಯೋ! ಮಾನವನ ನಾಗರಿಕತೆ ಎಷ್ಟು ಮುಂದುವರಿದಿದ್ದರೂ, ಯಾವ ಯಾವುದಕ್ಕೆ ಎಷ್ಟೆಷ್ಟು ಬೆಲೆ ಕಟ್ಟಬೇಕೆಂಬುದು ಅವನಿಗಿನ್ನೂ ತಿಳಿದಿಲ್ಲವಲ್ಲಾ, ಅಂತ ಅವನು ಮರು ಕ್ಷಣದಲ್ಲೇ ಕೊರಗಿದ. ಜಗತ್ತಿನ ಅಂತರಾತ್ಮನನ್ನೇ ಹೊರಹೊಮ್ಮಿಸಬಲ್ಲ ಕವಿಗಳಿಗೆ ಕೂಳಿಲ್ಲ; ಜಗತ್ತಿನ ಸೌಂದರ್ಯವನ್ನೇ ಕಡೆದುಕೊಡಬಲ್ಲ ಕಲೆ ಗಾರನಿಗೆ ಕದನ್ನ! ಎಂದು ಮರುಗಿದ.

'ಆಗಬಹುದು .... ಸೇರಿಬಿಡುತ್ತೇನೆ .... ಆದರೆ ....'

'ಹಣದ್ದೇನೂ ಯೋಚನೆ ಮಾಡಬೇಡಿ ನೀವು ....'

'ಅದಕ್ಕಲ್ಲ! ನನ್ನ ಫೋಟೋ....'

'ಅದಾಗುವುದಿಲ್ಲ....ನಿಮ್ಮನ್ನೂ ಕೂಡ ನಾವು ಡೇರಾದಲ್ಲಿರುವ ಜನಗಳಿಗೆ ತೋರಿಸುವುದಿಲ್ಲ..ನೀವು ಮನುಸ್ಯ ಅಲ್ಲ..ಬರೀ ಮೃಗ....'

'ಒಳ್ಳೆಯದೇ ಆಯಿತು. ನನ್ನ ಫೋಟೋ ಹಾಕಬಾರದು ಅಂತ ನಾನು ಕೇಳಿಕೊಳ್ಳುವುದರಲ್ಲಿದ್ದೆ..ಮೃಗ ಅಂದರೆ, ನನಗೆ ಕತ್ತೆಯ ವೇಷ ಹಾಕು ತ್ತೀರೇನು?'

ಇಲ್ಲ..ಇಲ್ಲ..ಕತ್ತೆ ಕಿರಿಚುತ್ತದೆ ಅಂದರೆ ಜನ ಕಾಶು ಕೊಡುತ್ತಾ ರೆಯೇ? ಕೊಡುವುದಿಲ್ಲ....ನಿಮಗೆ ಒಂದು ಕರಡಿ ಚರ್ಮ ಕೊಡುತ್ತೇನೆ. ನಿಮಗೆ ಕತ್ತೆ-ಕರಡಿ ಅಂತ ಹೆಸರು ಮಾಡುತ್ತೇನೆ..ಒಬ್ಬಳು ಪರಂಗಿ ಹೆಂಗಸು ಕರಡಿಯ ಮೂಗುದಾರ ಎಳೆದುಕೊಂಡು ನಿಮ್ಮನ್ನು ಡೇರದೊಳಕ್ಕೆ ತರು ತ್ತಾಳೆ..ವನ್. ಟೂ. ತ್ರೀ ಅನ್ನುತ್ತಾಳೆ. ಆಗ ನೀವು ಕಿರಿಚಿಬಿಡಬೇಕು.. ಹೊರಡುವಾಗ ಎಳೂವರೆ ರೂಪಾಯಿ ಕೊಟ್ಟುಬಿಡುತ್ತೇವೆ.

'ಕರಡಿ ಚರ್ಮವನ್ನು ಚೆನ್ನಾಗಿ ತೊಳೆದಿರುತ್ತೀರಾ?'

'ಕಿಲೀನಾಗಿರುತ್ತದೆ.'

'ಎಷ್ಟು ವರ್ಷ ನನ್ನನ್ನ ಇರಿಸಿಕೊಳ್ಳುತ್ತೀರಾ?'

'ನಿಮ್ಮ ಕತ್ತೆಕೂಗು ನಿನ್ನೆಯ ಹಾಗೆ ಇರುವ ತನಕ..ಅನುಮಾನ ಪಡಬೇಡಿ..ನಾಳೆ ಶಂಜೆ ೫ ಘಂಟೆಗೆ ಇಲ್ಲಿಗೆ ಬಂದುಬಿಡಿ....ಗಂಟಲು ಹಾಳುಮಾಡಿಕೊಳ್ಳಬೇಡಿ....'

ಹನುಮಂತ ಹೋಟಲಿಗೆ ಹಿಂತಿರುಗಿದ. ಇಷ್ಟು ಸುಲಭವಾಗಿ ಹಣ

ಸಂಪಾದಿಸಬಹುದೆಂದು ಅವನಿಗೆ ಗೊತ್ತಿರಲಿಲ್ಲ. ಕಾಲೇಜಲ್ಲಿ ಯಾರೂ ಅವನಿಗೆ ಇಂತಹ ಯುಕ್ತಿಯನ್ನು ಹೇಳಿಕೊಡಲಿಲ್ಲ. ಅಲ್ಲದೆ, ಇದ್ದದ್ದರಲ್ಲಿ ದೇವರು ಅವನಿಗೆ ಹೆಚ್ಚು ಅನುಕೂಲಗಳನ್ನೇ ಒದಗಿಸಿದಾನೆ. ಸರ್ಕಸ್ಸಿನಲ್ಲಿ ಕಿರಿಚುವುದು ತಾನು ಎಂದು ಒಬ್ಬರಿಗೂ ತಿಳಿಯುವ ಹಾಗಿಲ್ಲ; ಒಂದು ವೇಳೆ ಮೃತ್ಯು ಎಲ್ಲಾದರೂ ಕತ್ತೆ-ಕರಡಿಯನ್ನು ಕೇಳಿ ಇದರೊಳಗೆ ಹನುಮಂತನೇ ಇರಬೇಕೆಂದು ಅನುಮಾನಿಸಿದರೂ ಕೂಡ, ಅವನನ್ನ ಹೇಗೋ ಪುಸಲಾಯಿಸಿ ಕಳುಹಿಸಬಹುದು. 'ದಕ್ಷಿಣ ಅಮೇರಿಕದ ಕತ್ತೆ-ಕರಡಿ' ಎಂದು ಸರ್ಕಸ್ಸಿನವರು ಪ್ರಕಟಿಸಿರುವುದನ್ನು ಕಂಡರೆ, ಅವನು ನಂಬದೆ ಇರುವುದಿಲ್ಲ. ಅಚ್ಚಿನಲ್ಲಿ ಬಂದದ್ದೆಲ್ಲವೂ ನಿಜ ಅಂತ ನಂಬುವ ಬಡಪ್ರಾಣಿ ಅವನು....ಆಹಾ! ಎಷ್ಟು ಸುಲಭವಾದ ಉಪಾಯ ಹಣಸಂಪಾದನೆಗೆ! ಹನುಮಂತರಾಯ ಹನುಮಂತರಾಯನ ಹಾಗೆ ರಂಗಕ್ಕಿಳಿಯಬೇಕಾಗಿಲ್ಲ. ಕರಡಿ ಚರ್ಮದೊಳಕ್ಕೆ ಹೊಗುವುದು, ಕೊಂಚ ತೂಗಾಡುತ್ತಾ ತೂರಾಡುತ್ತಾ ಬಾಬಯ್ಯನ ಹಬ್ಬದ ಕರಡಿ ವೇಷದ ಹಾಗೆ ನಾಲ್ಕು ಹೆಜ್ಜೆ ನಡೆಯುವುದು, ಆಕೆ ವನ್, ಟೂ, ತ್ರೀ ಅಂತ ಕೀಚಲುಧ್ವನಿಯಲ್ಲಿ ಹೇಳುತ್ತಲೂ ಕತ್ತೆದಿಬ್ಬವನ್ನು ನೆನೆದುಕೊಂಡು, ದೇವರೇ ಗತಿ ಅಂತ ಒಂದು ಕೂಗು ಹಾಕುವುದು!.... ಏಳೂವರೆ ರೂಪಾಯಿ!

ಅಂತು ಈ ಸರ್ಕಸ್ ಚಾಕರಿ ಸಿಕ್ಕುವುದಕ್ಕೆ ಕಾರಣಭೂತನಾದ ಏಜಂಟರ ಕೋರಿಕೆಯಂತೆ ಐನೂರು ರೂಪಾಯಿನ ಒಂದು ಪಾಲಿಸಿಯನ್ನು ತೆಗಿಯಲೇಬೇಕೆಂದು ಹನುಮಂತ ತೀರ್ಮಾನಿಸಿದ.

'ಏನು ಸ್ವಾಮಿ, ಕೆಲಸ ಸಿಕ್ಕಿತೇ?' ಎಂದು ಕುಂಟಾವಧಾನಿಗಳು ಕೇಳಿದಾಗ 'ನಿಮ್ಮ ಹಣಕ್ಕೇನೂ ಮೋಸಮಾಡುವುದಿಲ್ಲ. ಯಾವಾಗ ಬೇಕಾದರೂ, ಬಿಸಾಕುತ್ತೇನೆ. ನೀವು ಯಾಕೆ ಹೆದರಿ ಸಾಯುತ್ತೀರಿ?' ಎಂಬ ಉತ್ತರ ಬಂತು. ಅವಧಾನಿಗಳು ಬೆಚ್ಚಿಬಿದ್ದರು, ಅರ್ಥಮಾಡಿಕೊಂಡರು. 'ಕ್ಷಮಿಸಬೇಕು' ಎಂದು ಹೇಳುತ್ತಾ ಅವರು ಒಬ್ಬ ಆಳನ್ನು ಕರೆದು, 'ಇಲ್ಲಿ ಬಾರೋ ಧಡಿಯಾ, ರಾಯರ ಕೋಣೆ ಗುಡಿಸಿ ಎಷ್ಟುದಿನವಾಯಿತೋ? ಅವರ ಬಟ್ಟೆ ಯಾವುದಾದರೂ ಇದ್ದರೆ ತೆಗಿದುಕೊಂಡು ಬಾರೋ. ಒಗೆದು ಹಾಕೋ.' ಎಂದು ಅಟ್ಟಿದರು.

ರಾಮರಾಮಾ ಎಂಬ ಮಂತ್ರ ಎಲ್ಲಿ ಕಿವಿಗೆ ಬೀಳುತ್ತದೋ, ಎಂದು ಹೆದರಿ ನಡುಗುತ್ತಾ ಹನುಮಂತ ಮೆಟ್ಟಲು ಹತ್ತಿದ. ಏಜಂಟರ ಕೋಣೆಗೆ ಬೀಗ ಹಾಕಿತ್ತು. ಬೇಗ ಬೇಗ ತನ್ನ ಕೊಠಡಿಯೊಳಕ್ಕೆ ನುಗ್ಗಿ ಹಾಸಿಗೆಯ ಮೇಲೆ ಬಿದ್ದುಕೊಂಡ. ತನಗೆ ಸಿಕ್ಕಿದ ಕೆಲಸದ ಅನುಕೂಲತೆಗಳನ್ನೇ ನೆನೆದು-ಕೊಳ್ಳುತ್ತಾ ಸಂಜೆತನಕ ಸವಿಗನಸುಗಳ ಮಾಲೆಯನ್ನು ಕಂಡು ಆನಂದಿ-ಸುತ್ತಾ ಸುಖವಾಗಿ ನಿದ್ದೆಮಾಡಿದ .... ಆಮೇಲೆ ಎದ್ದು ವಿಚಿತ್ರದುರ್ಗಕ್ಕೆ ಒಂದು ಕಾಗದ ಬರೆದ—ಸದ್ಯಕ್ಕೆ ತಾನು ಎಲ್ಲೋ ಒಂದು ಕಡೆ ಇರುವುದಾಗಿಯೂ ತನ್ನ ಯೋಗ್ಯತೆಗೆ ತಕ್ಕ ಒಂದು ಚಾಕರಿಯನ್ನು ಸಂಪಾದಿಸಿರುವುದಾಗಿಯೂ ಇನ್ನುಮೇಲೆ ತಾನು ಊರಿಗೆ ಹಿಂತಿರುಗುವುದಿಲ್ಲವೆಂದೂ ತನಗೂ ಮೇಜರ್ ಭೀಮರಾಯರ ಮಗಳಿಗೂ ಮದುವೆಯಾಗಿಲ್ಲವೆಂದೂ ಆಕೆಯನ್ನು ಯಾರಿಗೆ ಬೇಕಾದರೂ ವಿವಾಹಮಾಡಿಕೊಡಬಹುದೆಂದೂ, ತಾನು ಬರ್ಮಾ, ಸಯಾಂ, ಜಾವಾ ಮುಂತಾದ ದೇಶಗಳಿಗೆ ಹೋಗಬೇಕಾಗಿರುವುದೆಂದೂ, ತನ್ನನ್ನು ಹುಡುಕಿ ಪ್ರಯೋಜನವಿಲ್ಲವೆಂದೂ, ಹುಡುಕದೆ ಇದ್ದರೆ ಮಾತ್ರ ತಿಂಗಳಿಗೆರಡು ಕಾಗದ ಕಳುಹಿಸುವೆನೆಂದೂ, ಮನೆ ಖರ್ಚಿ-ಗಾಗಿ ತಾನು ಎಲ್ಲಿದ್ದರೂ ತಿಂಗಳಿಗೆ ಹದಿನೈದು ರೂಪಾಯಿ ಮನಿಯಾರ್ಡರು ಮಾಡುವೆನೆಂದೂ ಸವಿಸ್ತಾರವಾಗಿ ಬರೆದ. ಇತಿ ನಿಮ್ಮ ದಡ್ಡ ಮಗ ಎಂದು ಕಾಗದವನ್ನು ಪೂರೈಸಿದ. ಅದನ್ನು ಮತ್ತೊಮ್ಮೆ ಓದಿದಾಗ ೧೫ನ್ನು ೨೦ ಎಂದು ತಿದ್ದಿದ, ಅವಳಿಜವಳಿಯ ನೆನಪಾದದ್ದರಿಂದ. ' ಬಹುಶಃ ಶೀನನಿಗೆ ನನ್ನ ' ಇಂದಾ-ಗೆ ' ಚಾಕರಿ ಕೊಡಿಸಿರುತ್ತಾರೆ; ಗೋಳಪ್ಪನವರನ್ನು ಗೋಗರೆದು ೨೫ ಗಿಟ್ಟಿಸಿದ್ದರೂ ಇರಬಹುದು. ಅವನಿಗಿಂತ ನಾನೇ ವಾಸಿ ಅಂತ ಅಪ್ಪನಿಗೆ ಅನ್ನಿಸಲಿ.' ಎಂದು ಹೇಳುತ್ತಾ ೨೦ನ್ನು ಹೊಡೆದು ೩೦ ಮಾಡಿದ. ದಡ್ಡ ಎಂಬುದನ್ನು ದೊಡ್ಡ ಅಂತ ತಿದ್ದಿದ. ಥು! ಕಾಗದ ಕೆಟ್ಟುಹೋಯಿತು. ನಾಳೆಯೋ ನಾಳದ್ದೋ ಮತ್ತೊಂದು ಪ್ರತಿ ತೆಗೆದು ಕಳುಹಿಸೋಣ. ಈಗಲೇ ಬೇಡ. ಒಂದೆರಡು ದಿವಸ ಸಂಪಾದನೆ ಆಗಲಿ. ' ಎಂದು ಅನುಮಾನಿಸಿ ಬರೆದ ಕಾಗದವನ್ನು ಮಡಿಸಿ ಹರಿದು ಚೂರುಗಳನ್ನು ಕಿಟಕಿಯ ಮೂಲಕ ಗಾಳಿಯಲ್ಲಿ ಹಾರಾಡಿಸಿದ. . ' ಹರಿಯಬಾರದಾಗಿತ್ತು. ಕಳುಹಿಸಿ ಬಿಡಬೇಕಾಗಿತ್ತು. ಅಮ್ಮ ಎಷ್ಟು ಅಳುತ್ತಾಳೋ, ಇರಲಿ. ನಾಳೆ ಇನ್ನೊಂದು

ಒರೆಯ-ಲೇ ಬೇಕು.' ಎಂದು ಹೇಳಿಕೊಂಡು ಮತ್ತೆ ಹಾಸಿಗೆಯಲ್ಲಿ ಹೊರಳಾಡಿದ.

'ರಾಮರಾಮಾ, ಬಾಗಿಲಿಗೆ ಚಿಲುಕ ಬೇರೆ ಹಾಕಿಕೊಂಡುಬಿಟ್ಟಿರಾ? ರಾಯರೇ,' ಎಂದು ಏಜಂಟರು ಹೊರಗೆ ಆರ್ಭಟಮಾಡಿದರು. ಪಾಪ, ಇವರೇ ನನ್ನ ಸರ್ಕಸ್ಸಿಗೆ ಕರೆದುಕೊಂಡು ಹೋದವರು ಎಂದು ಯೋಚಿಸುತ್ತಾ ಹನುಮಂತ ಎದ್ದು ಬಾಗಿಲು ತೆರೆದು, 'ಬನ್ನಿ ಬನ್ನಿ' ಅಂದ. 'ರಾಮರಾಮಾ, ತಮ್ಮ ಕೆಲಸ ತಾವು ಮಾಡಿ, ನನಗೋಸ್ಕರ ಏಳಬೇಡಿ. ಸುಮ್ಮನೆ ಕೂಗಿದೆ, ಅಷ್ಟೆ. ಬೆಳಗ್ಗಿಂದ ನೋಡಲೇ ಇಲ್ಲವಲ್ಲಾ, ಹೇಗಿದ್ದೀರಿ? ಮೈಯಲ್ಲಿ ಸ್ವಸ್ಥವೇ? ಊಟವಾಯಿತೇ?' ಎಂದು ಅವರು ಪ್ರೀತಿಯಿಂದ ವಿಚಾರಿಸಿದರು.

'ನಾನೂ ನಿಮ್ಮನ್ನೇ ನೋಡಬೇಕು ಅಂತ ಇದ್ದೆ.'

'ರಾಮರಾಮಾ, ಸಿದ್ಧವಾಗಿದೇನಲ್ಲಾ ತಮ್ಮ ಅಪ್ಪಣೆ ನಡೆಸುವುದಕ್ಕೆ. ಹೇಳೋಣವಾಗಲಿ. ಸರ್ಕಸ್ಸಿಗೆ....' ಹನುಮಂತ ಬೆಚ್ಚಿದ.

'ಹೋಗಬೇಕಾದರೆ ಇವತ್ತು ಬೇಡ. ನಾಳೆ ಹೋಗೋಣ. ಅದೇನು ಮಹಾ ಪ್ರಮಾದ, ನಾಳೇನೂ ಟಿಕೀಟು ಸಂಪಾದಿಸಿಕೊಂಡು ಬರುತ್ತೇನೆ. ಅದೂ ಅಲ್ಲದೆ, ನಾಳೆ ಯಾವುದೋ ಒಂದು ಹೊಸ ಪ್ರಾಣಿಯನ್ನ ತೋರಿಸುತ್ತಾರಂತೆ. ಯಾವುದೋ ದೇಶದ ಕರಡಿಯಂತೆ. ತಮ್ಮಂಥಹ ವಿದ್ವಾಂಸರಿಗೆ ಯಾವ ಕರಡಿ ಎಂದು ಗೊತ್ತೇ ಇರಬೇಕು....ಅದು....ಹೇಳುವುದಕ್ಕೆ ನಾಚಿಕೆಯಾಗುತ್ತದೆ. ನೋಟೀಸ್‌ನಲ್ಲಿ ಹಾಕಿದಾನೆ. ಆದ್ದರಿಂದ ನಿಜವಿರಬೇಕು....ಹೇಳುವಾಗ ನಗು ಬರುತ್ತವೆ......ನಂಬಿದರೆ ನಂಬಿ, ಬಿಟ್ಟರೆ ಬಿಡಿ....ಅದು ಕತ್ತೆ ಹಾಗೆ ಕಿರಿಚುತ್ತದಂತೆ. ನಾಳೆ ಹೋಗೋಣ.'

ಹನುಮಂತ ಮಾತನಾಡಲಿಲ್ಲ. ವಿಧವಿಧವಾದ ಭಾವನೆಗಳು ಅವನನ್ನು ತಲ್ಲಣಿಸುತ್ತಿತ್ತು.

'ರಾಮರಾಮಾ, ಕರಡಿ ಎಂಬ ಕಾಡುಮೃಗ, ಕತ್ತೆ ಎಂಬ ನಾಡು ಮೃಗದಂತೆ ಕಿರಿಚುತ್ತದೆ ಅಂದಮೇಲೆ ಅದನ್ನು ನೋಡುವುದಕ್ಕೆ ತಮಗೆ ಭಯವೋ? ಅಸಹ್ಯವೋ? ಓಹೋ ತಿಳಿಯಿತು. ನನ್ನ ಜೊತೆಯಲ್ಲಿ ಬರುವು

ದಕ್ಕೆ ನಿಮಗೆ ನೂರೆಂಟು ಕೆಲಸ......ಇದ್ದೇ ಇರುತ್ತವೆ. ದೊಡ್ಡವರು ಅಂದ ಮೇಲೆ. ಚಿಂತೆಯಿಲ್ಲ. ನೀವು ಬರದೇ ಇದ್ದರೆ ಬಿಡಿ. ಏನು ಮಹಾ ಕೊಳ್ಳೆ ಹೋಗುವುದು? ನಾನು ಒಬ್ಬನೇ ಹೋಗಿ ಕತ್ತೆ-ಕರಡಿ ವಿಷಯವನ್ನ ನಿಮಗೆ ಬಂದು ತಿಳಿಸುತ್ತೇನೆ.'

ಹನುಮಂತ ಎಲ್ಲೋ ನೋಡುತ್ತಾ ಮಂಚದ ಮೇಲೆ ಕುಳಿತಿದ್ದ.

—

## ಹದಿನಾಲ್ಕನೆಯ ಅಧ್ಯಾಯ

### ಶುಭಸ್ಯ ಶೀಘ್ರಂ

●

ಆಗೆನ್ನ ನೆನೆಯದಿರು ಮರೆತುಬಿಡು ನೀನು —ಪುಟ್ಟಪ್ಪ

ಕೈಮೀರಿ ಹೋಯ್ತು ಹಿಂದಿನದೀಗ
ಶುಭಮಕ್ಕೆ ಮುಂದೆ ಬರಲಿಹುದು —ಶ್ರೀ

" ಹಿಂದಿನ ಕಾಲವು ಹಿಂದಕೆ " ಅನ್ನಿ
ಮುಂದಿನ ಕಾಲವು ನಮ್ಮುಂದೆ —ದಿನಕರ ದೇಸಾಯಿ

●

ಹನುಮಂತ ತಲೆತಪ್ಪಿಸಿಕೊಂಡು ಓಡಿಹೋದದ್ದು ವಿಚಿತ್ರದುರ್ಗದ ಜನರ ಮೆಲ್ಲುವ ಬಾಯಿಗೆ ಅವಲಕ್ಕಿ ಹಾಕಿದ ಹಾಗಾಯಿತು. ಒಬ್ಬರು ಒಂದೊಂದು ರೀತಿಯಾಗಿ ಎರಡು ಮನೆತನದವರನ್ನೂ ಟೀಕಿಸಿದರು. ಪುರೋಹಿತರಲ್ಲೇ ಒಂದು ದೊಡ್ಡ ಮಾರಾಮಾರಿ ಹುಟ್ಟಿಕೊಂಡಿತು. ಮದುವೆ ಚಪ್ಪರದಲ್ಲೇ ಹೊಗೆಯಾಡುತ್ತಿದ್ದ ಆ ಜಗಳ ಬೀದಿಗಿಳಿಯಿತು; ಕೆರೆ, ಕಟ್ಟೆ, ಬಾವಿ, ಗುಡಿಗಳಲ್ಲಿ ಬೆಳೆಯಿತು; ಚರಂಡಿಗೂ ಉರುಳಿತು. ಟೈಗರ್ ಸುಬ್ಬು ಶಾಸ್ತ್ರಿಗಳ ಮಗ ಯಜ್ಞೇಶ ಆ ದಿನ ಮಾಡಿದ ಭ್ರಷ್ಟ ಕೆಲಸಗಳಿಗೆ ಲೆಕ್ಕವೇ ಇಲ್ಲವೆಂದು ಬೆಕ್ಕುಕಣ್ಣಿನ ಸಂಜುಂಡಶಾಸ್ತ್ರಿ ಊರಿಗೆಲ್ಲಾ ಹೇಳುತ್ತಾ ಬಂದ. ಪಾಪ, ಆ ದಿನ ಸುಬ್ಬುಶಾಸ್ತ್ರಿಗಳು ಹೆಚ್ಚು ವರಮಾನದ ಬೇರೊಂದು ಮದುವೆಗೆ ಹೋದದ್ದೇ ತಪ್ಪಾಯಿತು. ನಾಲ್ಕು ದಿವಸಗಳನ್ನೂ ಕಳೆದುಕೊಂಡು ಅವರು ವಿಚಿತ್ರದುರ್ಗಕ್ಕೆ ಬಂದಾಗ ಕುರುಕ್ಷೇತ್ರಕ್ಕಾಗಿ ಕತ್ತಿ ಮಸೆದು

ಸಿದ್ಧರಾಗಿದ್ದ ಉಭಯ ಪಕ್ಷದವರನ್ನೂ ಕಂಡು ನಡುಗಿದರು. ಭಾಷಿಂಗದ ಬದಲಾವಣೆ ದೊಡ್ಡ ಅನಾಹುತವಲ್ಲ, ತಾವೇ ಎಷ್ಟೋ ಸಾರಿ ಅಪ್ಪಿತಪ್ಪಿ ಹಾಗೆ ಮಾಡಿದ್ದುಂಟು ಎಂದು ಶಾಸ್ತ್ರಿಗಳು ವಾದಿಸಿದರು. ಜನಾಭಿಪ್ರಾಯವೂ ಕೂಡ ಈ ವಿಷಯದಲ್ಲಿ ಅವರ ಪಕ್ಷದಲ್ಲೇ ಇತ್ತು. ಆ ಒಂದು ಸಣ್ಣ ಅಚಾತುರ್ಯಕ್ಕಾಗಿ ಗಂಡ ಹೆಂಡಿರನ್ನು ಬೇರಿರಿಸುವುದು ಅನ್ಯಾಯ, ಮಹಾ ಪಾಪ ಎಂದು ಎಲ್ಲರೂ ಒಪ್ಪಿದರು.

ಆದರೆ, ನಂಜುಂಡಶಾಸ್ತ್ರಿ ಅಷ್ಟಕ್ಕೇ ಸುಮ್ಮನಾಗಲಿಲ್ಲ. ಯಜ್ಞೇಶು ಆ ದಿನ ಮದುವೆ ಮನೆಗೆ ತಂದಿದ್ದ ಕೆಂಪು ರಟ್ಟಿನ ಪುಸ್ತಕ ಹೊರಕ್ಕೆ ಬರಲಿ! ಉದ್ದಕ್ಕೂ ಅವನು ಆ ಪುಸ್ತಕದಿಂದಲೇ ಮಂತ್ರಗಳನ್ನು ಹೇಳಿದನಲ್ಲಾ! ಅದನ್ನು ಈಚೆಗೆ ತೆಗೆಸಿ ಎಂದು ಟೈಗರ್ ಮನೆ ಮುಂದೆ ನಿಂತುಕೊಂಡು ನಂಜುಂಡಶಾಸ್ತ್ರಿ ಗರ್ಜಿಸಿದ. ಕೆಲವು ಜನ ಪುಂಡರು ಆ ಮನೆ ಒಳಕ್ಕೆ ನುಗ್ಗಿ ಸದರಿ ಪುಸ್ತಕವನ್ನು ಹುಡುಕಿ ತಂದೇ ಬಿಟ್ಟರು. ಅದನ್ನು ಬಿಚ್ಚಿ ನೋಡಿದರೆ—ಋಷಿಪಂಚಮಿ ವ್ರತದ ಮಂತ್ರಗಳು! ಸುಬ್ಬುಶಾಸ್ತ್ರಿಗಳು ಮಗನ ಕಪಾಳಕ್ಕೆ ಬಿಸಿಬಿಸಿಯಾಗಿ ಎರಡು ಮೂರು ಬಿಗಿದರು. ಕೆಂಪು ರಟ್ಟಿನ ಪುಸ್ತಕದಿಂದಲೇ ಅವನ ಮಸ್ತಕದ ಮೇಲೆ ಐದಾರು ಬಿಟ್ಟರು. 'ತಾಳಿ ತಾಳಿ ಈಗಲೇ ಅವನನ್ನು ಹತ ಮಾಡಬೇಡಿ, ಇದೇ ತರಹದ್ದು ಇನ್ನೊಂದು ಪುಸ್ತಕ ಇದೆಯೋ ಏನೋ ನೋಡೋಣ.' ಎಂದು ಹೇಳುತ್ತಾ ಕೆಲವರು ಮತ್ತೆ ಮನೆಯನ್ನು ಪ್ರವೇಶಮಾಡಿದರು. ಅಟ್ಟ, ಪೆಟ್ಟಿಗೆ, ಬೀರು, ದೇವರ ಕೋಣೆ ಎಲ್ಲವನ್ನೂ ಕೀಳು ಮೇಲು ಮಾಡಿ ಮತ್ತೊಂದು ಪುಸ್ತಕ ವನ್ನು ಸಂಪಾದಿಸಿ ತಂದರು—ಕೆಂಪು ರಟ್ಟು!....ತೆಗೆದು ನೋಡಿದರೆ— ಚೌಳದ ಮಂತ್ರಗಳು! ಟೈಗರ್ ಸುಬ್ಬುಶಾಸ್ತ್ರಿಗಳು ಮಗನನ್ನು ಹೊಡೆದು ಬಡಿದು ಒದ್ದು ಗುದ್ದಿ 'ಚಂಡಾಲ, ಮೂರ್ಖ, ಹೂಣ, ಮ್ಲೇಚ್ಛ' ಎಂದು ಮುಂತಾಗಿ ಬೈದು ತಮ್ಮ ಕೋಪವನ್ನು ಶಮನಮಾಡಿಕೊಂಡರು. ಇನ್ನು ಮೇಲೆ ಹಣದಾಸೆಯಿಂದ ಊರು ಬಿಟ್ಟು ಎಲ್ಲಿಗೂ ಹೋಗುವುದಿಲ್ಲವೆಂದು ಎಲ್ಲರ ಮನೆ ಬಾಗಿಲಿಗೂ ಹೋಗಿ ಹೇಳಿ ಮಾನ ಉಳಿಸಿಕೊಂಡರು. ಲಲಿತು ವಿಗೆ ಪ್ರಾಯಶ್ಚಿತ್ತರೂಪವಾಗಿ ಪುಣ್ಯಾಹವಾಚನವನ್ನು ಮಾಡಿದರು. ಯಜ್ಞೇಶು ಊರು ಬಿಟ್ಟು ಓಡಿಹೋಗಿ ಕೊಬ್ಬಳ್ಳಿ ರೈಲ್ವೇ ವರ್ಕ್‌ಷಾಪ್

ಸೇರಿಕೊಂಡ. 'ನನ್ನ ಪಾಪಶೇಷ. ಇಂತಹ ಚಂಡಾಲ ನನ್ನ ವಂಶದಲ್ಲಿ ಹುಟ್ಟಿದ!' ಎಂದು ತಲೆ ಚಚ್ಚಿಕೊಳ್ಳುತ್ತಾ ಸುಬ್ಬುಶಾಸ್ತ್ರಿಗಳು ಪ್ರಾಯಶ್ಚಿತ್ತವಾಗಿ ಒಂದು ಲಕ್ಷ ಗಾಯತ್ರಿಯನ್ನು ಜಪಿಸಿ ಪುನೀತರಾದರು.

ಆ ದಿನ ರಾತ್ರಿ ಹನುಮಂತ ಹೊರಟುಹೋದುದಕ್ಕೆ ತಾವೇ ಒಂದು ವಿಧದಲ್ಲಿ ಕಾರಣರೆಂದು ಭೀಮರಾಯರು ಮನಗಂಡರು. ಟಾಕ್ಸಿಯವನಿಗೆ ಮೊದಲೇ ಹೇಳಿರಬೇಕಾಗಿತ್ತು, ತಿಂಗಳೂರಿಂದ ಕೊಡೆ ತರಿಸಬೇಕಾಗಿತ್ತು; ಬಡಿಸುವುದಕ್ಕೆ ಸ್ವಯಂಸೇವಕರನ್ನು ನೆಚ್ಚಬಾರದಾಗಿತ್ತು, ಎಂದೆಲ್ಲಾ ಅವರು ತಿಳಿದುಕೊಂಡರು....ತನ್ನ ಹಲಕೆಲವು ದುಡುಕು ಮಾತುಗಳಿಂದ ಇಷ್ಟೊಂದು ಬಿರುಸಾದ ಬಿರುಗಾಳಿ ಏಳುತ್ತದೆ ಅಂತ ಜಯಲಕ್ಷ್ಮಮ್ಮನವರಿಗೂ ತಿಳಿಯದಂತೆ. 'ಮದುವೆ ಅಂದರೆ ಬೀಗಬೀಗರಿಗೆ ಜಗಳ ಆಗಬೇಕಾದದ್ದು ಅಂತ ಹಿರಿಯರು ಹೇಳುತ್ತಾರಲ್ಲಾ ಅಂತ ನಾನು ಏನೋ ನಾಲ್ಕು ಮಾತು ಹಾಗಂದರೆ....' ಅಂತ ಅವರು ತಮ್ಮ ತಪ್ಪನ್ನಿ ತೋಳಿಂದ ಳಿಸಲು ಪ್ರಯತ್ನಿಸಿದರು....'ನಮ್ಮದೂ ತುಂಬಾ ತಪ್ಪಿದೆ ಅಂದರೆ! ಈ ಹುಡುಗ ಎಲ್ಲಾ ಬಿಟ್ಟು ಆ ದಿನವೇ ಅವರ ಮನೆಯಲ್ಲೇ ಬೆಳ್ಳಿಕಪ್ಪು ಕದಿಯಬೇಕೆ? ಅದೂನೂ ಒಂದಲ್ಲ, ಎರಡು, ಹೊಸಾ ಹೊಸದು? ಅದರ ಮೇಲೆ ಅವರು ಹಾಗಂದದ್ದು ನ್ಯಾಯವೇ! ನಾವಾದರೆ ಬಿಟ್ಟುಬಿಡುತ್ತಿದ್ದೆವೋ!' ಎಂದು ಹೇಳಿ ಸುಂದರಮ್ಮನವರೂ ಸಮಾಧಾನವಾಗುತ್ತಾ ಬಂದರು....'ಪಾಪ, ಆತ ನನ್ನೊಂದಿಗೆ 'ನಾನು ಮಿಲಿಟರಿಯಲ್ಲಿದ್ದೆ; ಇಷ್ಟು ದಪ್ಪ ಹಣದ ಗಂಟು ಮಡಗಿದ್ದೇನೆ' ಅಂತ ಹೇಳಲೇ ಇಲ್ಲ ಊರಿನವರು ಸಾವಿರ ಅನ್ನುತ್ತಾರೆ; ಅದನ್ನೆಲ್ಲಾ ನಾವು ನಂಬಿದ್ದು ಭೀಮರಾಯರ ತಪ್ಪೇ? ಪಾಪ..ಚಿನ್ನದಂಥ ಮನುಷ್ಯ ಆತ.' ಎಂದು ಉದಾರಶಿರೋಮಣಿಗಳು ಹೇಳತೊಡಗಿದರು. 'ಇನ್ನುಮೇಲೆ ಶೀನ, ರಾಮು, ಲಚ್ಚು ಇವರಿಗಾದರೂ ಜಾತಕ ನೋಡಿ ಅಲ್ಲದೆ ಮದುವೆ ಗೊತ್ತುಮಾಡಬಾರದು.' ಅಂತ ಅವರು ನಿಶ್ಚಯಿಸಿದರು.

ಹೀಗೆ, ಆ ದಿನ ಹೊಡೆದಾಡಿದವರೆಲ್ಲರೂ ನಿಧಾನವಾಗಿ ಹತ್ತಿರ ಬರಲು ಪ್ರಾರಂಭಿಸಿದರು. ಒಂದು ದಿನ ದೇವಸ್ಥಾನದಲ್ಲಿ 'ಬೀಗತಿ'ಯರಿಬ್ಬರೂ ಸಂಧಿಸಿದರು....

'ಅಯ್ಯೋ! ಬಿಗಿ ಅಂದರೆ! ಅಪ್ಪಿತಪ್ಪಿ ನಾನೇನಾದರೂ ಕೋಪದಲ್ಲಿ

ಕೆಟ್ಟ ಮಾತು ಅಂದರೂವೆ ದೊಡ್ಡವರು ನೀವು ಅದನ್ನ ಕಿವಿಗೆ ಹಾಕಿಕೊಳ್ಳದೆ ಗಂಭೀರವಾಗಿ ಇರಬೇಡವೆ, ಸುಂದರಮ್ಮನವರೇ!'

'ಹೌದಮ್ಮಾ! ನೀನು ಹೇಳುವುದೇ ಸರಿ. ನಿಮ್ಮ ಮನೆ ಹುಡು ಗರು ನಮ್ಮ ಮನೆ ಪಾತ್ರೆ ಪದಾರ್ಥಗಳನ್ನು ಹಾಗೆ ಮಾಡಿದರೆ ನನ್ನ ಬಾಯಿಂದ ಎಂಥೆಂಥಾ ಮಾತು ಬರುತ್ತಿತ್ತೋ? ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ಈ ರೀತಿ ಇರುವಾಗ ನಾನು ಯಾರ ಮೇಲೆ ರೇಗಲಿ, ಯಾರನ್ನ ಬೈಯಲಿ? ಹೇಳು..ಎಲ್ಲರಿಂದಲೂ ಅನ್ನಿಸಿಕೊಳ್ಳಬೇಕಾದದ್ದೇ..'

'ಹಾಗಲ್ಲ, ಸುಂದರಮ್ಮನವರೇ! ಯೋಚನೆ ಮಾಡಿದರೆ ನನಗೆ ನಗು ಬರುತ್ತದೆ; ಪುರೋಹಿತರುಗಳು ಸೇರಿಕೊಂಡು ಮಂತ್ರ ಹಾಳು ಮಾಡಿ ಮದು ವೆಯೇ ಆಗಿಲ್ಲ ಅಂದರು; ನಾವು ನಿಜವಾಗಿಯೂ ಆ ದಿನ ಬೀಗತಿಗಳೇ ಅಲ್ಲ.. ಸುಂದರಮ್ಮನವರು ನೀವು; ನಾನು ಜಯಲಕ್ಷ್ಮಿ, ಅಷ್ಟೆ....ಆದರೂ ವಾಗ್ವಾದ, ಜಗಳ, ಮಾರಾಮಾರಿ, ಶಾಸ್ತ್ರೋಕ್ತವಾಗಿಯೇ ಪ್ರಾರಂಭಿಸಿ ಬಿಟ್ಟೆವಲ್ಲಾ....'

'ನನಗೆ ಯಾವುದೂ ಬೇಕಿಲ್ಲ, ಅಮ್ಮಾ..ಆ ದಿನದ ಸಮಾಚಾರ...'

'ಗಂಡಸರು, ಪಾಪ, ಸುಮ್ಮನೆ ನಿಂತಿದಾರೆ... ನಾವೇ ಹೆಂಗಸರು ಇದ್ದದ್ದು ಇಲ್ಲದ್ದು ಎಲ್ಲಾನೂ ಹೊತ್ತುಕೊಂಡು ಈ ಸಂಸಾರವೇ ಶಾಶ್ವತ ಅಂತ ಬೆಳ್ಳಿಕಪ್ಪಿಗೂ ಗಸೆಗಸೆ ಪಾಯಸಕ್ಕೂ ಜಗಳ ಕಾದೆವಲ್ಲಾ, ನಾಚಿಕೆ ಗೇಡಲ್ಲವೆ? ಸುಂದರಮ್ಮನವರೇ?'

'ಅಯ್ಯೋ! ನಮನಮಗೆ ಅಂತ ಅಷ್ಟಕ್ಕೇ ನಿಲ್ಲಲಿಲ್ಲವಲ್ಲಾ ಹಾಳು ಜಗಳ? ಚಿನ್ನದಂತಹ ಸೀಮಂತ ಪುತ್ರ ರಾತ್ರೋ ರಾತ್ರಿ ದೇಶಾಂತರ ಹೊರಟುಬಿಟ್ಟನಲ್ಲೇ... ಒಂದು ಕಾಗದ ಇಲ್ಲ, ಸಮಾಚಾರ ಇಲ್ಲ.... ಹುಡುಗರ ಮನಸ್ಸು ಬಲು ಸೂಕ್ಷ್ಮ....ಯಾರ ಮನಸ್ಸಿಗೆ ಯಾವ ಮಾತು ತಗಲುತ್ತದೋ ಎಂಬ ಯೋಚನೆಯೇ ಇಲ್ಲದೆ ಬಾಯಿಗೆ ಬಂದ ಹಾಗೆ ಕೂಗಿಬಿಡುತ್ತೇವೆ; ನಾವು ಆಮೇಲೆ ಕಣ್ಣೀರು ಸುರಿಸುತ್ತಾ ಕೈ ಕೈ ಹಿಸು ಕುವುದು ನಮ್ಮ ಹಣೆಯಬರಹ..ಬಾ! ಮನೆಗೆ ಬಂದು ಕುಂಕುಮ ಇಟ್ಟು ಕೊಂಡು ಹೋಗು.'

'ಇಷ್ಟು ಹೊತ್ತಿನ ಮೇಲೆ! ಬೇಡಿ, ನಾಳೆ ಸಂಜೆ ಮನೆಗೇ ಬರುತ್ತೇನೆ. ಆಮೇಲೆ ಎಲ್ಲರೂ ಒಟ್ಟಿಗೆ ದೇವಸ್ಥಾನಕ್ಕೆ ಬರೋಣ....'

'ನೀನೇಕೆ ಈ ನಡುವೆ ಲಲಿತುವನ್ನ ಕರೆದುಕೊಂಡು ಬರುವುದೇ ಇಲ್ಲ....'

'ಆ ಕೊಕ್ಕರೆಗೆ ನಾಚಿಕೆ, ಅಂತೆ....'

'ಸುಮ್ಮನಿರು, ನೀನು!........ಆ ದಿನ ನಾನು ಅಂದದ್ದನ್ನೆಲ್ಲಾ ನನ್ನ ಮುಖಕ್ಕೇ ಎಸೆಯಬೇಡ, ನನ್ನ ಮಕ್ಕಳೇನು ಮನ್ಮಥರೇ? ಸೊಟ್ಟಗೋ ನೆಟ್ಟಗೋ, ಎಲ್ಲಾದರೂ ಚೆನ್ನಾಗಿ ಬದುಕಿ ಬಾಳಿದರೆ ಅದೇ ಅಲಂಕಾರ,....'

ಹೀಗೆ, ಅವರಿಬ್ಬರೂ ತುಂಬಾ ಅನ್ಯೋನ್ಯವಾದರು. ಬರಬರುತ್ತಾ, ಆ ದಿನದ ಜಗಳವೇ ಒಂದು ಸವಿಕನಸಾಯಿತು. ಅದನ್ನು ನೆನೆಸಿಕೊಂಡೇ ಅವರು ನಕ್ಕು ನಲಿದರು....ಆದರೆ, ಸುಂದರಮ್ಮನವರ ನಗುವಿನ ಹಿಂದೆ ಹನುಮಂತನ ವಿಷಯವಾದ ನೋವು ಸದಾ ಇದ್ದೇ ಇರುತ್ತಿತ್ತು.

ಗಂಡಸರೂ ಕೂಡ ತಮ್ಮ ಪರಿಚಯವನ್ನು ಬೆಳೆಸಿಕೊಂಡೇ ಬಂದರು. ಭೀಮರಾಯರೂ ಆನಂದರಾಯರೂ ಒಟ್ಟಿಗೆ 'ವಾಕಿಂಗ್' ಹೋಗಲು ಮೊದಲು ಮಾಡಿದಾಗಿನಿಂದ ಅವರ ಸ್ನೇಹವು ಬಲಗೊಂಡಿತು. ಇಬ್ಬರೂ ಹಳೆಯ ಕಾಲದವರಾದ್ದರಿಂದ ಮಾತಿಗೆ ಅನುಕೂಲವಾದ ವಿಷಯಗಳು ಸಿಕ್ಕುತ್ತಿದ್ದುವು; ಅಲ್ಲದೆ, ಇಬ್ಬರಿಂದಲೂ ಒಂದೇ ವಿಧವಾದ ಅಭಿಪ್ರಾಯವು ಸಾಧಾರಣವಾಗಿ ಹೊರಬೀಳುತ್ತಿತ್ತು. ಇದರಿಂದ ಅವರು ಮತ್ತಷ್ಟು ಹತ್ತಿರ ಬಂದರು. 'ಈಚೆಗೆ ಹುಡುಗರು ತುಂಬಾ ಕೆಟ್ಟುಹೋಗಿದಾರೆ; ದುರಭ್ಯಾಸಗಳು, ದುರ್ವ್ಯಯ, ಇವುಗಳು ಹೆಚ್ಚಿವೆ; ಹಿಂದಿನ ಕಾಲವೇ ಚೆನ್ನಾಗಿತ್ತು' ಅಂತ ಒಬ್ಬರು ದಿನವೂ ಪ್ರಾರಂಭ ಮಾಡುವರು. ಆಗ ಮತ್ತೊಬ್ಬರು, 'ಮುಖ್ಯವಾಗಿ ಬ್ರಾಹ್ಮಣ ಹುಡುಗರು ಮೂರು ಹೊತ್ತು ಸಂಧ್ಯಾವಂದನೆ ಮಾಡುವುದನ್ನ ಬಿಟ್ಟುಬಿಟ್ಟಿದಾರೆ! ಜನಿವಾರದಲ್ಲಿ ಕೀಲಿ ತೂಗು ಹಾಕುತ್ತಾರೆ; ಅದನ್ನು ಬಿಸಾಕಿದರೆ ಮುಖದಲ್ಲಿ ವರ್ಚಸ್ಸು ಹೆಚ್ಚುತ್ತದೆ.' ಎಂಬರು. ಅದಕ್ಕೆ ಒಬ್ಬ ರಾಯರು, 'ಈಗಿನವರಿಗೆ ಶಬ್ದ ಅಮರ ಗಟ್ಟುಮಾಡುವುದೇ ಅಸಾಧ್ಯವಾಗಿ ಕಾಣುತ್ತದೆ..ಜ್ಞಾಪಕಶಕ್ತಿಯೇ ಇಲ್ಲ.' ಎಂಬರು.

‘ ಜ್ಞಾಪಕ ಶಕ್ತಿ ಹೇಗೆ ಬರುತ್ತದೆ, ಸ್ವಾಮಿ ! ಈಗಿನವರಿಗೆ. .ಅವರು ಯಾರು, ಮರೆತೇಬಿಟ್ಟೆನಲ್ಲಾ, ಆಯುರ್ವೇದ ಬರೆದಿರುವವರು, ಖಾದಿ. . ಅಲ್ಲ. .ಖಾದಿ ಅಲ್ಲ. .’

‘ ಚರಕ ಶುಶ್ರುತ. .’

‘ ಹುಂ. .ಚರಕ. .ಅವರು ಹೇಳಿರುವ ಹಾಗೆ ಆಹಾರ ತೆಗಿದುಕೊಂಡರೆ ತಾನೆ. .ಕಾಫಿ, ಟೀ ! ಏಕಾದಶಿ ದಿನ ಈರುಳ್ಳಿ ಹುಳಿ ಕುಡಿಯುತ್ತಾರೆ.. ಆಂಜನೇಯನ ಕೃಪೆಯಿಂದ ಇಷ್ಟುವುಟ್ಟಿಗಾದರೂ ಇದಾರೆ ಇವರು. . , ಇಲ್ಲದೆ ಇದ್ದರೆ ದೇವರೇ ಗತಿ. .’

‘ ಅವರದೇನೂ ತಪ್ಪಿಲ್ಲ, ರಾಯರೇ ! ಸ್ಕೂಲು ಕಾಲೇಜುಗಳಲ್ಲೇ ಹೇಳಿಕೊಟ್ಟುಬಿಡುತ್ತಾರೆ, ಕಾಫಿ ಕುಡಿಯಿರಿ, ಏಕಾದಶಿ ಬಿಡಿ, ಅಂತ. . ಮೊದಲನೆಯ ಪುಸ್ತಕದಲ್ಲೇ ಟೀ ಸೊಪ್ಪಿನ ಸಮಾಚಾರ ಹೇಳುತ್ತಾನೆ. .’

ಕೆಲವು ದಿನ ಹುಡುಗರಿಗೆ ವಿನಯವಿಲ್ಲ ಎಂಬ ಮಾತು ಬರುತ್ತಲೂ ಯಾರಾದರೊಬ್ಬರು ‘ ಅವರನ್ನು ಬೈಯುತ್ತೇವಲ್ಲಾ, ನಮ್ಮ ವಿನಯ ಆ ದಿನ ಎಲ್ಲಿಗೆ ಹೋಗಿತ್ತು ? ’ ಎಂದು ಹೇಳಿ ನಗುವರು ! . . . .ಆದರೆ, ಆನಂದರಾಯರಿಗೆ ಮಾತ್ರ ಮನೆ ಕಡೆ ಹೋಗುವಾಗ ದುಃಖವು ಉಕ್ಕಿ ಬರುತ್ತಿತ್ತು. ಹನುಮಂತ ಎಲ್ಲಿದಾನೋ, ಯಾವ ಸಂಕಟಕ್ಕೆ ಸಿಕ್ಕಿಕೊಂಡಿದಾನೋ, ಎಂಬುದನ್ನು ನೆನೆದಾಗ, ಅವರಿಗೆ ಕಣ್ಣೇ ಕಾಣಿಸದು. .

ಹನುಮಂತ ಊರು ಬಿಟ್ಟು ಹೋಗಿ ಹೆಚ್ಚುಕಡಿಮೆ ಒಂದು ತಿಂಗಳಾಗಿರಬಹುದು. ಒಂದು ದಿನ ಬೆಳಗ್ಗೆ ಮೇಜರ್ ಭೀಮರಾಯರು ಆನಂದ-ರಾಯರ ಮನೆಗೆ ಬಂದು, ‘ ಶೀನ ಇದಾನೆಯೇ ? ’ ಅಂತ ಕೇಳಿದರು. ‘ಇಲ್ಲ, ಇಲ್ಲ, ಇಷ್ಟು ಹೊತ್ತಿನಲ್ಲಿ ಅವನೆಲ್ಲಿರುತ್ತಾನೆ ಮನೆಯಲ್ಲಿ, ತಮಗೆ ಗೊತ್ತಿಲ್ಲವೆ. . . .ಸೊಸೈಟಿ ಬೆಳಗ್ಗೆ ೮ರಿಂದ ೧೦–೩೦ರ ವರೆಗೆ ತಾನೆ ? ’ ಎಂದರು ಆನಂದರಾಯರು. ‘ ಬನ್ನಿ, ಚಿಂತೆ ಇಲ್ಲ. .ಕುಳಿತುಕೊಳ್ಳಿ. . . .ಅವನಿಂದ ಸೊಸೈಟಿಯಲ್ಲಿ ಏನಾದರೂ ಕೆಲಸ ಮಾಡಿಸಿಕೊಡಬೇಕಾಗಿದ್ದರೆ ಮಾಡಿಸೋಣ. ’ ಎಂದು ಅವರು ಭೀಮರಾಯರನ್ನು ಕರೆದು ಕೂರಿಸಿದರು.

‘ ನಿಮ್ಮೊಂದಿಗೆ ಕೊಂಚ ಮಾತನಾಡಬೇಕಾಗಿದೆ. ’

‘ ಏನದು ? ’

'ಆ ದಿನ ಲಲಿತು ಮದುವೆಯಲ್ಲಿ ಅಷ್ಟು ಆಭಾಸವಾದ ಮೇಲೆ, ಬೇರೊಬ್ಬರೂ ನಮ್ಮ ಸಂಬಂಧವನ್ನು ಒಪ್ಪುತ್ತಿಲ್ಲ........ಅವಳ ಜಾತಕ ಫಲವೋ, ಅವನ ಹಣೆಯ ಬರಹವೋ, ಹನುಮಂತ ಹೊರಟು ಹೋದ.... ನೀವೇನೂ ಯೋಚನೆ ಮಾಡಬೇಡಿ. ಅವನು ಹಿಂದಕ್ಕೆ ಬರುತ್ತಾನೆ. ಅಂತಹ ಪೋಕರಿ ಏನೂ ಅಲ್ಲ..ನಾಲ್ಕು ದೇಶ ಸುತ್ತಿ ನುಸ್ಸಾಗಿ ಹೊಟ್ಟೆ ಬಟ್ಟೆಗೆ ಕಷ್ಟ ಬಂದರೆ, ಅವನೇ ಕಾಗದ ಬರೆಯುತ್ತಾನೆ, ಬಂದು ಸೇರುತ್ತಾನೆ.... ಖಂಡಿತ........ಆದರೆ, ಪುರೋಹಿತರು ಹೇಳುವ ಹಾಗೆ ಅವನ ಕೂಡ ಲಲಿತು ಸಂಸಾರ ಹೂಡುವುದು ಅಸಂಭವ, ಶಾಸ್ತ್ರವಿರುದ್ಧ, ಪಾಪ........ಈ ಸ್ಥಿತಿ ಯಲ್ಲಿ, ನಾವು ಬೇರೆ ಎಲ್ಲೂ ಗಂಡು ಹುಡುಕುವ ಹಾಗಿಲ್ಲ.. .....ತಮ್ಮ ಮನೆಗೆ ಅಂತ ಆಗ ಅಷ್ಟು ಸಿದ್ಧಮಾಡಿದ್ದೆ. ನನ್ನ ಮಗಳನ್ನ ನೀವೇ ಸೊಸೆ ಯಾಗಿ ಸ್ವೀಕರಿಸಬೇಕು . ಹೆಚ್ಚಾಗಿ ಹೇಳಲಾರೆ.......ಮನೆಯಲ್ಲಿ ಅವಳೂ ಹಾಗೆಯೇ ಅಭಿಪ್ರಾಯಪಡುತ್ತಾಳೆ....'

ಬಾಗಿಲು ಸಂದಿನಲ್ಲಿ ಸುಂದರಮ್ಮನವರು ಆಗಲೇ ಹಾಜರಾಗಿದ್ದರು.

'ಅಂದರೆ, ಭೀಮರಾಯರೇ ! ತಾವು ಈಗ ಲಲಿತುವನ್ನ ಶೀನನಿಗೆ ಕೊಡೋಣ ಅಂತ ಯೋಚನೆ ಮಾಡುತ್ತಿದೀರಾ ?........ಅಯ್ಯೋ ! ನಾನು ಏನು ಹೇಳಲಿ..ತಮಗೆ ಹೇಗೆ ತಿಳಿಯಬೇಕು ?... ಹೇಳಿಬಿಡತೇನೆ ?.... '

ಸುಂದರಮ್ಮನವರು ಬಾಗಿಲುಸಂದಿನಿಂದಲೇ ಆಗಬಹುದೆಂದು ತಲೆ ಅಲ್ಲಾಡಿಸಿದರು.

' ಇನ್ನೇನೂ ಇಲ್ಲ.... ...ಮನೆಯೊಳಗಿನ ಸಮಾಚಾರವೇ !... ಶೀನನ ಚರ್ಯೆಯೇ ಈಗ ಬಂದು ರೀತಿಯಾಗಿದೆ. ಸೊಸೈಟಿಗೇನೋ ಹೋಗು ತ್ತಾನೆ; ತಿಂಗಳಿಗೆ ೩೦ ರೂಪಾಯಿ ತರುತ್ತಾನೆ. ಮದುವೆ ದಿನ ಬೆಳ್ಳಿಕಪ್ಪು ತೆಗಿದುಕೊಂಡು ಬಂದುಬಿಟ್ಟಿದ್ದನಲ್ಲಾ ! ಅಂತಹ ಕೆಟ್ಟ ಕೆಲಸ ಮಾಡಿದೇನೆ ಅಂತ ಅವನಿಗೆ ಇನ್ನೂ ತಿಳಿಯದು. ಮೈಮೇಲೆ ಪ್ರಜ್ಞೆಯೇ ಇಲ್ಲದವನ ಹಾಗೆ ಮಾಡುತ್ತಾನೆ..ಬರಬರುತ್ತಾ ಅವನ ಮನೋವಿಕಾರ ಬಲವಾಗುತ್ತಾ ಇದೆ..ಆಕಾಶ ನೋಡುತ್ತಾನೆ, ಕರಿ ಮೋಡಗಳಿಗೆ ಬಿಳಿ ಅಂಚಿದ್ದರೆ, ಹಾ, ಹಾ, ಬೆಳ್ಳಿ ಲೈನಿಂಗ್ ಇರುವ ಕರೀ ಕೋಟು ಅಂತ ಕುಣಿಯುತ್ತಾನಂತೆ ? ಆಸ್ಪತ್ರೆಗೆ ಹೋಗಿ ಯಾಕ್ರೀ ಅನ್ಯಾಯವಾಗಿ ಸಿಲ್ವರ್ ನೈಟ್ರೇಟನ್ನ

ಜನರ ಕಣ್ಣಿಗೆ ಸುರಿಯುತ್ತೀರಿ ಅಂತ ಆ ಡಾಕ್ಟರನ್ನು ಹೆದರಿಸುತ್ತಾನಂತೆ; ಸೊಸೈಟಿಯಲ್ಲಿ ಕುಳಿತು ಸುಮ್ಮನೆ ಮಾತನಾಡುತ್ತಾನಂತೆ; ಬೇಡ, ಕಣೋ, ಮಾತಾಡಬೇಡ, ಅಂತ ಅಂದರೆ, ಬಿಡೋ, 'ಮಾತೇ ಬೆಳ್ಳಿ; ಮೌನವೇ ಚಿನ್ನ' ಅಂತಾನಂತೆ. ದಿನವೂ ಮನೆಗೆ ಬಂದು ಬೆಳ್ಳಿ ಬೆಲೆ ಏರಿದೆ, ನಿನಗೇನು ಗೊತ್ತು, ಅಂತ ಅವನಮ್ಮನ ಹತ್ತಿರ ಜಗಳ ಕಾಯುತ್ತಾನೆ ಶುಕ್ರಗ್ರಹದ ವಿಷಯಗಳನ್ನೆಲ್ಲಾ ಒಂದು ಪುಸ್ತಕದಲ್ಲಿ ಗುರುತು ಹಾಕುತ್ತಿದಾನೆ....'

'ಆದರೆ, ಅವನ ಆರೋಗ್ಯ? ನಿದ್ರೆ, ಆಹಾರ?..'

'ಅವುಗಳಿಗೇನೂ ಮೋಸವಿಲ್ಲ. ಪುಷ್ಕಳವಾಗಿ ಊಟ ಮಾಡುತ್ತಾನೆ; ಮನೆಗೆ ಬೇಕಾದ ಸೌದೆ ಎಲ್ಲವನ್ನೂ ಅವನೇ ಒಡೆದು ಹಾಕುತ್ತಾನೆ. ತನ್ನ ಬಟ್ಟೆ ತಾನೇ ಒಗೆದು ಹಾಕುತ್ತಾನೆ......ರಾತ್ರಿ ಮಾತ್ರ 'ಶಾಸ್ತ್ರೀ' 'ಶಾಸ್ತ್ರೀ' 'ಬೆಳ್ಳಿ ನಾಲಗೆ—ಬೆಳ್ಳಿ ನಾಲಗೆ' ಅಂತ ಕನವರಿಸುತ್ತಾನೆ.. 'ಅವರ ಮನೆ ಮಗುವಿನ ಬಾಯಲ್ಲಿ ಬೆಳ್ಳಿ ಚಮಚ, ತೆಗಿಯಿರಿ' ಅಂತಾನೆ.. ಏನು ಮಹಾ ಭಾಗ್ಯ ಅಂತ ನಿಮ್ಮ ಹತ್ತಿರ ಹೇಳಿಕೊಳ್ಳಲಿ..ನೀವು ಕಂಡ ಹಾಗೆ ಎಗ್ಗಮ್ಮನ ಸಮಾಜದ ರಜತಮಹೋತ್ಸವ ಮುಗಿದು ಆಗಲೇ ಮೂರು ತಿಂಗಳಾಯಿತಲ್ಲಾ....ಶೀನ ಇನ್ನೂ ಅದಕ್ಕೆ ಚಂದಾ ವಸೂಲಿ ಮಾಡುತ್ತಾ ಇದಾನೆ! ಭೀಮರಾಯರೇ! ನಿಮಗೆ ದೇವರು ಇಬ್ಬರು ಗಂಡುಮಕ್ಕಳನ್ನು ಕೊಟ್ಟು ಕಿತ್ತುಕೊಂಡ..ನನಗೂ ಎರಡು ಮಕ್ಕಳನ್ನು ಕೊಟ್ಟು, ಹೀಗೆ ಚಿತ್ರಹಿಂಸೆ ಮಾಡುತ್ತಾ ಇದಾನೆ.... '

'ಛೆ..ಛೆ..ತಾವು ಹೀಗೆ ತಲೆಯ ಮೇಲೆ ಕೈ ಇಟ್ಟು ಕುಳಿತುಕೊಳ್ಳ ಬೇಕಾದ್ದೇನೂ ಇಲ್ಲ..ಹಿರಿಯರು, ಅನುಭವಸ್ಥರು, ಊರಿಗೆಲ್ಲಾ ಬೇಕಾ-ದವರು, ಬುದ್ಧಿವಾದ ಹೇಳಿ ನಡೆಸಬೇಕಾದವರು ನೀವೇ ಹೀಗೆ ಇಳಿಮುಖ ಮಾಡಿದರೆ! ಚೆನ್ನಾಯಿತು..ಶೀನನಿಗೆ, ಪಾಪ, ಇನ್ನೇನೂ ಇಲ್ಲ...ವಯಸ್ಸು ೨೨ ಆಗುತ್ತಾ ಬಂತು..ಕೇಳಿಲ್ಲವೆ ಗಾದೆ? ನನ್ನ ಜವಾಬ್ದಾರಿಗೆ ಬಿಟ್ಟುಬಿಡಿ.. ಆಂಜನೇಯ ಇದಾನೆ..ಹುಚ್ಚು-ಗಿಚ್ಚನ್ನೆಲ್ಲಾ ಬಡಿದುಹಾಕಿಬಿಡುತ್ತಾನೆ..!

'ಶೀನನ ಈಗಿನ ಸ್ಥಿತಿಯಲ್ಲಿ ಮದುವೆ ಮಾಡುವುದಕ್ಕೆ ನನಗೆ ಕೊಂಚವೂ ಇಷ್ಟವಿಲ್ಲ..ಆದರೆ, ನಿಮ್ಮ ಇಚ್ಛೆ..ನಾನು ಹೇಳುವುದು ಇಷ್ಟು!

ಆಗ ನಾನು ಇದನ್ನು ಹೇಳಿರಲಿಲ್ಲ..ಜಾತಕ ನೋಡಿಸಿ, ದೈವಾನುಗ್ರಹ ಎಷ್ಟರ ಮಟ್ಟಿಗಿದೆ, ಉನ್ಮಾದಯೋಗ ಇನ್ನೂ ಉಂಟೋ ಇಲ್ಲವೋ, ಯಥಾ ವಿಧಿಯಾಗಿ ತಿಳಿದುಕೊಂಡುಬಿಡೋಣ. ಉಭಯತ್ರ ಕ್ಷೇಮ..ಆಮೇಲೆ, ಮದುವೆ ತುಂಗಾವತಿಯಲ್ಲೇ ನಡೆಯಲಿ..ಈ ಊರಲ್ಲಿ ಬೇಡ. ಸುಬ್ಬುಶಾಸ್ತ್ರಿಗಳೇ ಬಂದು ಪೌರೋಹಿತ್ಯ ಮಾಡಬೇಕೆಂದು ಬಲವಂತಪಡಿಸೋಣ ಇಷ್ಟರ ಮೇಲೆ, ದೈವೇಚ್ಛೆ..'

'ಹಾಗೆಯೇ ಮಾಡೋಣ..ಆ ಶುಂಠ ಯಜ್ಞೇಶು ಜಾತಿ ಕೆಟ್ಟು ಕೊಬ್ಬಳ್ಳಿ ವರ್ಕ್‌ಷಾಪ್ ಸೇರಿಬಿಟ್ಟನಲ್ಲಾ, ಇನ್ನೇನು?....ಜಾತಕಾನೂ ನೋಡೋಣ..ಆಂಜನೇಯ ಬೇಡ ಅನ್ನುವುದಿಲ್ಲ, ನನಗೆ ಧೈರ್ಯವಿದೆ.. ಹಾಗಾದರೆ....?'

'ಶುಭಸ್ಯ ಶೀಘ್ರಂ'

—

## ಹದಿನೈದನೆಯ ಅಧ್ಯಾಯ

### ಹಿರಿಯ ಮಗನ ಕಾಗದ

●

ನೀವು ಬೇಡಿದ ತಂದು ಕೊಡುವೆವು
ನಾವಿದಕೆ ಸಂದೇಹ ಬೇಡೆಂದರು ಕುಮಾರಕರು —ನಾರಣಪ್ಪ.

ಕೊರಗದಿರು ಮರುಗದಿರು ಎನ್ನ ಸಲುವಾಗಿ —ವಿ. ಸೀ.

●

'ಮೃಷ್ಟಾನ್ನಮಿತರೇ ಜನಾಃ!'......ಭೀಮರಾಯರು ತಮ್ಮ ಮಗಳ ಮದುವೆಯನ್ನ ತುಂಗಾವತಿಯಲ್ಲಿ ನಡೆಸಲು ಏರ್ಪಾಟು ಮಾಡಿದ್ದು ಇತರೇ ಜನಗಳಿಗೆ ರುಚಿಸಲಿಲ್ಲ. 'ನಾವೇನು ಗಲಾಟೆ ಮಾಡುತ್ತೇವೆಯೇ? ನಮಗೆ ಗೊತ್ತಿಲ್ಲವೇ? ಮೊದಲನೆಯ ಸಲ ಆಗಬಾರದ್ದು ಆಯಿತು, ಆದದ್ದಾಗಬಾರದ್ದಾಗಿತ್ತು, ಅಂತ ನಮಗೆ ತಿಳಿದಿಲ್ಲವೇ? ಯಾಕೆ ಹೀಗೆ ಹೆದರಿಕೊಂಡು ಪಾಪಿ ಪರದೇಶಿಗಳ ಹಾಗೆ ಕಾಡು ಕೊಂಪೆಗೆ ಕರೆದುಕೊಂಡು ಹೋಗಿ ಮದುವೆ ಮಾಡಬೇಕು?' ಎಂದು ಅವರು ಹರಡಿದರು. ಆಗ ಮತ್ತೆ ಕೆಲವರು, 'ಹಾಗಲ್ಲ ಹಾಗಲ್ಲ ನಿಮಗೆ ನಿಜಾಂಶ ತಿಳಿಯದು. ಮಗ ಹನುಮಂತ ಲಂಕೆಗೆ ಹೋಗಿದಾನಲ್ಲಾ, ಅವನು ಕಡಲನ್ನ ಹಿಂದಕ್ಕೆ ಹಾರಿ ಲಗ್ನಕ್ಕೆ ಸರಿಯಾಗಿ ಧುಮುಕಿ ಪದಾರ್ಥ ಸನ್ನದು ಅಂತ ಗಲಾಟೆ ಮಾಡದೆ ಇರುವುದಕ್ಕಾಗಿ ತುಂಗಾವತಿಗೆ ಹೋಗುತ್ತಿದಾರಂತೆ' ಎಂದರು. ಬೇರೆ ಕೆಲವರು, 'ತುಂಗಾವತಿಯಮ್ಮನ ಸನ್ನಿಧಿಯಲ್ಲೇ ಮಗನಿಗೆ ಮದುವೆ ಮಾಡುತ್ತೇನೆ; ಸದ್ಯಃ ಅವನ ಕದಡಿದ ಮೆದುಳು ತಿಳಿಯಾಗಲಿ ಎಂದು ತಾಯಿ ಹರಕೆ ಹೊತ್ತಿದಾರೆ; ಆದಕ್ಕಾಗಿಯೇ ಅಲ್ಲಿಗೆ ಹೋಗುತ್ತಿದಾರಂತೆ' ಎಂದರು ಮತ್ತೆ ಕೆಲವರು.

ಭೀಮರಾಯರು ತಮ್ಮ ಮನೆಯವರು ಮತ್ತು ಬೀಗರ ಮನೆಯವರೂ ಒಟ್ಟಾಗಿ ತುಂಗಾವತಿಗೆ ಹೋಗಿ ಬರಲು ಪ್ರತ್ಯೇಕವಾಗಿ ಒಂದು ಬಸ್ಸನ್ನು ಏರ್ಪಾಟು ಮಾಡಿದ್ದರು. ಅವರ ಮನೆಯವರೆಲ್ಲರೂ ಹತ್ತಿ ಕುಳಿತ ಮೇಲೆ ಬಸ್ಸು ಆನಂದರಾಯರ ಮನೆ ಬಾಗಿಲಿಗೆ ಬಂತು. 'ಬಸ್ಸು ಬಂತು ಬಸ್ಸು' ಅಂತ ಕೂಗು ಹಾಕುತ್ತಾ ರಾಮು ಲಚ್ಚು ಇಬ್ಬರೂ ಬಸ್ಸಿನ ಸುತ್ತ ಕಣ್ಣ-ಮುಚ್ಚಾಲೆ ಆಡಲಿಕ್ಕೆ ಮೊದಲು ಮಾಡಿದರು. ಎಡಗಡೆಯಿಂದ ಹತ್ತುವುದು, ಬಲಗಡೆ ಕಂಬಿ ಸಂದಿನಿಂದ ಇಳಿಯುವುದು, ಹಿಂದಿನಿಂದ ಸಿಳ್ಳು ಹಾಕುವುದು, ಮುಂದೆ ಬಂದು ಡ್ರೈವರನ್ನು ಅಣಕಿಸುವುದು, ಹೀಗೆ ಕುಚೇಷ್ಟೆ ಮಾಡಿದರು. ಹುಡುಗರ ಗಲಿಬಿಲಿಯನ್ನು ಕಂಡು ರೇಗಿ ಸುಂದರಮ್ಮನವರು ಬೆನ್ನಿಗೆ ಒಂದೊಂದು ಬಾಸುಂಡೆ ಬಡಿಸೋಣವೇ ಎಂದು ಅನುಮಾನಿಸಿದರು. ಆದರೆ, ಕೂಡಲೇ ಆ ದಿನದ ಪಾಯಸದ ಗುದ್ದನ್ನು ನೆನೆಸಿಕೊಂಡು ಆಕೆ ಸುಮ್ಮನಾದಳು. ಬಿಗಿದ ಮುಷ್ಟಿಯನ್ನು ಸಡಿಲ ಮಾಡಿದರು. ಹಾಗೆಯೇ ಅವರಿಗೆ ಹನುಮಂತ ಜ್ಞಾಪಕಕ್ಕೆ ಬಂದ. ಅವನನ್ನು ಎಲ್ಲೋ ಅಲೆಯುವಂತೆ ಮಾಡಿ, ಈಗ ನಿಗಿನಿಗಿ ಅಂತ ಎಲ್ಲರೂ ಬಸ್ಸು ಹತ್ತಿ ಪ್ರಯಾಣ ಮಾಡುವುದೆಂದರೆ ಅವರಿಗೆ ತುಂಬ ಸಂಕಟವಾಯಿತು. ಗಂಟಲಲ್ಲಿ ಏನೋ ಸಿಕ್ಕಿಕೊಂಡಿತು. ಕಣ್ಣಲ್ಲಿ ನೀರು ತುಂಬಿತು. ಮಾಚ್ಚಿಯ ಮಗು ಕೆಳಗುರುಳಿ ಕಿಟೋ ಎಂದು ಕಿರಿಚಿದಾಗ ಆಕೆ ಮತ್ತೆ ಎಚ್ಚರವಾದಳು........ಆಗ ಸುಬ್ಬುಶಾಸ್ತ್ರಿಗಳು, 'ಎಲ್ಲರೂ ಬಂದಾಯಿತು ತಾನೇ?' ಎಂದು ಅಬ್ಬರಿಸುತ್ತಾ ಓಡೋಡಿ ಬಂದರು. ಶೀನ ಮಾತ್ರ ಇನ್ನೂ ಮನೆಯೊಳಗೇ ಇದ್ದುಕೊಂಡು, 'ಬೆಳ್ಳಿ ಘರದೆಯ ನಕ್ಷತ್ರಗಳು' ಎಂಬ ಒಂದು ಸಿನಿಮಾ ವಿಷಯದ ಪುಸ್ತಕವನ್ನು ಓದುತ್ತಿದ್ದ. ಸುಬ್ಬುಶಾಸ್ತ್ರಿಗಳು ತಮ್ಮ ಅವಾಂತರದ ಗಂಟಲನ್ನು ಸರಿಪಡಿಸಿಕೊಂಡು, 'ಶೀನಾ,' ಎಂದು ಕೂಗುತ್ತಲೂ ಅವನು ಹೊರಕ್ಕೆ ಬಂದ. 'ಶಾಸ್ತ್ರಿಗಳೇ! ನೀವು ಕೇಳಿದಿರಾ ಸಮಾಚಾರ? ಯಾರೋ ಪುಣ್ಯಾತ್ಮರು ಶ್ರೀನಿವಾಸ ದೇವರಿಗೆ ಬೆಳ್ಳಿ ತೇರು ಮಾಡಿಕೊಟ್ಟರಂತಲ್ಲಾ?' ಎಂದು ಕೇಳುತ್ತಾ ಬಸ್ಸಿನ ಹತ್ತಿರಕ್ಕೆ ಬಂದ. ಅವನ ಪ್ರಶ್ನೆ ಲಲಿತು ಕಿವಿಗೆ ಬಿತ್ತು. ಭೀಮರಾಯರು, 'ಲಲಿತೂ! ದೇವರಿದಾರೆ....ಸುಮ್ಮನಿರು..' ಎಂದರು. 'ಶಾಸ್ತ್ರಿಗಳೇ ಬೆಳ್ಳಿತೇರಿನಲ್ಲಿ ಕೂರಿಸದೇ ಹೋದರೆ, ದೇವರು

ಮೆರೆವಣಿಗೆ ಹೊರಡುವುದಿಲ್ಲವೇನು?....ನಾನೂ ಶ್ರೀನಿವಾಸ ದೇವರು.. ನನಗೂ ಒಂದು ಬೆಳ್ಳಿಚಕ್ಕಡಿ ತರಿಸುತ್ತೀರಾ ತುಂಗಾವತಿಯಲ್ಲಿ?' ಎಂದ..

'ಇಷ್ಟಾರ್ಟ್ ಮಾಡೋಣವೇ ಸಾರ್? ಇನ್ನು ಯಾರಿಗಾದರೂ ಬರುವುದುಂಟೋ?' ಎಂದು ಡ್ರೈವರನು ಆತುರವನ್ನು ಪ್ರಕಟಿಸಿದ. ಅದಕ್ಕೆ ಆನಂದರಾಯರು, 'ಎಲ್ಲರೂ ಬಂದಾಯಿತು; ಈಗ ಒಳ್ಳೆ ಶಕುನ ಬರುತ್ತಾ ಇದೆ, ಬಿಡು' ಅಂದರು.

ಆಗ ದೂರದಿಂದ ಟಪವನು ಲಲಿನಕ್ಕೆ ಬೀಸುತ್ತಾ 'ಹೋಲ್ಡಾನ್ ಹೋಲ್ಡಾನ್' ಅಂತ ಕಿರಿಚುತ್ತಿದ್ದ. ಬಸ್ಸನ್ನು ನೂಕಲು ಕೆಳಕ್ಕಿಳಿದಾಗ, ಗುಂಡನಿಗೆ ಆ ಕೂಗು ಕೇಳಿಸಿತು......ಟಪಾಲಿನವನು ಓಡುತ್ತಾ ಹತ್ತಿರಕ್ಕೆ ಬಂದ.

'ಇದೇನು ಬಂತಪ್ಪ ಗ್ರಹಚಾರ? ಹೊರಡುವ ವೇಳೆಗೆ ಸರಿಯಾಗಿ ಯಾವ ಕೆಟ್ಟ ಸುದ್ದಿ ಬಂದು ಲಲಿತು ಮದುವೆಗೆ ಮತ್ತೆ ಕಲ್ಲು ಹಾಕುತ್ತದೋ' ಎಂದು ಭೀಮರಾಯರು ಗಾಬರಿಗೊಂಡರು. 'ನೋಡಿ, ರಾಯರೇ! ಅದನ್ನ ಹಾಗೆಯೇ ಮನೆಯೊಳಕ್ಕಿಟ್ಟು ಬಿಟ್ಟು ಬನ್ನಿ; ಅಲ್ಲಿಂದ ಬಂದ ಮೇಲೆ ಓದಿಕೊಳ್ಳೋಣ. ಅಂತಹ ರಾಜಕಾರ್ಯವೇನೂ ಇರಲಾರದು' ಎಂದರು. ಆಗ, ಆನಂದರಾಯರು, 'ಹನುಮಂತ ಬರೆದಿದಾನೆ' ಎನ್ನುತ್ತಾ ಲಕ್ಕೋಟೆಯ ಅಂಚನ್ನು ಕೊಂಚ ದೂರಕ್ಕೆ ಹರಿದರು. ಒಳಗಿನಿಂದ ಕಾಗದವನ್ನು ಹೊರಕ್ಕೆಳೆಯಲು ಅನುಮಾನಿಸಿದರು. ಆದರೆ, ಸುಂದರಮ್ಮನವರು, 'ಓದಿ, ಅಂದರೆ, ಓದಿ! ಅಂತು ಹೊರಡುವ ವೇಳೆಗೆ ಸರಿಯಾಗಿ ಬದುಕಿದೇನೆ ಅಂತ ಅವನಿಂದ ಒಂದು ಕಾಗದದ ತುಂಡು ಬಂತಲ್ಲಾ, ಅದೇ ಒಳ್ಳೆಯ ಶಕುನವಲ್ಲವೆ? ಚೆನ್ನಾಯಿತು, ಓದಿ, ಅಂದರೆ!' ಎಂದರು. ಗುಂಡ, ಮಾಚ್ಚಿ, ಎಲ್ಲರೂ ಕಾಗದವನ್ನ ಓದಲೇಬೇಕೆಂದು ಹಠ ಹಿಡಿದರು....ಟಪಾಲಿನವನೂ ಅಲ್ಲೇ ನಿಂತಿದ್ದ.. ಅವನಿಗೂ ಹನುಮಂತನ ಯೋಗಕ್ಷೇಮ ತಿಳಿದುಕೊಳ್ಳಬೇಕೆಂಬ ಆಸೆ!

ಆನಂದರಾಯರು ಓದುತ್ತಾ ಓದುತ್ತಾ, 'ಸುಖವಾಗಿದಾನಂತೆ!.. ಕೆಲಸ ಸಿಕ್ಕಿದೆಯಂತೆ....' ಅಂದರು. 'ತುಂಗಾವತಮ್ಮನಿಗೆ ಅಲ್ಲಿ ಸೇರಿದ ಕೂಡಲೇ ಒಂದು ಸಹಸ್ರನಾಮಾರ್ಚನೆ ಮಾಡಿಸಬೇಕು' ಅಂದರು ಸುಂದರಮ್ಮನವರು. '..ಇಲ್ಲಿಗೆ ಅವನು ಬರುವುದೇ ಇಲ್ಲವಂತೆ.' 'ಯಾಕೆ?..

ಅವನಿಗೆ ತಾಯಿ ಕೂಡ ಬೇಡವಾಯಿತೆ?..ಈಗ ಎಲ್ಲಿದಾನಂತೆ?' ಅಂದರು ತಾಯಿ. 'ಬರುವುದೇ ಇಲ್ಲ ಅಂತ ಬರೆದಿದಾನೆ..ನಾವು ಯಾರೂ ಅವನನ್ನ ಹುಡುಕಿಕೊಂಡು ಹೋಗಬಾರದಂತೆ......ಈಗ ಹೈದರಾಬಾದಿನಲ್ಲಿದಾನಂತೆ....ನಶ್ಯಹಾಕುವುದನ್ನ ಬಿಟ್ಟುಬಿಟ್ಟಿದಾನಂತೆ.' 'ಅವನಿಗೇನು ಹತ್ತು ಸಲ ಬಿಟ್ಟಿದಾನೆ; ಅಭ್ಯಾಸವಾಗಿದೆ ಬಿಡುವುದು' ಅಂದ ಗುಂಡ. 'ಹೈದರಾಬಾದಿಂದ ಇನ್ನು ಎಲ್ಲಿಗೋ ಹೋಗಬೇಕಂತೆ....' 'ಆದಿರಲಿ! ಅವನಿಗೆ ಮೈಯಲ್ಲಿ ಸ್ವಸ್ಥವೇ, ಅದನ್ನ ಹೇಳಿ, ಅಂದರೆ' 'ಹೇಳಿದೆನಲ್ಲೆ, ಆಗಲೆ! ಸುಖವಾಗಿದಾನೆ..ನಮಗೆ ತಿಂಗಳಿಗೆ ತನ್ನ ಸಂಬಳದಿಂದ ೩೦ ರೂಪಾಯಿ ಕಳುಹಿಸುತ್ತಾನಂತೆ....' '೩೦ ರೂಪಾಯಿ! ಅಷ್ಟು ನಮಗೆ ಕಳುಹಿಸಿದರೆ, ಅವನಿಗೆಷ್ಟು ಉಳಿಯುತ್ತದೋ, ಪಾಪ!' 'ಪೋಸ್ಟ್‌ಮ್ಯಾನ್ ಮಣಿ ಆರ್ಡರ್ ಬಂದಿದೆಯೋ?'

'ಬಂದಿದೆ, ನೀವು ಕಾಗದ ಓದಿ ಮುಗಿಸಿ, ಆಮೇಲೆ ಕೊಡುತ್ತೇನೆ.. ಅಂತು ಹತ್ತು ಹೆತ್ತರೂ ಒಂದು ಮುತ್ತು ಹೆರಬೇಕು ಅಂತಾರಲ್ಲಾ, ಹಾಗೆ ಸ್ವಾಮಿ, ನಿಮ್ಮ ಹನುಮಂತರಾಯ' ಎಂದ ಟಪಾಲಿನವನು....ಶೀನ.. ..'ಬೆಳ್ಳಿ ರೂಪಾಯಿ ೩೦; ರೂಪಾಯಿ ಬೆಳ್ಳಿ ಚೆನ್ನಿಲ್ಲ....ಲೋ, ಅಪ್ಪಟ ಬೆಳ್ಳಿಯಲ್ಲೇ ರೂಪಾಯಿ ಮಾಡು, ಗೊತ್ತಾಯಿತೆ?' ಎಂದು ಕಿರಿಚಿದ.

ಆನಂದರಾಯರು ಮುಂದಕ್ಕೆ ಓದುತ್ತಾ 'ಭೀಮರಾಯರೇ! ಕೇಳಿ ಇದನ್ನ......'ನನ್ನ ಮನಸ್ಸಾಕ್ಷಿ ನನಗೆ ಹೇಳುವುದೇನೆಂದರೆ, ನನಗೂ ಭೀಮರಾಯರ ಮಗಳಿಗೂ ವಿವಾಹವೇ ನಡೆದಿಲ್ಲ, ಆ ದಿನ ಭಾಷಿಂಗ ಬದಲಾವಣೆ ಮಾತ್ರವಲ್ಲ, ಇನ್ನೂ ಮಹತ್ತರವಾದ ಅನ್ಯಾಯಗಳು ನಡೆದಿರಬೇಕೆಂದು ನನಗೆ ಅನ್ನಿಸುತ್ತದೆ....ತಮ್ಮ ಮಗಳನ್ನು ಬೇರೆ ಯಾರಿಗಾದರೂ ಕೊಟ್ಟು ಅವರು ಮದುವೆ ಮಾಡಬಹುದು....ನನ್ನ ಅಭ್ಯಂತರವೇನೂ ಇಲ್ಲ.... ಅವರ ಮಗಳಿಗೆ ನನ್ನ ಅನಂತಾನಂತ ಆಶೀರ್ವಾದಗಳು!......'ಪೋಸ್ಟ್‌ಮ್ಯಾನ್! ಪಾರ್ಸಲ್ ಬಂದಿದೆಯೋ?....'

'ಬಂದಿದೆ; ಕಾಗದ ಓದಿ ಮುಗಿಸಿ..ಆಮೇಲೆ ಕೊಡುತ್ತೇನೆ....'

'ಅವನು ಧರ್ಮಾವರಕ್ಕೆ ಹೋಗಿದ್ದನಂತೆ..ಅಲ್ಲಿ ಅಮ್ಮನಿಗೊಂದು ಸೀರೆ..ಪಾರ್ಸಲ್‌ನಲ್ಲಿ ಸೀರೆಯೇನು?'

'ಇರಬೇಕು....ತೆಗಿದುಕೊಳ್ಳಿ....ಇಲ್ಲ ಒಂಪು ರುಜು ಹಾಕಿ' ಎಂದು ಟಪಾಲಿನವನು ಪಾರ್ಸಲನ್ನು ಸುಂದರಮ್ಮನವರ ಪಕ್ಕದಲ್ಲಿರಿಸಿದ.. ಅವರು ಕೊಂಚ ದೂರ ಸರಿದರು..'ನನಗೆ ಬೇಡ ಅಪ್ಪ ಅದು,ಅದನ್ನ ನಾನು ತುಂಗಾವತಿ ಅಮ್ಮನಿಗೆ ಉಡಿಸುತ್ತೇನೆ......ಅವನು ಎಲ್ಲಾದರೂ ಗಟ್ಟಿ ಮುಟ್ಟಾಗಿ ಓಡಾಡಿಕೊಂಡು ಹಾಯಾಗಿರಲಿ! ನನಗೆ ಏನಾದರೂ ಅಂತಹ ಖಾಯಿಲೆ ಕಸಾಲೆ ಬಂದರೆ ನೀವು ಒಂದು ಕಾಗದ ಹಾಕಿ, ಇನ್ನುಮೇಲೆ ಇತ್ತ ಕಡೆಗೆ ಇಲ್ಲ, ಅಂತ....ಆಗ ಅವನು ಬಂದು ನನ್ನ ಹಾಸಿಗೆ ಹತ್ತಿರ ನಿಂತರೆ, ಸಾಕು ನನಗೆ!' ಎಂದು ಗದ್ಗದಿಸಿದರು.

ಆನಂದರಾಯರು ಕಾಗದವನ್ನು ಓದುತ್ತಾ, 'ಇನ್ನೊಂದು ಪಾರ್ಸಲ್ ಇದೆಯೇ?' ಅಂದರು. 'ಇದೆ; ಕೊಡುತ್ತೇನೆ......ನೀವು ಕಾಗದ ಓದಿ ಮುಗಿಸಿ! ಆಮೇಲಾಗಲಿ!' ಎಂದ ಪೋಸ್ಟ್‌ಮ್ಯಾನ್. ಆನಂದರಾಯರು ಕಾಗದವನ್ನು ಓದಿದರು—'ಇನ್ನೊಂದು ಪಾರ್ಸಲ್‌ನಲ್ಲಿ ನನ್ನ ಕೆಲಸದ ಜಾಣ್ಮೆಗೆ ಮೆಚ್ಚಿ....' ಆಗ ಸುಂದರಮ್ಮನವರು 'ಯಾವ ಕೆಲಸವಂತೆ?' ಎಂದು ಕೇಳಿದರು. 'ಅದನ್ನು ಮಾತ್ರ ಬರೆದಿಲ್ಲ' ಎಂದು ಆಕೆಗೆ ಉತ್ತರ ಹೇಳುತ್ತಾ ಆನಂದರಾಯರು, 'ನನ್ನ ಕೆಲಸಕ್ಕೆ ಮೆಚ್ಚಿ ಸನ್ಮಾನಿಸಿದ ಕೆಲವು ಬಹುಮಾನಗಳನ್ನು ಮನೆಗೆ ಕಳುಹಿಸಿದ್ದೇನೆ..........ತಿಂಗಳಿಗೆರಡು ಮೂರಾದರೂ ಇಂತಹವು ನನಗೆ ಲಭಿಸುತ್ತವೆ......ಮನೆಯಲ್ಲಿ ಗಂಧ, ಕುಂಕುಮ, ಅರಸಿನ, ಇಟ್ಟುಕೊಳ್ಳುವುದಕ್ಕಾಗುತ್ತದೆ,....ಬೆಳ್ಳಿ ಕಪ್ಪುಗಳು' ಎಂದು ಓದಿದರು.

ಇದ್ದಕ್ಕಿದ್ದ ಹಾಗೆ ಶೀನ ತನ್ನ ಜಾಗದಿಂದ ನೆಲಕ್ಕೆ ಧುಮುಕಿ, ಪೋಸ್ಟ್‌ಮ್ಯಾನ ಹತ್ತಿರಕ್ಕೆ ಬಂದು, 'ಬೆಳ್ಳಿಕಪ್ಪು!' ಎಂದು ಕೂಗಾಡಿದ. ಅವನ ಕಣ್ಣುಗಳು ವಿಪರೀತವಾಗಿ ಅರಳಿದುವು. ಕೈಕಾಲು ನಡುಗಿದುವು. ಟಪಾಲಿನವನಿಂದ ಪಾರ್ಸಲನ್ನು ಕಿತ್ತುಕೊಂಡು, ಒಡೆದು ನೋಡಿ ಐದು ಕಪ್ಪುಗಳು ಇದ್ದದ್ದನ್ನು ಕಂಡು, ಒಂದು ಎರಡು ಮೂರು ನಾಲ್ಕು ಐದು ಎಂದು ಎಣಿಸುತ್ತಾ ಹಿಗ್ಗಿ, ಕುಣಿದಾಡಿ ಕಡೆಗೆ ಅವುಗಳನ್ನು ಬಾಚಿ ತಬ್ಬಿಕೊಂಡು ಬಸ್ಸು ಹತ್ತಿ ಕುಳಿತ......ಮೈ ನಡುಕ ನಿಂತಿತು. ಕಣ್ಣುಗಳು ಶಾಂತವಾದುವು......

ಎಲ್ಲರೂ ಶೀನನನ್ನೇ ಕನಿಕರದಿಂದ ನೋಡುತ್ತಿದ್ದರು......ಕಡೆಗೆ ಆನಂದರಾಯರು, ಶೀನನಿಗೆ ಕೇಳಿಸುವಂತೆ, ಭೀಮರಾಯರನ್ನು ಕರೆದು, 'ನಾನು ಹಿಂದೆ ಶೀನನನ್ನು ಹಾಸ್ಟಲಿಂದ ಬಿಡಿಸಿದಾಗ, ಅವನಿಗೆ, ಕಾಲೇಜಲ್ಲಿ ಬಂದಿದ್ದ ಐದು ಬೆಳ್ಳಿ ಕಪ್ಪುಗಳನ್ನು ಅಂಗಡಿಗೆ ತೆಗಿದುಕೊಂಡು ಮಾರಿ ಬಿಟ್ಟಿದ್ದೆ. ಪಾಪ ಅವನಿಗೆ ಅದರಿಂದ ತುಂಬಾ ಮನೋವ್ಯಥೆಯಾಗಿರಬೇಕು.......ಲೋ, ಶೀನಾ, ಆ ಐದು ಕಪ್ಪುಗಳನ್ನೂ ನೀನೆ ತೆಗಿದುಕೊಳ್ಳೋ.. ನಮಗೆ ಬೇಡಲೇ ಬೇಡ....ಗೊತ್ತಾಯಿತೋ, ಶೀನಾ?....' ಎಂದರು.

ಶೀನ ಕೊಂಚ ಹೊತ್ತು ಸುಮ್ಮನಿದ್ದ......ಅವನ ಮೆದುಳು ತಿಳಿಯಾಯಿತು........ಹುಚ್ಚು ಬಿಟ್ಟಿತು........ಮುಖ ಶಾಂತವಾಯಿತು........ ಬಸ್ಸಿನಲ್ಲಿದ್ದವರೆಲ್ಲರೂ ಹರ್ಷಚಿತ್ತರಾದರು....ಭೀಮರಾಯರು ಆಂಜನೇಯನಿಗೆ ಸಾವಿರ ಬಾಳೇಹಣ್ಣು ನೈವೇದ್ಯ ಮಾಡುತ್ತೇನೆ ಅಂತ ಮನದಲ್ಲೇ ಮಾತು ಕೊಟ್ಟರು.

'ಇಷ್ಟಾರ್ಟ್ ಮಾಡೋಣವೇ ಸಾರ್?'

'ಬಿಡು! ಬಿಡು! ಒಳ್ಳೆ ಶಕುನ.'

—

## ಹದಿನಾರನೆಯ ಅಧ್ಯಾಯ

### ಮೂಗುದಾರದ ಮಹಿಮೆ

●

ಬಿಟ್ಟುದಂ ಬಿಟ್ಟಪೆಂ
ಪಿಡಿದುದಂ ಪಿಡಿದಪೆಂ — **ಹರಿಹರ**

ಹೋದುದೆಲ್ಲ ಹೋದುದೈ
ಹೊಸದು ಬಾಳು ನಮ್ಮದೈ — **ಪು. ತಿ. ನ.**

●

ತುಂಗಾವತಿಯಿಂದ ಹಿಂತಿರುಗಿದ ಕೂಡಲೇ ಹನುಮಂತನಿಗೆ ಶೀನ ಎಲ್ಲಾ ಸಮಾಚಾರಗಳನ್ನೂ ವಿಶದವಾಗಿ ಬರೆದು ಒಂದು ಪತ್ರ ಕಳುಹಿಸಿದ. ಅದರಲ್ಲಿ ಸುಂದರಮ್ಮನವರ ಹೇಳಿಕೆಯ ಮೇರೆಗೆ ತಿಂಗಳಿಗೊಂದು ಸಲವಾದರೂ ಎಣ್ಣೆ ನೀರು ಹಾಕಿಕೊ, ಖಾರ ಹೆಚ್ಚಾಗಿ ಉಪಯೋಗಿಸಬೇಡ, ಸೊಳ್ಳೆಪರದೆ ಕಟ್ಟಿಕೊ, ಬೆಳಗ್ಗೆ ಬರಿ ಹೊಟ್ಟೆಯಲ್ಲಿ ಕಾಫಿ ಕುಡಿಯಬೇಡ, ಎಂದು ಮುಂತಾಗಿ ಶೀನ ಬರೆದಿದ್ದ. ಕೊಂಚ ತುಂಗಾವತಮ್ಮನ ಪ್ರಸಾದವನ್ನೂ ಲಕ್ಕೋಟೆಯಲ್ಲಿಟ್ಟಿದ್ದ....ಸ್ಟ್ಯಾಂಪು ಹಚ್ಚಿ ಪೋಸ್ಟ್ ಮಾಸ್ಟರ್ ಮೂಲಕ ಹನುಮಂತನಿಗೆ ತಲಪಿಸತಕ್ಕದ್ದು ಎಂದು ಬರೆದು ಹೈದರಾಬಾದಿಗೆ ಕಳುಹಿಸಿದ......ಆದರೆ, ಹನುಮಂತ ತನ್ನ ಹೆಸರನ್ನ ಹೊಸೂರು ಹಿರಿಯಣ್ಣ ಅಂತ ಬದಲಾಯಿಸಿಕೊಂಡಿದ್ದದ್ದು ಅವನಿಗೇನು ಗೊತ್ತು? ಅಲ್ಲದೆ, ಹೈದರಾಬಾದಿನ ಪೋಸ್ಟ್‌ಮಾಸ್ಟರಿಗೆ ಊರಲ್ಲೆಲ್ಲಾ ಹುಡುಕಿ ಹನುಮಂತನನ್ನು ಪತ್ತೆಹಚ್ಚಲು ಏನು ಉತ್ಸಾಹ? ಹೇಗೆ ಸಾಧ್ಯ?....

ಎರಡು ತಿಂಗಳ ನಂತರ ಇಡೀ ಲಕ್ಕೋಟೆ ' ಸತ್ತ ಕಾಗದದ ಆಫೀಸ್ 'ನಿಂದ ಹೊರಕ್ಕೆ ಬಂತು. ಅದು ಬಂದಾಗ, ಟಪಾಲಿನವನು ಎಲ್ಲಿಂದ ಬಂತು ಎಂಬು ದನ್ನ ಸುಂದರಮ್ಮನವರಿಗೆ ತಿಳಿಸಿಬಿಟ್ಟ. ಆಕೆ, ಹಾ, ಎಂದು ಕೂಗಿಕೊಂಡರು; ಮೂರ್ಛೆಹೋದರು . .

ಹನುಮಂತನಿಗೆ ಪತ್ರ ಬರೆದರೆ ಇದಿಷ್ಟೇ ಪ್ರಯೋಜನ ಅಂತ ಹೆದರಿ, ಅವನ ಮನೆಯವರೆಲ್ಲರೂ ಸುಮ್ಮನಾದರು. ತನಗೆ ಎಲ್ಲಾದರೂ ಒಂದು ಚಾಕರಿ ಕೊಡಿಸು ಅಂತ ಮೃತ್ಯು ಬರೆದ ಕಾಗದ ಕೂಡ ಸತ್ತು ವಾಪಸ್ಸು ಬಂತು . .

ಹನುಮಂತ ಮಾತ್ರ ಕರಡಿ ಚರ್ಮ ಹೊದ್ದುಕೊಂಡು, ಹಿಂದೂಸ್ತಾನದ ನಾನಾ ನಗರಗಳಲ್ಲಿ, ಪರಿಷ್ಕಾರವಾಗಿ, ಪುಷ್ಕಳವಾಗಿ, ನೀಳವಾಗಿ, ಆಳವಾಗಿ, ಕಿರಿಚುತ್ತಿದ್ದ ! . . . .

ಅನೇಕ ವೇಳೆ ಅವನಿಗೆ, ' ನಾನು ಯಾರು ಎಂಬುದನ್ನೂ ಕೂಡ ಈ ಜನಕ್ಕೆ ತಿಳಿಸಬೇಡವೇ ನಾನು ? ನಾನೊಬ್ಬ ಮೃಗ ಅಂತ ಭಾವಿಸುತ್ತಿದಾರಲ್ಲಾ ? ' ಎಂದು ವ್ಯಥೆಯಾಗುವುದು . . . . ಸರ್ಕಸ್ ಸಹವಾಸ ಬಿಟ್ಟು-ಬಿಡೋಣವೆನಿಸುವುದು . . . . ಆಳಾಗಿ ಸಂಪಾದಿಸಬೇಕು, ಮನುಷ್ಯನಾಗಿ ಮೆರೆಯಬೇಕು, ಎನಿಸುವುದು . . . . .

ಆದರೆ, ಬರಬರುತ್ತಾ ಹನುಮಂತನಿಗೆ ಸರ್ಕಸ್ ಗುಂಪಿನಲ್ಲೇ ಇರ-ಬೇಕೆಂಬ ಹಂಬಲು ಬಲವಾಯಿತು . . . . ಕೊನೆಯದಾಗಿ ಒಂದು ಗುಟ್ಟಿನ ಸಮಾಚಾರ ! . . . .

ಪ್ರೊ. ಪಶುಪತಿ ಅವರ ಸರ್ಕಸ್ ಕೆಲಸಗಾರರ ಗುಂಪಿನಲ್ಲಿ ಹನು-ಮಂತನಿಗೆ ಸದ್ಯದಲ್ಲೇ ಮದುವೆ ಆಗಬಹುದೆಂಬ ಗುಜುಗುಜು ಎದ್ದಿದೆ. ಮಿಸ್ಟರ್ ಚಬುಕು ಮೊದಲಾದ ಅಧಿಕಾರಿಗಳೆಲ್ಲರೂ ಹನುಮಂತನ ಮದುವೆಯ ವಿಷಯದಲ್ಲಿ ತುಂಬಾ ಕಾತುರರಾಗಿದಾರೆ. ಸರ್ಕಸ್‌ನಲ್ಲಿ ಭಾಗ ವಹಿಸುವವರೆಲ್ಲರೂ ತಮ್ಮತಮ್ಮೊಳಗೆ ಮದುವೆಯಾದರೆ ಅನುಕೂಲ; ಒಟ್ಟು ಎಲ್ಲರೂ ಒಂದು ಕುಟುಂಬವಾಗುತ್ತೇವೆ; ಒಗ್ಗಟ್ಟು, ಶಾಂತಿ ಮೊದಲಾದುವು ನೆಲೆಸುತ್ತದೆ, ಎಂದು ಅವರು ತಮ್ಮ ಕೈಕೆಳಗೆ ಕೆಲಸ ಮಾಡುವವರೆಲ್ಲರಿಗೂ ಹೇಳುತ್ತಿದ್ದರು . . . .

ಪ್ರೊ. ಪಶುಪತಿ ಅವರು, 'ಸರಿ! ನಿಮ್ಮ ಯೋಚನೆ ಚೆನ್ನಾಗಿದೆ; ನಮ್ಮ ಜನ ನಮ್ಮ ಜನವನ್ನೇ ಮದುವೆ ಮಾಡಿಕೊಳ್ಳುವುದೇ ನ್ಯಾಯ. ನಾವೆಲ್ಲರೂ ಸರ್ಕಸ್ ಜಾತಿಗೆ ಸೇರಿದವರು!........ಅದೂ ಅಲ್ಲದೆ, ಅವಳು ಆಗಲೇ ನಿಮಗೆ ಮೂಗುದಾರ ಹಾಕಿ ನಿಮ್ಮನ್ನ ಎಳೆಯುತ್ತಿದಾಳೆ! ...... ಕತ್ತೆ-ಕರಡಿಗೂ ಆಂಗ್ಲೋ-ಇಂಡಿಯನಿಗೂ ವಿವಾಹ ಅಂದರೆ ಸೋಜಿಗವೇ ಸರಿ...............' ಎಂದು ಮುಂತಾಗಿ ಹನುಮಂತನನ್ನ ಹಾಸ್ಯಮಾಡುತ್ತಿದಾರೆ........ದೇವರೇ ಗತಿ!

ದೀಪದ ಹತ್ತಿರದ ಪತಂಗ.......ಹಳ್ಳ ಬಳಸುವ ಕುರುಡ....... ....

—